ನೆಮ್ಮದಿಯ ನಾಳೆ ನಮ್ಮದು

# ಹೊಸತು

ಮೇ ೨೦೦೯

ಬೆಲೆ : ರೂ. ೧೨




೧೦ನೇ ವರ್ಷ

राष्ट्रीय ग्रामीण आरोग्य अभियान
राष्ट्रीय ग्रामीण स्वास्थ्य मिशन
(2005-2012)

# ಭ್ರೂಣಲಿಂಗ ಪತ್ತೆ ಕಾನೂನುಬಾಹಿರ

ಕರ್ನಾಟಕ ಸರ್ಕಾರ



ಮಹಿಳೆ-ಪುರುಷರ ಅನುಪಾತದಲ್ಲಿ ಸಮಾನತೆ ಕಾಪಾಡುವ ಉದ್ದೇಶದಿಂದ ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆ - 1994ನ್ನು ಜಾರಿಗೆ ತರಲಾಗಿದೆ.

## ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಾದಲ್ಲಿ ಉಂಟಾಗುವ ದುಷ್ಪರಿಣಾಮಗಳು

- ಮಹಿಳೆಯರ ಮೇಲಿನ ಅತ್ಯಾಚಾರ ಹೆಚ್ಚಾಗುತ್ತದೆ.
- ವಿವಾಹ ವಿಚ್ಛೇದನಗಳು ಹೆಚ್ಚಾಗುತ್ತವೆ.
- ಲೈಂಗಿಕ ರೋಗಗಳು ಹೆಚ್ಚಾಗುತ್ತವೆ.
- ಕುಟುಂಬ ವ್ಯವಸ್ಥೆ ಹದಗೆಡುತ್ತದೆ.
- ಗಂಡುಮಕ್ಕಳಿಗೆ ವಧುಗಳ ಕೊರತೆ ಉಂಟಾಗುತ್ತದೆ.
- ಸಾಮಾಜಿಕ ಅಭದ್ರತೆಯಿಂದ ಅಪರಾಧಿಗಳಾಗುತ್ತಾರೆ.

## ಶಿಕ್ಷೆ

- ಭ್ರೂಣಲಿಂಗ ಪತ್ತೆ ಮಾಡುವುದು ಅಪರಾಧ.
- ಮೊದಲನೇ ಅಪರಾಧಕ್ಕೆ ರೂ. 50,000/- ಮತ್ತು 3 ವರ್ಷಗಳವರೆಗೆ ಜೈಲು ಶಿಕ್ಷೆ ಹಾಗೂ ನಂತರದ ಅಪರಾಧಗಳಿಗೆ ರೂ. 1,00,000/- ದಂಡ ಮತ್ತು 5 ವರ್ಷಗಳವರೆಗೆ ಜೈಲು ಶಿಕ್ಷೆ.
- ಕುಟುಂಬದ ಯಾವುದೇ ಸದಸ್ಯರಾಗಲಿ, ಗರ್ಭಿಣಿ ಸ್ತ್ರೀಯಾಗಲಿ ಭ್ರೂಣಲಿಂಗ ಪತ್ತೆಗೆ ಒತ್ತಾಯಿಸಿದಲ್ಲಿ ಅವರೂ ಕೂಡಾ ಶಿಕ್ಷೆಗೆ ಅರ್ಹರಾಗುತ್ತಾರೆ.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಹೆಣ್ಣು ತಾಯಿಯಾಗಿ ಬೇಕು, ಪತ್ನಿಯಾಗಿ ಬೇಕು, ಸಹೋದರಿಯಾಗಿ ಬೇಕು, ಮಗಳಾಗಿ ಬೇಡವೇ ?**

ಪ್ರಕಟಣೆ : ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು

ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಶ್ರೀಹರಿ, ವೆಂಕಟ್, ಮೋನಪ್ಪ, ಎನ್. ಆರ್. ಬೊಮ್ಮಳ್ಳಿ, ಜಿ. ಎಂ. ಬೊಮ್ಮಳ್ಳಿ

ಮುಖಚಿತ್ರ : ಸಂಸತ್ ಭವನ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಏಪ್ರಿಲ್ ೧ರಿಂದ ೩ರವರೆಗೆ ಶ್ರೀ ರಾಮದೇವ್ ಅವರ ಪತಂಜಲಿ ಯೋಗಪೀಠವು ಕೋಟಿಗಟ್ಟಲೆ ಖರ್ಚು ಮಾಡಿ ದೊಡ್ಡ ಸಮಾವೇಶವೊಂದನ್ನು ನಡೆಸಿತು. ಅದಿರುವುದು ಹರದ್ವಾರದ ಬಳಿಯ ಮಹರ್ಷಿ ದಯಾನಂದ ಗ್ರಾಮದಲ್ಲಿ. ಸುತ್ತೂರು ದೇಶಿಕೇಂದ್ರ ಸ್ವಾಮಿಗಳು ಮತ್ತು ದಲೈಲಾಮಾ ಸೇರಿದಂತೆ ನೂರಾರು ಸ್ವಾಮಿಗಳು, ಸಾಧುಗಳು, ಸಂತರು ಸಮಾವೇಶದಲ್ಲಿ ಪಾಲ್ಗೊಂಡಿದ್ದರು. ಅದಕ್ಕೆ ಮುನ್ನ 'ವೇದ-ಯಜ್ಞ' ಸುಮಾರು ಒಂದು ತಿಂಗಳ ಕಾಲ ನಡೆದಿದ್ದಿತು. ನಾಲ್ಕು ವೇದಗಳ ಮಂತ್ರಗಳನ್ನು ಪಠಿಸುತ್ತಾ ಅಗ್ನಿಕುಂಡಕ್ಕೆ ತುಪ್ಪ ಮುಂತಾದುವನ್ನು ಹಾಕುವುದು ರಾಮದೇವ್‌ರ ಕಲ್ಪನೆಯಲ್ಲಿ 'ವೇದ-ಯಜ್ಞ' ಎನಿಸಿಕೊಳ್ಳುತ್ತದೆ. ಯಜ್ಞ ಮಾಡುವ ಋತ್ವಿಕ್ಕುಗಳ ಅಸಾಧಾರಣ ಪಾಂಡಿತ್ಯಕ್ಕೆ ಒಂದು ಉದಾಹರಣೆ ಸಾಕು : 'ಸ್ವಾಹಾ' ಎಂದರೇನು ಎಂಬುದರ ವ್ಯಾಖ್ಯಾನ ನಡೆದಿತ್ತು, ಅದನ್ನು ಕೇಳಿ, ಇನ್ನು ಮುಂದೆ ಏನನ್ನೂ ಕೇಳಿಸಿಕೊಳ್ಳಬೇಕಿಲ್ಲವೆಂಬ ತೀರ್ಮಾನವು ಅನಿವಾರ್ಯವಾಯಿತು. ವ್ಯಾಖ್ಯಾನದ ಸಾರಾಂಶ ಇದು : ''ನೀವೀಗ ಯಜ್ಞಶಾಲೆಯಲ್ಲಿ ಕುಳಿತಿದ್ದೀರಿ. ನಾಲ್ಕಾರು ಗಂಟೆಗಳಿಂದ ಕುಳಿತಿರುವಿರಿ. ನಿಮಗೆ ಸುಸ್ತಾಗಿದೆ, ಬೇಸರವೂ ಬಂದಿರಬಹುದು. ಎಲ್ಲಾ ಮುಗಿದನಂತರ ಪ್ರಸಾದ ಸಿಗುತ್ತದಲ್ಲಾ, ಅದಕ್ಕೆ ಕಾದಿರುತ್ತೀರಿ. ಇಲ್ಲಿಂದ ಎದ್ದು ಹೋದಾಗ ಬಾಗಿಲ ಬಳಿ ಲಾಡು ಕೊಡುತ್ತಾರೆ. ಬಿಡುಗಡೆಯ ನಂತರ ಸಿಹಿ: ಎಂಥಾ ಸಂತೋಷ. ಅದನ್ನು ಬಾಯಿಗೆ ಹಾಕಿಕೊಂಡು 'ಆಹಾ' ಎನ್ನುತ್ತೀರಲ್ಲವೆ ? ಹಾಗೆ ದೇವತೆಗಳು ನಮ್ಮ ಹವನದಿಂದ ತೃಪ್ತಿಗೊಂಡು 'ಸ್ವಾಹಾ' ಎನ್ನುತ್ತಾರೆ. ಅದೇ 'ಸ್ವಾಹಾ' ಶಬ್ದದ ಗೂಢಾರ್ಥ.'' ಇದರಲ್ಲಿ ಗೂಢವಾದ್ದೇನೂ ಇಲ್ಲ, ಇದ್ದರೆ ಸ್ವಲ್ಪ ಗೊಡ್ಡುತನ ಇದೆ, ಅಷ್ಟೆ. ಇಂಥದನ್ನು ಕೇಳಲು ಭಕ್ತರು ಮತ್ತು 'ಯೋಗಿ'ಗಳು ಸಹಸ್ರ ಸಂಖ್ಯೆಯಲ್ಲಿ ಸೇರುತ್ತಾರೆ.

ಮೂರು ದಿನಗಳ ಸಮಾವೇಶದ ಉದ್ದೇಶ ಘನವಾದುದು : ಸ್ವಾಮಿ ರಾಮದೇವ್ ಅವರು ನಮ್ಮ ದೇಶದ ವಿದ್ಯಮಾನಗಳನ್ನು ಕಂಡು ರೋಸಿಹೋಗಿದ್ದಾರೆ; ಅದಕ್ಕೆ ಕಾಯಕಲ್ಪ ಮಾಡಲು ನಿರ್ಧರಿಸಿದ್ದಾರೆ. ಅದನ್ನು ಪ್ರಕಟಿಸಲು ಈ ಸಮಾವೇಶ : ''ಪತಂಜಲಿ ಯೋಗಪೀಠದ ಎರಡನೆ ಹಂತದ ಕಾರ್ಯಕ್ರಮಗಳ ಉದ್ಘಾಟನೆ,'' ಮೊದಲನೆಯ ಹಂತದ್ದು ಸಿದ್ಧಿಸಿದೆ. ಹರಿದ್ವಾರದ ಸಾಮಾನ್ಯ ಮಠದಿಂದ ಸ್ವಾಮಿಗಳು ಈಗ ಪತಂಜಲಿ ಯೋಗಪೀಠದ ಬೃಹತ್ ಕಟ್ಟಡಗಳಲ್ಲಿ ನೆಲೆಸುವ ಸೌಭಾಗ್ಯ ಸಂಪಾದಿಸಿಕೊಂಡಿದ್ದಾರೆ. ಅವರ ಆಸ್ತಿಯ ಬೆಲೆ ಎರಡು-ಮೂರು ಸಾವಿರ ಕೋಟಿಗಳಷ್ಟಿರಬಹುದು. ಯೋಗಪೀಠ, ಆಸ್ಪತ್ರೆ, ಕ್ಯಾಂಟೀನು, ವಸತಿ ಗೃಹಗಳು, ಪ್ರಯೋಗಶಾಲೆಗಳು, ಪಂಚಕರ್ಮಕ್ಕೆ ಅಗತ್ಯವಾದ ಸೌಲಭ್ಯ, ಗೋಶಾಲೆ, ಸಸ್ಯಕಾಶಿ, ವಿಶ್ವವಿದ್ಯಾನಿಲಯ, ವಾಹನಗಳು ಮತ್ತು ಇನ್ನೂ ಏನೇನೋ ! ''ಒಂದು ದಿನ ಇದ್ದಕ್ಕಿದ್ದಂತೆ ಒಂದು ವಿಶ್ವವಿದ್ಯಾಲಯವನ್ನು ಘೋಷಿಸಿ ಸ್ಥಾಪಿಸಿಬಿಟ್ಟರು. ಅಂತಹ ಉಜ್ವಲ ಶಕ್ತಿ ಅವರದು'' ಎಂದು ರಾಮದೇವ್‌ರ ಭಕ್ತರೊಬ್ಬರು ಹೇಳಿದರು. ಪಕ್ಕದಲ್ಲೇ ಉತ್ತರಾಖಂಡ ರಾಜ್ಯ ಸರ್ಕಾರವು ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು, ಕಾಣಲು ಸುಂದರವಾದ ಎರಡು ದೊಡ್ಡ ಕಟ್ಟಡಗಳನ್ನು ನಿರ್ಮಿಸಿದೆ. ಆದರೆ ಇನ್ನೂ ಕೆಲಸ ಆರಂಭವಾಗಿಲ್ಲ. ಆದರೆ ರಾಮದೇವ್ ಅವರು ಆ ಸಂಸ್ಕೃತ ವಿಶ್ವವಿದ್ಯಾಲಯದೊಡನೆ ಜಂಟಿ ಸಂಶೋಧನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದಾಗಿ ಪ್ರಕಟಿಸಿದ್ದಾರೆ.

ಸಮಾವೇಶದ ಉದ್ದೇಶವು ಎರಡನೆಯ ಹಂತದ ಕಾರ್ಯಕ್ರಮದ ಆರಂಭದ ಘೋಷಣೆ. ಏನದು ? ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಅದು ಜೆ.ಪಿ. (ಎರಡನೆಯ ಸ್ವಾತಂತ್ರ್ಯ) ಚಳುವಳಿಯ ಮುಂದುವರಿದ ಭಾಗ. ರಾಮದೇವ್ ಕೇಂದ್ರ ಸರ್ಕಾರಕ್ಕೆ ಮೂರು-ನಾಲ್ಕು ವರ್ಷಗಳ ಗಡುವು ಕೊಟ್ಟಿದ್ದಾರೆ. ಅಷ್ಟರಲ್ಲಿ ಸರ್ಕಾರವು ಭ್ರಷ್ಟಾಚಾರ ಮುಂತಾದ ಪಿಡುಗುಗಳನ್ನು ನಿರ್ಮೂಲನ ಮಾಡಿ ದೇಶದ ಸ್ವಾಭಿಮಾನವನ್ನು ಎತ್ತಿಹಿಡಿಯದಿದ್ದರೆ ರಾಮದೇವ್ ಅವರು ಐದನೆಯ ವರ್ಷದ ಆರಂಭದಲ್ಲಿ ಸ್ವತಃ ರಾಜಕೀಯವನ್ನು ಪ್ರವೇಶಿಸಿ ಎಲ್ಲವನ್ನೂ ಹಸನುಗೊಳಿಸುತ್ತಾರೆ ! ಅಂದರೆ, ಅವರು ಈಗಿನ್ನೂ ರಾಜಕೀಯ ರಂಗದಲ್ಲಿ ಪಾದಾರ್ಪಣ ಮಾಡಿಲ್ಲವೆಂದು ಭಾವಿಸಬೇಕೆಂದು ನಿರೀಕ್ಷಿಸುತ್ತಾರೆ. ಸುದರ್ಶನ್-ರಾಜನಾಥ ಸಿಂಗ್ ಅವರ ರಾಜಕೀಯದಲ್ಲಿ ಸ್ವಾಮಿ ರಾಮದೇವ್ ಕೂಡಿಕೊಂಡು ಕೆಲವು ವರ್ಷಗಳೇ ಕಳೆದಿವೆ. ಆದರೆ ಇನ್ನೂ ಮುಂದೆಂದೋ ರಾಜಕೀಯವನ್ನು ನೇರವಾಗಿ ಪ್ರವೇಶಿಸುತ್ತಾರಂತೆ ! ''ನಮ್ಮದು ಸಂಸ್ಕೃತಿ ಪ್ರಚಾರ ಮಾಡುವ ಸಂಘ; ನಮಗೂ ರಾಜಕೀಯಕ್ಕೂ ಸಂಬಂಧವಿಲ್ಲ'' ಎಂದು ಹೇಳುತ್ತಲೇ ಮಾನ್ಯ ಎಂ. ಎಸ್. ಗೋಲ್ವಾಲಕರ್ ಅವರು ದೀನದಯಾಳ್

(೭ನೇ ಪುಟಕ್ಕೆ)




ಸಂಪುಟ-೧೦ ಸಂಚಿಕೆ-೧೦ ಮೇ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯ ಫ್ಯಾಕ್ಸ್ : ೩೦೫೭೮೦೨೩

**e-mail : navakarnataka@dataone.in**
**hosathu@gmail.com**
**website : www.navakarnataka.com**
**http://hosathumonthly.blogspot.com**
**http://navakarnataka.blogspot.com**

# ಮೇ ದಿನ ಮರಳಿ ಬರುತ್ತಿದೆ

**ಸಂಪಾದಕೀಯ**

**ಲೋ**ಕಸಭಾ ಚುನಾವಣೆಯ ಪ್ರಕ್ರಿಯೆ ಆರಂಭವಾಗಿದೆ. ಪ್ರಪಂಚದ ಯಾವ ದೇಶದಲ್ಲೂ ಇಲ್ಲದ ಪದ್ಧತಿ ನಮ್ಮದು. ಅದಕ್ಕೆಂದೇ ಅದನ್ನು ಒಂದು ತಿಂಗಳ ಕಾಲ ನಡೆಸಹೊರಟಿದ್ದೇವೆ. ಅದರಿಂದ ಚುನಾವಣೆಯು ಶಾಂತವಾಗಿ, ವಸ್ತುನಿಷ್ಠವಾಗಿ ನಡೆಯುತ್ತಿದೆಯೆಂದು ಭಾವಿಸುವವರಿದ್ದಾರೆ. ಜೀವನದಲ್ಲಿ ಆಮಿಷಗಳು ನೂರಾರು. ಅವಕ್ಕೆ ಬಲಿಯಾಗುವವರೂ ಉಂಟು, ಅದರಿಂದ ವಿಚಲಿತರಾಗದವರೂ ಉಂಟು. ಜನರ ಮನಸ್ಸು ನಿಜವಾಗಿಯೂ ಯಾರನ್ನು ಒಲಿದಿದೆ ಎಂಬ ಪ್ರಶ್ನೆ ಯಾವ ಚುನಾವಣೆಯಲ್ಲೂ ನಿಸ್ಸಂದಿಗ್ಧವಾದ ಉತ್ತರವನ್ನು ಪಡೆದಿಲ್ಲ. ಏಕೆಂದರೆ, ಹೇಗೆ ನೋಡಿದರೂ ಯಾವುದೋ ಆಮಿಷ ಕೆಲಸ ಮಾಡಿರಬಹುದಾದ ಸಾಧ್ಯತೆಯುಂಟು. ಮೋಕ್ಷವನ್ನು ಕೊಡಿಸುವುದಾಗಿ ಹೇಳಿ ಜನರನ್ನು ತನ್ನತ್ತ ಸೆಳೆಯುವ ಮತಧರ್ಮವೂ ಒಂದರ್ಥದಲ್ಲಿ ದೊಡ್ಡ ಆಮಿಷವನ್ನು ಒಡ್ಡಿದೆಯಲ್ಲವೆ ?

ದೇಶದ ಭವಿಷ್ಯವು ಸುಗಮವಾಗಲು ವಿವಿಧ ರಾಜಕೀಯ ಪಕ್ಷಗಳು ಯಾವ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವುದಾಗಿ ಹೇಳಿಕೊಳ್ಳುತ್ತವೋ ಅದು 'ಪ್ರಣಾಲಿಕೆ'. ಅದರ ಬಗ್ಗೆ ಸಾರ್ವಜನಿಕ ಚರ್ಚೆಯಾಗುವುದು ಆರೋಗ್ಯಕರ. ಪ್ರಸ್ತುತ ಚುನಾವಣಾ ಸಂದರ್ಭದಲ್ಲಿ ಪ್ರಣಾಲಿಕೆಯ ಮುಖ್ಯಾಂಶಗಳು ಗೌಣವಾಗಿವೆ; ಅದರ ಬಿಡುಗಡೆಯ ಸಂಭ್ರಮ ಮುಖ್ಯವಾಗಿಬಿಟ್ಟಿದೆ. ಒಂದು ಪತ್ರಿಕೆಯ ಹಿರಿಯ ವರದಿಗಾರರು ಕಮ್ಯುನಿಸ್ಟ್ ಪಕ್ಷಗಳ ಪ್ರಣಾಲಿಕೆಗಳು ಬಹಳ ದೀರ್ಘವಾಗಿವೆಯೆಂದು ಗೊಣಗಾಡಿದರೇ ವಿನಾ ಅವುಗಳಲ್ಲಿರುವ ಪ್ರಮುಖ ವಿಷಯಗಳನ್ನು ಪ್ರಸ್ತಾಪಿಸಲಿಲ್ಲ ಮತ್ತು ವಿಶ್ಲೇಷಿಸಲಿಲ್ಲ. ಚುನಾವಣಾ ಸಂದರ್ಭದ ಚರ್ಚೆಯೆಲ್ಲಾ ಕತ್ತು ಕತ್ತರಿಸುವುದು, ಕೈ-ಕಾಲುಗಳನ್ನು ಕತ್ತರಿಸುವುದು, ರೋಡ್‌ರೋಲರ್ ಕೆಳಗೆ ಸಿಕ್ಕಿಸಿ ಚಟ್ನಿ ಮಾಡಿಬಿಡುವುದು, ಇತ್ಯಾದಿಗಳಿಗೆ ಸೀಮಿತವಾಗಿರುವಂತೆ ಪ್ರತಿಫಲಿಸಲ್ಪಟ್ಟಿವೆ. ನಿಜ ಜೀವನದಲ್ಲಿ ಇಂತಹ ಕುಕೃತ್ಯಗಳನ್ನು ಮಾಡಿರುವವರು ಚುನಾವಣಾ ಕಣಕ್ಕೆ ಇಳಿದಾಗ ಅದಕ್ಕೆ ತಕ್ಕುದಾದ ಮಾತುಗಳು ಹೊರಬರುವುದು ಸಹಜ. ಆದರೆ ಸಾರ್ವಜನಿಕರಿಗೆ ತಿಳಿದಂತೆ ಅಂತಹ ಹೀನಕೃತ್ಯಗಳನ್ನೆಸಗದವರು ಸಹ ಅದೇ ಭಾಷೆ-ಪರಿಭಾಷೆಗಳನ್ನು ಬಳಸುವುದು ಅಚ್ಚರಿಯ ಸಂಗತಿ. ಯಾರಿಂದ ಯಾರು ಪ್ರಭಾವಿತರಾಗಬೇಕೆಂಬುದು ಹೊಸ ಆಯಾಮವನ್ನು ಪಡೆದುಕೊಂಡಿರುವಂತೆ ತೋರುತ್ತದೆ.

ಚುನಾವಣೆಯನ್ನು ಒಂದು ಮೋಜಿನಂತೆ ಕಾಣುವುದು ದುಡಿಯುವ ಜನಕ್ಕೆ ಸಾಧ್ಯವಾಗದು. ಹಿಂದೆ 'ಹೇಮರೆಡ್ಡಿ ಮಲ್ಲಮ್ಮ' ಎಂಬ ಚಲನಚಿತ್ರದಲ್ಲಿ ''ಈ ಶಿವರಾತ್ರಿ ಮಹೇಶನ ದರುಶನ ಭಾಗ್ಯವು ಲಭಿಸುವುದೆ'' ಎಂಬ ಹಾಡಿತ್ತು. ಹಾಗೆ ಈಗ ದುಡಿಯುವ ಜನರು ''ಈ ಬಾರಿಯ ಮೇ ದಿನದಂದು ಕನಸುಗಳು ನನಸಾಗಬಹುದೆ'' ಎಂಬ ಹಾಡನ್ನು ಹೇಳಿಕೊಳ್ಳಬೇಕಾಗಿದೆ. ಅಲ್ಲಿ ಮಲ್ಲಮ್ಮ ಭಕ್ತಿ-ಶ್ರದ್ಧೆಗಳಿಂದ ಶಿವನನ್ನು ಕಾಣುತ್ತಾಳೆ; ಇಲ್ಲಿ ದುಡಿಯುವವರು ಶಕ್ತಿಯಿಂದ ತಮ್ಮ ಕನಸನ್ನು ನನಸಾಗಿಸಿಕೊಳ್ಳಬೇಕಾದ ಸಂದರ್ಭವಿದೆ. ಅದನ್ನು ಮಾಡದಿದ್ದರೆ ಹಳೆಯ ಹಾಡು - ಪಾಡುಗಳೇ ಗತಿ ! ಚುನಾವಣೆಯನ್ನು ತಮ್ಮ ದೀರ್ಘಕಾಲಿಕ ಹೋರಾಟದ ಭಾಗವೆಂದು ಪರಿಗಣಿಸದೆ ದುಡಿಯುವ ಜನರು ಸಮೃದ್ಧವಾಗಿ ಬೆಳೆಯಲು ಆಗುವುದಿಲ್ಲ. ತನ್ನ ಮತ್ತು ತನ್ನ ವರ್ಗದ ಹಿತ ಎಲ್ಲಿದೆಯೆಂಬುದನ್ನು ಕಂಡುಕೊಳ್ಳದೆ ಚುನಾವಣೆಗಳಲ್ಲಿ ಭಾಗವಹಿಸುವುದು ಯಾವ ಪರ್ಯಾಯವನ್ನೂ ದೊರಕಿಸಿಕೊಡುವುದಿಲ್ಲ. ನಮ್ಮ ವರ್ಗ ವಿರೋಧಿಗಳನ್ನು ಆಯ್ಕೆ ಮಾಡಿ ಆಮೇಲೆ ಕೈ ಕೈ ಹಿಸುಕಿಕೊಳ್ಳುವುದು ಪ್ರಯೋಜನವಿಲ್ಲದ ಕೆಲಸ. ಆಗ ನಮ್ಮ ಬವಣೆಯು 'ಸ್ವಯಂಕೃತ ಅಪರಾಧ' ಎನಿಸಿಕೊಳ್ಳುತ್ತದೆ. ಈ ಅಪರಾಧದ ಸರಮಾಲೆಗೆ ಇತಿಶ್ರೀ ಹಾಡಬೇಕಾಗಿದೆ.

ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಚುನಾವಣೆಯನ್ನು ಎದುರಿಸಲು ಎಲ್ಲರಿಗೂ ಸಮಾನ ಅವಕಾಶಗಳಿವೆಯೆಂಬುದು ಒಂದು ಮಿಥ್ಯೆ. ಸಹಸ್ರಾರು ಕೋಟಿ ರೂಪಾಯಿಗಳ ಒಡೆಯ ಒಂದು ಕಡೆ, ದುಡಿಮೆಯೊಂದನ್ನೇ ಆಸ್ತಿಯಾಗಿ ಹೊಂದಿರುವ ದುಡಿಯುವ ವ್ಯಕ್ತಿ ಇನ್ನೊಂದು ಕಡೆ: ಹೀಗಾಗಿ ಅದು ಸಮಾನ ಸ್ಪರ್ಧೆಯಾಗಿಲ್ಲ. ಆದಾಗ್ಯೂ ಜನಪರ ನೀತಿ ಮತ್ತು ಜನವಿರೋಧಿ ನೀತಿ ಎಂದರೇನೆಂದು ದುಡಿಯುವ ಜನ ತಿಳಿದುಕೊಳ್ಳಬಲ್ಲರು, ತಿಳಿದುಕೊಳ್ಳಬೇಕು. ಜಾತಿ-ಮತ-ಪ್ರದೇಶ ಮುಂತಾದ ಕಾರಣಗಳಿಗೆ ಒತ್ತುಕೊಟ್ಟು ದುಡಿಯುವ ಜನರು ಜನವಿರೋಧಿ ನೀತಿಗಳ ಪರಿಪಾಲಕರಿಗೆ ಮತ ಚಲಾಯಿಸುವುದುಂಟು. ಅದಕ್ಕೆ ಉದಾಹರಣೆಗಳು ಬೇಕಿಲ್ಲ. ಪ್ರಗತಿಪರ ಕಾರ್ಮಿಕ ಸಂಘದ ಸದಸ್ಯನಾಗಿದ್ದುಕೊಂಡು ಹಳಸಲು ಸಿದ್ಧಾಂತಗಳನ್ನು ಪ್ರತಿನಿಧಿಸುವ ರಾಜಕೀಯ ಪಕ್ಷಕ್ಕೆ ಮತ ನೀಡುವುದು ಅತಾರ್ಕಿಕ. ಆದರೆ ಅದು ಅಪರೂಪದ ಸಂಗತಿಯಲ್ಲ. ಬರ್ಟ್ರಂಡ್ ರಸೆಲ್ ತಮ್ಮೊಂದು ಲೇಖನದಲ್ಲಿ ಯುದ್ಧ ಸಾಮಗ್ರಿಗಳ ತಯಾರಿಕೆಯ ಬಗ್ಗೆ ಚರ್ಚಿಸುತ್ತಾ ಆ ಆಯುಧಗಳಿರುವುದೇ ಕೊಲ್ಲುವುದಕ್ಕೆ ಎಂಬ ಮಾತನ್ನು ಹೇಳುತ್ತಾರೆ. ಬಂದೂಕವನ್ನು ಮತ್ತು ಬಂದೂಕದ ನೀತಿ ಸಂಸ್ಕೃತಿಗಳನ್ನು ಪೋಷಿಸಿ, ಬಂದೂಕದಿಂದ ಅನಾಹುತವಾಗಕೂಡದೆಂದು ಬಯಸುವುದು ಅಸಂಗತವಾದದ್ದು. ದುಡಿಯುವ ಜನರು ತಮ್ಮ ಅಸ್ತಿತ್ವ ಮತ್ತು ಏಳಿಗೆಗಳ ವಿರೋಧಿಗಳಿಗೆ ಮತ ನೀಡಿ, ನಂತರ ತಮಗೆ ಸೇವಾ ಭದ್ರತೆ, ಒಳ್ಳೆಯ ವೇತನ, ಬೇರೆ ಸೌಲಭ್ಯಗಳು, ಇತ್ಯಾದಿಗಳನ್ನು ನೀಡುತ್ತಿಲ್ಲವೆಂದು ಹೋರಾಡುವುದು ಎಷ್ಟು ಕಾಲ ಮುಂದುವರಿಯಬೇಕು ? ನಮ್ಮ ವರ್ಗದ ವಿರುದ್ಧ ಮತ ಚಲಾಯಿಸುವುದು ಪ್ರಬಲವಾದ ಬಂದೂಕಿನ ತಯಾರಿಕೆಗೆ ಸಮ. ಅರುಣ್ ಶೌರಿ - ಚಿದಂಬರಂ ಪಕ್ಷಗಳಿಗೆ ಮತ ನೀಡಿ, ಆಮೇಲೆ ವಿವಿಧ ಸೌಲಭ್ಯಗಳನ್ನು ಕರುಣಿಸಬೇಕೆಂದು ಬೇಡುವುದು, ಇಲ್ಲವೆ ಸೆಣಸುವುದು ಅರ್ಥಹೀನವಾದ್ದು. ಆಯ್ಕೆಯ ಸ್ವಾತಂತ್ರ್ಯವನ್ನು ಭಾವನಾತ್ಮಕ ನೆಲೆಯಲ್ಲೋ, ಜಾತಿ ರಾಜಕೀಯದಲ್ಲೋ ಹಿಂದಕ್ಕೆ ತಳ್ಳಿ ಆಮೇಲೆ ಪರಿತಪಿಸುವುದು ದುಡಿಯುವ ವರ್ಗದ ಜಾಯಮಾನವಾಗಿದೆ. ಮೇ ೧ರಂದು ಮೇ ದಿನಾಚರಣೆಯಲ್ಲಿ ಭಾಗವಹಿಸಿ ದುಡಿಯುವ ಜನರ ಆಶಯಗಳಿಗೆ ಪುಷ್ಟಿ ನೀಡುವುದು, ಸಮಾಜವಾದಿ ವ್ಯವಸ್ಥೆಯ ಆವಿಷ್ಕಾರಕ್ಕಾಗಿ ಪಣ ತೊಡುವುದು, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯವಾಗಿ ದುಡಿಯುವ ವರ್ಗದ ಐಕ್ಯತೆಯನ್ನು ಘೋಷಿಸುವುದು, ಇವೆಲ್ಲಾ ಸರಿ; ಅದು ಕಾರ್ಯಗತವಾಗಲು ಕ್ರಿಯೆಯಲ್ಲಿ ತೊಡಗದಿದ್ದರೆ ಅದೆಲ್ಲಾ ವ್ಯರ್ಥ. ಒಪ್ಪತ್ತಿನ ಒಳಿತಿಗಾಗಿ ಯಾವನೋ ಯಜಮಾನವನ್ನು ಒಲೈಸಿ, ಆಮೇಲೆ ಜೀವನದುದ್ದಕ್ಕೂ ದೇಶದ

ಸಂಪತ್ತನ್ನು ಲೂಟಿ ಮಾಡುವವರನ್ನು ಶಪಿಸುತ್ತಾ ಬಾಳುವುದು ಅನಿವಾರ್ಯವಲ್ಲ. ಅಂತೆಯೇ, ಅದಕ್ಕೆ ಪರ್ಯಾಯವನ್ನು ಕಂಡುಕೊಳ್ಳುವುದು ಒಂದು ದಿನದ ಕೆಲಸವಲ್ಲ. ಅಂದರೆ, ಒಮ್ಮೆ ಚುನಾವಣೆಯಲ್ಲಿ ಜನಪರ ಸಿದ್ಧಾಂತವನ್ನು ಪ್ರತಿಪಾದಿಸುವ ಪಕ್ಷಕ್ಕೆ ಅಥವಾ ಬಣಕ್ಕೆ ಮತ ನೀಡುವುದರಿಂದ ಎಲ್ಲ ಸಂಕಷ್ಟಗಳನ್ನೂ ನೀಗಿಕೊಳ್ಳಬಹುದು ಎಂಬರ್ಥವಲ್ಲ. ಅದು ಸತತವಾದ ಪ್ರಕ್ರಿಯೆ, ಗುಣಾತ್ಮಕವಾಗಿ ಕ್ರಮೇಣ ವೃದ್ಧಿಹೊಂದುತ್ತಾ ಹೋಗುವಂಥದು. ಒಂದೇ ಬಾರಿಗೆ, ಕ್ರಾಂತಿ ಮಾಡಿ, ಹೊಸ ವ್ಯವಸ್ಥೆಯನ್ನು ನಮ್ಮದನ್ನಾಗಿಸಿಕೊಳ್ಳುವುದು ಸ್ವಾಗತಾರ್ಹ, ಅಂಥ ಕಾಲವು ಬರುವವರೆಗೆ ದುಡಿಯುವ ಜನ ನಿಷ್ಕ್ರಿಯರಾಗಿ ಕುಳಿತಿರಲು ಸಾಧ್ಯವೆ ?

ಪ್ರಸ್ತುತ ಚುನಾವಣೆಯ ಸಂದರ್ಭದಲ್ಲಿ ಯಾರಿಗೆ ಮತ ಚಲಾಯಿಸಿದರೂ ಹೊರಬರುವ ಫಲಿತಾಂಶವು ಖಿಚಡಿ ಸ್ವರೂಪದ ಸರ್ಕಾರವೇ ಆಗಿರುತ್ತದೆಂದು ಬಹುಶಃ ಎಲ್ಲರೂ ಒಪ್ಪಿದ್ದಾರೆ. ಈ ಖಿಚಡಿಯಲ್ಲಿ ದುಡಿಯುವ ಜನರ ಪ್ರತಿನಿಧಿಗಳೂ ಇರುವಂತೆ ಮಾಡುವುದು ದುಡಿಯುವ ಜನಕ್ಕಿರುವ ಒಂದು ಮಾರ್ಗ, ಒಂದು ಆಯುಧ. ದೇಶದ ಸಾರ್ವಭೌಮತ್ವವನ್ನು ಪಣಕ್ಕೊಡ್ಡಿ ಅದನ್ನು ಕಳೆದುಕೊಂಡಿರುವ ಕಾಂಗ್ರೆಸ್ ಆಗಲಿ, ಆರ್ಥಿಕ ಮತ್ತು ಸಾಮಾಜಿಕ ಸ್ತರಗಳಲ್ಲಿ ಸಮಾನತೆಯ ಕಲ್ಪನೆಯನ್ನೇ ಇಟ್ಟುಕೊಳ್ಳದ ಭಾರತೀಯ ಜನತಾ ಪಕ್ಷವಾಗಲಿ ದುಡಿಯುವ ಜನರ ಆಸೆ-ಆಕಾಂಕ್ಷೆಗಳನ್ನು ಗೌರವಿಸುವುದಿಲ್ಲ, ಅದಕ್ಕಾಗಿ ಸರಿಯಾದ ನೀತಿಗಳನ್ನು ರೂಪಿಸುವುದಿಲ್ಲ. ಅರವತ್ತು ವರ್ಷಗಳ ಅನುಭವದಿಂದ ಇದು ಸಿದ್ಧವಾಗಿದೆ. ಉಳಿದಿರುವ ಪ್ರಯತ್ನಗಳಲ್ಲಿ ಒಂದು ಮೂರನೆಯ ಶಕ್ತಿಯನ್ನು ಪರ್ಯಾಯ ವ್ಯವಸ್ಥೆಯ ನಿರ್ಮಾಣದತ್ತ ಮುನ್ನುಗ್ಗಿಸುವುದು. ಬಾಧಕ ಶಕ್ತಿಗಳು ಮೂರನೆಯ ರಂಗದಲ್ಲೂ ಇವೆ. ಜಯಲಲಿತಾ, ಮಾಯಾವತಿ, ದೇವೇಗೌಡ, ಚಂದ್ರಬಾಬು, ಮುಂತಾದ ನಾಯಕಮಣಿಗಳು ಮೂರನೆಯ ರಂಗವೆಂಬ ಏಣಿಯಿಂದ ಮೇಲಕ್ಕೆ ಹತ್ತಿ, ಆಮೇಲೆ ಏಣಿಯನ್ನು ಒದ್ದು ಬೀಳಿಸುವುದಿಲ್ಲವೆಂಬ ಭ್ರಮೆ ಅನವಶ್ಯಕ. ಜನಪರ ಸಿದ್ಧಾಂತಗಳ ಆಧಾರದ ಮೇಲೆ ಹೋರಾಟಗಳನ್ನು ನಡೆಸುವ, ರಾಜಕೀಯ ಮಾಡುವ, ಎಡ ಪ್ರಜಾಪ್ರಭುತ್ವವಾದಿ ಶಕ್ತಿಗಳು ಮಾತ್ರವೇ ನಂಬಲರ್ಹವಾದ ಮತ್ತು ಗಟ್ಟಿಯಾದ ಕ್ರಮಗಳನ್ನು ಹಮ್ಮಿಕೊಳ್ಳಲು ಬದ್ಧವಾಗಿವೆ. ಕೇಂದ್ರ ಸರ್ಕಾರದ ಆಡಳಿತದಲ್ಲಿ ಎಡ ಪಕ್ಷಗಳು ನೇರವಾಗಿ ಭಾಗವಹಿಸುವ ಸಾಧ್ಯತೆಯು ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ಅದು ಅವಶ್ಯಕವೂ ಹೌದು. ಮೂರನೆಯ ರಂಗದ ಸರ್ಕಾರದ ರಚನೆಯು ಇದನ್ನು ಆಗುಮಾಡುತ್ತದೆ. ದುಡಿಯುವ ಜನ ನಾಳೆ ಕೈ ಕೈ ಹಿಸುಕಿಕೊಂಡು ಕುಳಿತಿರುವಂತಾಗಕೂಡದೆಂಬ ತೀರ್ಮಾನಕ್ಕೆ ಬಂದರೆ ಪ್ರಸಕ್ತ ಚುನಾವಣೆಯಲ್ಲಿ ಮೂರನೆಯ ರಂಗದ ಸರ್ಕಾರವು ಅಸ್ತಿತ್ವಕ್ಕೆ ಬರುವುದರಲ್ಲಿ ಸಂದೇಹವಿಲ್ಲ. ಅದು ಒಂದು ಪಕ್ಷ ಸಾಧ್ಯವಾದರೆ, ದುಡಿಯುವ ಜನರ ಜವಾಬ್ದಾರಿ ಇಮ್ಮಡಿಯಾಗುತ್ತದೆ. ಜನಪರ ನೀತಿಗಳಿಗೆ ಒಳಗಿನಿಂದಲೇ ಸಂಚಕಾರ ತರುವಂತಹ ವ್ಯಕ್ತಿಗಳು ಮತ್ತು ಪಕ್ಷಗಳು ಮೂರನೆಯ ರಂಗದಲ್ಲಿ ಕೂಡಿಕೊಂಡಿವೆ. ಅವನ್ನು ನಿಯಂತ್ರಿಸಿ ಮುನ್ನಡೆಸುವ ಕೆಲಸವನ್ನು ದುಡಿಯುವ ಜನರು ಮಾತ್ರವೇ ಮಾಡಬಲ್ಲರು. ಆದ್ದರಿಂದ ಇಂದಿನ ಚುನಾವಣೆಯು ದುಡಿಯುವ ಜನರ ದೃಷ್ಟಿಯಲ್ಲಿ ಅನನ್ಯವಾದ್ದು. ಮೇ ದಿನ ಬರುತ್ತಲೇ ಇರುತ್ತದೆ; ಆದರೆ ಅದು ಕಂಪನ್ನು ಹೊತ್ತು ತರುವಂತೆ ಮಾಡಬೇಕಾಗಿದೆ. ಆ ದಿಕ್ಕಿನಲ್ಲಿ ದುಡಿಯುವ ಜನರು ಇಂದು ಸ್ಥಿರವಾದ ಮತ್ತು ಉಪಯುಕ್ತವಾದ ಹೆಜ್ಜೆ ಇಡಲು ಮತ್ತು ಅರ್ಥವತ್ತಾದ ಪರ್ಯಾಯ ರಾಜಕಾರಣವು ನೆಲೆಗೊಳ್ಳುವಂತೆ ಮಾಡಲು ಸಂಕಲ್ಪ ಮಾಡಬೇಕು ಮತ್ತು ಮೂರನೆಯ ರಂಗವನ್ನು ಬೆಂಬಲಿಸಿ ಅಧಿಕಾರವನ್ನು ಕಾಂಗ್ರೆಸ್ ಹಾಗೂ ಭಾರತೀಯ ಜನತಾ ಪಕ್ಷಗಳಿಂದ ಹಸ್ತಾಂತರಿಸಬೇಕು.

## ಜಿ-೨೦ ಶೃಂಗಸಭೆ : ಸಾಮ್ರಾಜ್ಯಶಾಹಿ ಬಣದ ವಿಸ್ತರಣೆಯ ಹುನ್ನಾರ

ಅಮೆರಿಕದಲ್ಲಿ ಜಗತ್ತಿನ ಬಂಡವಾಳದ ಕೇಂದ್ರವಾದ ವಾಲ್‌ಸ್ಟ್ರೀಟ್‌ನಲ್ಲಿ ಹಲವು ಪ್ರಕಾರದ ವಂಚನೆಯಿಂದ ಹುಟ್ಟಿದ ಆರ್ಥಿಕ ವ್ಯವಸ್ಥೆಯ ಹಲವು ಬಗೆಯ ಕುಸಿತಗಳು, ಜಾಗತೀಕರಣದ ಪ್ರಭಾವದಿಂದ ಜಗತ್ತಿನ ಸಣ್ಣಪುಟ್ಟ, ಅಭಿವೃದ್ಧಿಶೀಲ, ಅಭಿವೃದ್ಧಿಹೊಂದಿದ, ಮುಂದುವರಿದ, ಹಿಂದುಳಿದ ಎಲ್ಲಾ ವ್ಯವಸ್ಥೆಗಳನ್ನೂ ಸಾಕಷ್ಟು ತೀವ್ರವಾಗಿಯೇ ಸಾಂಕ್ರಾಮಿಕವಾಗಿ ಆವರಿಸಿಕೊಂಡು, ಎಲ್ಲರೂ ಕಂಗಾಲಾಗಿರುವುದು ಜಿ-೨೦ ರಾಷ್ಟ್ರಗಳು ಶೃಂಗಸಭೆ ಸೇರಿದ ಸಂದರ್ಭ. ಯಾವುದು ಜಾಗತಿಕವಾಗಿ ಎಲ್ಲ ರಾಷ್ಟ್ರಗಳಿಗೂ ಸಂಬಂಧಪಟ್ಟ ವಿಷಯವೋ ಅದನ್ನು ಕೇವಲ ೨೦ ರಾಷ್ಟ್ರಗಳು ಮಾತ್ರ ಚರ್ಚಿಸುತ್ತಿರುವುದು, ಮಿಕ್ಕವರು ಅವರೇನು ತೀರ್ಮಾನ ಕೊಡುವರೋ ಎಂದು ಕಾತುರದಿಂದ ಕಾಯುತ್ತಿರುವುದು ಒಂದು ವಿಪರ್ಯಾಸ. ಯಾವ ಯುದ್ಧದ ಪರಿಸ್ಥಿತಿಗೂ ಕಡಿಮೆಯಲ್ಲದ, ಸಾಮಾನ್ಯ ಜನರಿಗೆ ಕ್ಷೋಭೆಯುಂಟುಮಾಡುತ್ತಿರುವ ಈ ವಿಷಯವನ್ನು ಇವರಿಗೂ ಮುಂಚೆಯೇ ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಚರ್ಚಿಸಿ, ನೊಬೆಲ್ ಪಾರಿತೋಷಕ ಪಡೆದ ಅರ್ಥಶಾಸ್ತ್ರಜ್ಞ ಜೋಸೆಫ್ ಸ್ಟಿಗ್ಲಿಷ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿ, ಸಮಸ್ಯೆಯ ಪರಿಹಾರಕ್ಕೆ ಮಾರ್ಗೋಪಾಯಗಳನ್ನು ಸೂಚಿಸುವಂತೆ ಕೋರಿತ್ತು. ಲಂಡನ್ನಿನ ಜಿ-೨೦ ಶೃಂಗಸಭೆಗೆ ಮುಂಚೆಯೇ ಈ ಸಮಿತಿ ತನ್ನ ಶಿಫಾರಸುಗಳನ್ನು ಬಹಿರಂಗಗೊಳಿಸಿತ್ತು. ಜಿ-೨೦ ಇವುಗಳನ್ನೇನೂ ತನ್ನ ಚರ್ಚೆಗೆ ಆಧಾರಮಾಡಿಕೊಂಡಂತೆ ಕಾಣಲಿಲ್ಲ. ಬಂಡವಾಳಿಗ ವ್ಯವಸ್ಥೆಯ ಅರ್ಥಶಾಸ್ತ್ರಿಗಳ ನಡುವಿನ, ವಾಷಿಂಗ್‌ಟನ್ ಕಾನ್ಸೆನ್ಸಸ್ ಎಂಬ, ಒಂದು ಅನೌಪಚಾರಿಕ ಒಡಂಬಡಿಕೆ ಹಾಕಿಕೊಟ್ಟ ಬಂಡವಾಳ ಮಾರ್ಗದ ಅರ್ಥ ವ್ಯವಸ್ಥೆಯ ನೀತಿನಿಯಮಗಳನ್ನು ಎರಡು ದಶಕಗಳ ಕಾಲ ವಿಶ್ವ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕ್ ಅನುಸರಿಸಿದುವು. ಅಂಥದೊಂದು ಒಡಂಬಡಿಕೆಯೇ ಇರಲಿಲ್ಲವೆಂದು ಈ ಸಂಸ್ಥೆಗಳು ಹೇಳುತ್ತಿದ್ದವು ಮಾತ್ರ. ಆದರೆ ವಾಸ್ತವದಲ್ಲಿ ಆ ಮಾರ್ಗವನ್ನು ಆಧರಿಸಿ, ಜಾಗತಿಕವಾಗಿ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣವನ್ನು ಅರ್ಥನೀತಿಯ ಮಂತ್ರವಾಗಿ ತಮ್ಮಿಂದ ನೆರವು ಬಯಸುವವರ ಮೇಲೆ ನಿರ್ದಾಕ್ಷಿಣ್ಯವಾಗಿ ಹೇರಲು









**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
© : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
© : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
© : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
© : ೦೮೪೭೨-೨೨೪೩೦೨

ಈ ಸಂಸ್ಥೆಗಳು ಮುಂದಾದಾಗ, ಅವರ ಪ್ರಮುಖ ಅರ್ಥಶಾಸ್ತ್ರಜ್ಞ ಜೋಸೆಫ್ ಸ್ಟಿಗ್ಲಿಷ್ ಅದು ಸರಿಯಾದ ಮಾರ್ಗವಲ್ಲವೆಂದು ಸಂಸ್ಥೆಯಿಂದ ಹೊರಬಂದಿದ್ದರು. ಈ ನೀತಿಯ ಅನುಸರಣೆಯಿಂದ ವಿಶ್ವವ್ಯಾಪಿಯಾಗಿ ಮುಕ್ತ ಆರ್ಥಿಕ ನೀತಿ, ಯಾವುದೇ ಸಾರ್ವಜನಿಕ ಕಟ್ಟುಪಾಡಿಗೆ, ಮೇಲುಸ್ತುವಾರಿಗೆ ಒಳಗೊಳ್ಳದೆ ಎರಡು ದಶಕಗಳ ಕಾಲ ಜಾರಿಯಾಗಿ, ಅದರ ಪರಿಣಾಮವಾಗಿ ಇಂದಿನ ಆರ್ಥಿಕ ಬಿಕ್ಕಟ್ಟು ಉಂಟಾಗಿರುವುದು ಅದರ ವಿರೋಧಿಗಳಿಗೂ, ಸಮರ್ಥಕರಿಗೂ ಸ್ಪಷ್ಟವಾಗಿದೆ. ಜಿ-೨೦ ಶೃಂಗಸಭೆಯ ತಮ್ಮ ಚೊಚ್ಚಲು ಭಾಷಣದಲ್ಲಿ ಅಮೆರಿಕಾದ ಅಧ್ಯಕ್ಷ ಒಬಾಮಾ ಮೊದಲಿಗೆ ಹೇಳಿದ್ದು: ''ವಾಷಿಂಗ್‌ಟನ್ ಕಾನ್ಸೆನ್ಸಸ್‌ನ ಕಾಲ ಮುಗಿಯಿತು. ಅದನ್ನು ಇನ್ನು ಕೊನೆಗಾಣಿಸಿ, ಹೊಸಮಾರ್ಗ ಹುಡುಕಿ'' ಎಂದು. ಹೀಗೆ ಹೇಳುವ ಮೂಲಕ ಅಂಥದೊಂದು ಮಾರ್ಗ ಅಧಿಕೃತವಾಗಿ ಚಾಲ್ತಿಯಲ್ಲಿತ್ತೆಂದು ಹೊರಗೆಡಹಿದರು. ಇದರೊಂದಿಗೆ ಕಳೆದ ಎರಡು ದಶಕಗಳ ಕಾಲ ಬಂಡವಾಳ ವ್ಯವಸ್ಥೆಯ ಶ್ರೀಮಂತ ರಾಷ್ಟ್ರಗಳು ಹಲವು ಹೊಸ ರೀತಿಯಲ್ಲಿ ಮಿಕ್ಕವರನ್ನೆಲ್ಲ ಶೋಷಿಸಿದ ಹಾದಿ ಕೊನೆಗಂಡಂತೆ ಕಾಣುತ್ತಿದೆಯಾದರೂ ಜಿ-೨೦, ಮಿಕ್ಕವರನ್ನೆಲ್ಲಾ ಹೊರಗಿಟ್ಟು ಮತ್ತೊಂದು ಶೋಷಣೆಯ ಉಪಾಯವನ್ನು ಹುಡುಕುತ್ತಿಲ್ಲವಷ್ಟೆ? ಜಿ-೨೦ನ್ನು ಸೇರಿಸುವ ಮೊದಲು ಜಿ-೫, ಜಿ-೭, ಜಿ-೮ ಹೀಗೆಲ್ಲಾ ಆರ್ಥಿಕವಾಗಿ ಮತ್ತು ಮಿಲಿಟರಿ ಶಕ್ತಿಯಲ್ಲಿ ಪ್ರಬಲವಾದ ದೊಡ್ಡಣ್ಣಗಳು ತಾವು ತಾವೇ ವಿಚಾರವಿನಿಮಯ ಮಾಡಿಕೊಂಡು ತಮ್ಮ ಗುಂಪನ್ನು ಈಗ ಜಿ-೨೦ಕ್ಕೆ ವಿಸ್ತರಿಸಿವೆ. ಇದೂ ಒಂದು ಕುತಂತ್ರವಿರಬಹುದೇ? ಪಶ್ಚಿಮದ ರಾಷ್ಟ್ರಗಳು ಎಷ್ಟೇ ಅಡಚಣೆ ಉಂಟುಮಾಡಿದರೂ, ಅದನ್ನು ಮೆಟ್ಟನಿಂತು, ಇಂದು ಆರ್ಥಿಕವಾಗಿ ಸೆಟೆದು ನಿಂತಿರುವ ಭಾರತ, ಚೀನಾ, ದಕ್ಷಿಣ ಆಫ್ರಿಕಾ, ಬ್ರೆಜಿಲ್‌ನಂಥ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ತಮ್ಮದೇ ಸಮಸ್ಯೆಗಳ ಪರಿಹಾರಕ್ಕೆ ಬಳಸಿಕೊಳ್ಳುವ ತಂತ್ರ ಇದರಲ್ಲಿ ಅಡಗಿರಬಹುದು. ವಿಶ್ವವ್ಯಾಪಾರ ಸಂಸ್ಥೆ (ಡಬ್ಲ್ಯುಟಿಒ)ಯಲ್ಲಿ ಬಡದೇಶಗಳ ಕೃಷಿಕ್ಷೇತ್ರದ ಪರ ಮಾತನಾಡುತ್ತಿದ್ದ ಭಾರತ ಮತ್ತು ಬ್ರೆಜಿಲ್ ದೇಶಗಳು ಈಗ ಪಶ್ಚಿಮದವರೊಡನೆ ರಾಜಿಗೆ ಮುಂದಾಗಿರುವುದು ಅಂಥದೊಂದು ಬೆಳವಣಿಗೆ. ಅದಕ್ಕಿಂತ ಹೆಚ್ಚಾಗಿ, ಜಿ-೭೦, ಮುಂತಾದ ಅಲಿಪ್ತ ರಾಷ್ಟ್ರಗಳ ಐಕಮತ್ಯವನ್ನು ಒಡೆಯುವ ತಂತ್ರವೂ ಇರಬಹುದು. ವರ್ಲ್ಡ್ ಇಕನಾಮಿಕ್ ಫೋರಮ್‌ನಂಥ ಉದ್ಯಮಪತಿಗಳ ಒಕ್ಕೂಟವನ್ನು ರಚಿಸಿಕೊಂಡು, ಅಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ಅರ್ಥ ವ್ಯವಸ್ಥೆಯ ನೀತಿ ನಿರೂಪಕರನ್ನೆಲ್ಲಾ ಕರೆಸಿ, ತಮ್ಮ ಮಾರ್ಗಕ್ಕೆ ಎಳೆದುಕೊಂಡ ಪ್ರಯತ್ನವೂ ಇಂಥದೆ. ಇಂಥ ಒಂದು ಹುನ್ನಾರದ ಹಿನ್ನೆಲೆಯಲ್ಲಿ ಜಿ-೨೦ ಶೃಂಗಸಭೆ ಜಾಗತಿಕವಾಗಿ ಒದಗಿಬಂದಿರುವ ಆರ್ಥಿಕ ಬಿಕ್ಕಟ್ಟಿನಲ್ಲಿ ಬಡರಾಷ್ಟ್ರಗಳಿಗೂ, ಎಲ್ಲೆಲ್ಲೂ ಇದರ ಆಘಾತಕ್ಕೆ ಒಳಗಾಗಿರುವ ಬಡಜನತೆಗೂ ಸಹಾಯವಾಗುವಂಥ ನೀತಿಯನ್ನು ಪ್ರತಿಪಾದಿಸುತ್ತದೆಂದು ನಿರೀಕ್ಷಿಸುವುದು ಸಲ್ಲ.

ಜಿ-೨೦ ಸಭೆಯಲ್ಲಿ ತಕ್ಷಣಕ್ಕೆ ಕೈಗೊಂಡ ತೀರ್ಮಾನಗಳೆಂದರೆ: ವಿಶ್ವಹಣಕಾಸು ಸಂಸ್ಥೆಯ ಮೂಲ ಬಂಡವಾಳವನ್ನು ಮುಪ್ಪಟ್ಟು (೭೫೦ ಬಿಲಿಯನ್ ಡಾಲರ್‌ಗಳು) ಹೆಚ್ಚಿಗಿಸಿ, ಅದನ್ನು ಹೆಚ್ಚು ಸಾಲ ಕೊಡಲು ಸಮರ್ಥವಾಗಿಸುವುದು. ಈ ಸಂಸ್ಥೆಯ ನೀತಿಗಳು ಇಲ್ಲಿಯವರೆಗೆ ಅಭಿವೃದ್ಧಿಶೀಲ ರಾಷ್ಟ್ರಗಳ ಬೆಳವಣಿಗೆಗೆ ಮಾರಕವಾಗಿವೆಯಲ್ಲ, ಈ ಸಂಸ್ಥೆಯ ಆಡಳಿತ ಮಂಡಳಿಯಲ್ಲಿ ಹಿಂದುಳಿದ ರಾಷ್ಟ್ರಗಳ ಪ್ರತಿನಿಧಿಗಳನ್ನು ಸೇರಿಸಿಕೊಳ್ಳುತ್ತೀರಾ ಎಂದರೆ, ಈ ಬಗ್ಗೆ ಜಿ-೨೦ ಮೌನವಾಚರಿಸಿದೆ. ಈ ಬಿಕ್ಕಟ್ಟಿನಿಂದಾಗಿ ಸಂಕಟಕ್ಕೆ ಒಳಗಾಗಿರುವ ಬಡದೇಶಗಳಿಗೆ ನೆರವು ನೀಡಲು ೧೦೦ ಬಿಲಿಯ ಡಾಲರ್‌ಗಳಷ್ಟು ನಿಧಿ ಸ್ಥಾಪಿಸುವುದು ಮತ್ತೊಂದು ತೀರ್ಮಾನ. ಸಮಸ್ಯೆಗೆ ಈ ಸಣ್ಣ ಮೊತ್ತದ ಹಣ ಏನೇನೂ ಸಾಲದು ಎಂಬುದಿರಲಿ. ಈ ಮೊತ್ತವನ್ನು ವಿನಿಯೋಗಿಸುವ ರೀತಿ ಇನ್ನೂ ಸ್ಪಷ್ಟವಿಲ್ಲ. ವಿಶ್ವವ್ಯಾಪಾರ ವ್ಯವಸ್ಥೆಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳೂ ಸೇರಿದಂತೆ ಎಲ್ಲರೂ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಬೇಡಿಕೆ ಇಲ್ಲದೆ, ವಿದೇಶೀ ವಿನಿಯಮ ಸಾಲದಾಗಿ, ವ್ಯಾಪಾರವೇ ಕುಸಿದಿದೆ. ಈ ಕ್ಷೇತ್ರದಲ್ಲಿ ನೆರವು ನೀಡಲು ೨೦೦ ಬಿಲಿಯನ್ ಡಾಲರಿಗೆ ಮತ್ತೊಂದು ನಿಧಿಯನ್ನು ಸ್ಥಾಪಿಸಲಾಗುತ್ತದೆ, ಇಲ್ಲೂ ಒದಗಿಸಿರುವ ಹಣದ ಮೊತ್ತ ಏನೇನೂ ಸಾಲದು ಅನ್ನುವುದಲ್ಲದೆ, ಅದು ಹೇಗೆ ವಿತರಣೆಯಾಗುತ್ತದೆ ಎಂಬುದು ಪ್ರಶ್ನಾರ್ಥಕವೆ. ಜಾಗತಿಕವಾಗಿ ಹಣಕಾಸು ವ್ಯವಸ್ಥೆಯ ಮೇಲೆ ಒಂದಿಷ್ಟು ನಿಯಂತ್ರಣ ಬೇಕೆಂದು ಒಪ್ಪಿ, ಅದರ ಸಂರಚನೆಗೆ ಸಂಸ್ಥೆಯೊಂದನ್ನು ಸ್ಥಾಪಿಸುವ ವಿಷಯ ಕುರಿತು ಚಿಂತನೆ ನಡೆಯುತ್ತಿದೆ. ಜಿ-೨೦ ರಾಷ್ಟ್ರಗಳು ಪದೇ ಪದೇ ಸಂಧಿಸಿ, ಚರ್ಚಿಸಿ, ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರಬೇಕು ಎಂಬ ಆಶಯವೂ ವ್ಯಕ್ತವಾಗಿದೆ.

ವಿಶ್ವಸಂಸ್ಥೆಯ ಸಮಿತಿ ನೀಡಿರುವ ಶಿಫಾರಸುಗಳಲ್ಲಿ ಕೆಲವನ್ನು ಗಮನಿಸಬಹುದು: ೧. ಅಭಿವೃದ್ಧಿಶೀಲ ದೇಶಗಳಿಗೂ ಹಣ ನೆರವು ಒದಗಿಸಬೇಕು; ೨. ಹೊಸ ಸಾಲ ನೀತಿ ಬೇಕು; ೩. ನೀತಿ ನಿರೂಪಣೆಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳಿಗೂ ಅವಕಾಶ ಬೇಕು; ೪. ವಿಶ್ವವ್ಯಾಪಾರಕ್ಕೆ ಸಂಬಂಧಪಟ್ಟ ಹಾಗೂ ವಿಶ್ವ ಹಣಕಾಸು ಕ್ಷೇತ್ರಗಳಿಗೆ ಸಂಬಂಧಪಟ್ಟ ನೀತಿಗಳಲ್ಲಿ ಪರಸ್ಪರ ಹೊಂದಾಣಿಕೆ ಇರಬೇಕು; ೫. ಹಾಲಿ ಬಿಕ್ಕಟ್ಟಿನ ನೆಪ ಮಾಡಿಕೊಂಡು, ತಮ್ಮ ಆಂತರಿಕ ಅರ್ಥವ್ಯವಸ್ಥೆಯನ್ನು ಮಾತ್ರ ರಕ್ಷಿಸಿಕೊಳ್ಳುವ ಮಾರ್ಗವನ್ನು ರಾಷ್ಟ್ರಗಳು ಹಿಡಿಯಕೂಡದು. ಉದಾಹರಣೆಗೆ, ಹೆಚ್‌ಒನ್‌ಬಿ ವೀಸಾ ಕಡಿತ ಮಾಡುವುದು, ಭಾರತದಿಂದ ಉಕ್ಕು ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸುವುದು ಇತ್ಯಾದಿ. ೬. ಈ ಬಿಕ್ಕಟ್ಟಿನ ಮಧ್ಯೆಯೂ ಬಡರಾಷ್ಟ್ರಗಳ ಉತ್ಪಾದನೆಗೆ ಮುಂದುವರಿದ ರಾಷ್ಟ್ರಗಳು ತಮ್ಮ ಮಾರುಕಟ್ಟೆಗೆ ಪ್ರವೇಶ ಮಾಡಲು ಮುಕ್ತ ಪ್ರವೇಶ ನೀಡಬೇಕು. ೭. ಸರ್ಕಾರಿ ಆರ್ಥಿಕ ನೀತಿಯನ್ನು ಜಾಗತಿಕ ಆರ್ಥಿಕ ನೀತಿಯೊಡನೆ ಸಮನ್ವಯಗೊಳಿಸಬೇಕು. ಈ ಕುರಿತ ಸುಧಾರಣೆಗಳ ಬಗ್ಗೆಯೂ ಈ ಸಮಿತಿ ಕೆಲವು ಶಿಫಾರಸು ಮಾಡಿದೆ: ೧. ಒಂದು ಹೊಸ ಜಾಗತಿಕ ಹಣದ ನಿಕ್ಷೇಪವನ್ನು ಸ್ಥಾಪಿಸಬೇಕು; ೨. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಲ್ಲಿ ಸುಧಾರಣೆ ಆಗಬೇಕು; ೩. ಆರ್ಥಿಕ ವ್ಯವಸ್ಥೆ ಕುರಿತ ಅಂತರರಾಷ್ಟ್ರೀಯ ಸಮನ್ವಯ ಸಮಿತಿ ಬೇಕು; ೪. ಈ ವ್ಯವಸ್ಥೆಯ ಮೇಲೆ ನಿಗಾ ಇಡುವ ಜಾಗತಿಕ ಸಂಸ್ಥೆ ಬೇಕು; ೫. ರಿಸರ್ವ್ ಬ್ಯಾಂಕ್ ಅಂಥ ಕೇಂದ್ರ ಬ್ಯಾಂಕುಗಳು ಅಭಿವೃದ್ಧಿಪರ ನೀತಿಯನ್ನು ಅನುಸರಿಸಬೇಕು; ೬. ಹಣಕಾಸು ಮಾರುಕಟ್ಟೆಗಳನ್ನು ನಿಯಂತ್ರಿಸಬೇಕು; ೭. ಸಾಲದ ಅರ್ಹತೆಯನ್ನು ನಿಗದಿಪಡಿಸುವ ಸಂಸ್ಥೆಗಳನ್ನು ಸುಧಾರಿಸಿ, ನಿಯಂತ್ರಿಸಬೇಕು. ೮. ವ್ಯಾಪಾರನೀತಿಯನ್ನು ಅಭಿವೃದ್ಧಿ ನೀತಿಗೆ ಪೂರಕವಾಗಿ ರೂಪಿಸಬೇಕು. ೯. ಅಭಿವೃದ್ಧಿಗೆ ಬಂಡವಾಳ ಸುಲಭವಾಗಿ, ಹೆಚ್ಚಾಗಿ ದೊರೆಯುವಂತೆ ಸಹಕರಿಸಲು ಶ್ರೀಮಂತ ರಾಷ್ಟ್ರಗಳು ಮುಂದೆ ಬರಬೇಕು.

ಇವುಗಳನ್ನು ಗಮನಿಸಿದರೆ ಜಿ-೨೦ ರಾಷ್ಟ್ರಗಳ ಶೃಂಗಸಭೆಯ ಚಿಂತನೆ ಸಮಸ್ಯೆಯ ಹೊರ ಪದರವನ್ನೆ ಇನ್ನು ಮುಟ್ಟಿಲ್ಲ ಎಂದು ಸ್ಪಷ್ಟ. ಪರಿಣಾಮವೆಂದರೆ ೧೯೨೯ - ೩೧ರ ಜಾಗತಿಕ ಆರ್ಥಿಕ ಕುಸಿತಕ್ಕಿಂತಲೂ ವ್ಯಾಪಕವಾದ ಆಳವಾದ ಇಂದಿನ ಬಿಕ್ಕಟ್ಟು ಹಲವಾರು ವರ್ಷಗಳ ಕಾಲ ಮುಂದುವರಿಯುವುದು ಖಾತರಿ ಎನಿಸುತ್ತದೆ. ಬಡದೇಶಗಳೂ, ಅಭಿವೃದ್ಧಿಶೀಲ ದೇಶಗಳೂ, ಹೆಚ್ಚುವ ನಿರುದ್ಯೋಗ, ಬಡತನ ಅನುಭವಿಸಬೇಕಾಗುತ್ತದೆ. ಯಾವ ವ್ಯವಸ್ಥೆಯ ಸಂರಚನೆಯೇ ಕಾರಣವಾಗಿ ಈ ಬಿಕ್ಕಟ್ಟು ಉಂಟಾಗಿದೆಯೋ ಅದರ ರಚನೆಯನ್ನೇ ಬದಲಾಯಿಸದೆ ವ್ಯವಸ್ಥೆಯ ಒಳಗೇ ಪರಿಹಾರ ಹುಡುಕುವುದು ವ್ಯರ್ಥ. ವ್ಯವಸ್ಥೆಯನ್ನು ಬದಲಾಯಿಸುವತ್ತ ಜಾಗತಿಕವಾಗಿ ಒಮ್ಮತ ಮೂಡಿಸುವ ಪ್ರಯತ್ನ ಬರುವ ಕಾಲದಲ್ಲಿ ಹೆಚ್ಚುವುದು ಅನಿವಾರ್ಯ. ರಾಷ್ಟ್ರೀಕರಣ, ನಿಯಂತ್ರಣಗಳು ಇವೆಲ್ಲ ಸಮಾಜವಾದವಾಗುತ್ತದೆಂಬ ಅಪಸಿದ್ಧಾಂತವನ್ನು ಕೊನೆಗಾಣಿಸಿ, ವಾಸ್ತವತೆಯ ನೆಲಗಟ್ಟಿನಲ್ಲಿ ರಾಷ್ಟ್ರಗಳು, ತಮ್ಮ ತಥಾಕಥಿತ ಸ್ವಾತಂತ್ರ್ಯಗಳನ್ನು ಒಂದಿಷ್ಟು ಮೊಟಕುಗೊಳಿಸಿಕೊಂಡು, ಜಾಗತಿಕವಾಗಿ ಐಕಮತ್ಯದಿಂದ ನಡೆದುಕೊಂಡಾವೆ? ಅಮೆರಿಕಾ ಇನ್ನೂ ತನ್ನ ಕುಟಿಲತೆಯನ್ನು, ಮಿಲಿಟರಿ ಮತ್ತು ಶ್ರೀಮಂತಿಕೆಯ ಸೊಕ್ಕನ್ನು ಇಳಿಸಿಕೊಂಡಂತಿಲ್ಲ. ಶೃಂಗಸಭೆಯಲ್ಲಿ ರಾಷ್ಟ್ರಗಳು ಬಿಕ್ಕಟ್ಟಿಗೆ ಪರಿಹಾರೋಪಾಯವಾಗಿ ಎಂದು ಭಾವಿಸಿ ಆಂತರಿಕವಾಗಿ ತಮ್ಮ ಅರ್ಥವ್ಯವಸ್ಥೆಯನ್ನು ಮಾತ್ರ ರಕ್ಷಿಸಿಕೊಳ್ಳುವ ಪ್ರಯತ್ನಮಾಡಬಾರದು ಎಂದು ಒಪ್ಪಿಕೊಂಡರು. ಆದರೂ ದಿವಾಳಿಬಿದ್ದ ಕಂಪನಿಗಳ ಲೆಕ್ಕವನ್ನು ಮುಚ್ಚಿಟ್ಟು, ಅವುಗಳ ಬೆಲೆ ಷೇರುಪೇಟೆಯಲ್ಲಿ ಮತ್ತೊಮ್ಮೆ ಏರುವಂಥ, ಲೆಕ್ಕಪತ್ರ ಸಂಹಿತೆಗೆ ವಿರೋಧವಾದ ಕ್ರಮಗಳನ್ನು ಅಮೆರಿಕಾ ರಹಸ್ಯವಾಗಿ ನಡೆಸಿರುವುದು ಈಗಷ್ಟೆ ಬಹಿರಂಗವಾಗಿದೆ. ಮೊನ್ನೆತಾನೆ ಪಾಪರ್ ಎಂದು ಸಾಬೀತಾಗಿ, ಸರ್ಕಾರದಿಂದ ಅಪಾರ ಹಣದ ನೆರವನ್ನು ಗಿಟ್ಟಿಸಿದ ವಾಲ್‌ಸ್ಟ್ರೀಟ್ ಖದೀಮ ಕಂಪನಿಗಳು, ಸಿಟಿ ಬ್ಯಾಂಕ್, ಎಐಜಿ, ಬ್ಯಾಂಕ್ ಆಫ್ ಅಮೆರಿಕಾ ಮುಂತಾದುವು ಮಾಯಾಚಮತ್ಕಾರವೆಂಬಂತೆ ಈಗ ಲಾಭಗಳಿಕೆಯನ್ನು ಪ್ರಕಟಿಪಡಿಸಿವೆ. ಇಂಥವರನ್ನು ನಂಬಿ ಭಾರತ ತನ್ನ ವಿಮಾ ಕ್ಷೇತ್ರವನ್ನು, ಬ್ಯಾಂಕುಗಳನ್ನು ವಿದೇಶೀ ಬಂಡವಾಳಕ್ಕೆ ತೆರೆದಿಟ್ಟು, ನೀತಿಗಳನ್ನು ಸಡಿಲಗೊಳಿಸಿದರೆ, ಪೆಂಗರಾಗುತ್ತಾರೆ ಅಷ್ಟೆ. ಅಲಿಪ್ತರಾಷ್ಟ್ರಗಳಿಗೆ ನಾಯಕತ್ವ ನೀಡುತ್ತಿದ್ದ ಭಾರತ ಸಾಮ್ರಾಜ್ಯಶಾಹಿಯ ಕೈಗೊಂಬೆಯಾಗುವ ಹಂಬಲವನ್ನು ಕೈ ಬಿಡುವುದೆ?

ಉಪಾಧ್ಯಾಯ ಮತ್ತು ಅಟಲ ಬಿಹಾರಿ ವಾಜಪೇಯಿಯವರಿಗೆ ರಾಜಕೀಯ ಮಾರ್ಗದರ್ಶನ ನೀಡುತ್ತಿದ್ದರು. (ಈಗ ಅಡ್ವಾನಿಯವರಿಗೆ ಸಲಹೆ ನೀಡಲು ಭಾಗವತ್ ಬಂದಿದ್ದಾರೆ). ಮುಂದೆ ರಾಮದೇವ್ ಅವರ ಸರದಿ. ಈಗಾಗಲೆ ಜೆ.ಪಿ. ಚಳುವಳಿಯಿಂದ ಒಂದಷ್ಟು 'ಶುದ್ಧ' ನಾಯಕರು ಮಹಾನ್ ಭಾರತವನ್ನು ನಿರ್ಮಲಗೊಳಿಸಿದ್ದಾರೆ, ಇನ್ನು ಮುಂದೆ ರಾಮದೇವ್ ಅವರು ಅದನ್ನಿನ್ನೂ ಶುದ್ಧೀಕರಿಸಿ ಪವಿತ್ರ ಗಂಗೆಯ ಬಳಿಗೆ ಕೊಂಡೊಯ್ಯುತ್ತಾರೆ.

ಹೇಗಿದೆ ಪ್ರಣಾಳಿಕೆ! ಆದರೆ ಐದು ವರ್ಷ ಕಾಯಬೇಕಲ್ಲ, ಯೋಗಿ ಬಾಬಾ ರಾಮದೇವ್ ಅವರು ರಾಜಕೀಯದಿಂದ ಮತ್ತು ರಾಜಕೀಯ ನಾಯಕರಿಂದ ದೂರವೇನೂ ಉಳಿದಿಲ್ಲ, ಅಂತೆಯೇ ಸಮಾವೇಶದಲ್ಲಿ ಪಾಲ್ಗೊಂಡಿದ್ದ ನೂರಾರು ಜನರೂ ನೇರವಾಗಿ ರಾಜಕೀಯ ಪ್ರಚಾರ ಮಾಡುತ್ತಿದ್ದವರೇ. ಉಮಾ ಭಾರತಿ ಮತ್ತು ಸಾಧ್ವಿ ಋತಂಭರಾರಂತೆ ಅವರೆಲ್ಲಾ ಭಾರತೀಯ ಜನತಾ ಪಕ್ಷದ ಕಾರ್ಯಕರ್ತರು. ಸ್ವಾಮಿಗಳ ಸಮ್ಮುಖದಲ್ಲಿ ಯಾರೋ ಒಬ್ಬ ಹಿರಿಯರು 'ಸ್ವಾಭಿಮಾನ'ದ ಬಗ್ಗೆ ಉಪನ್ಯಾಸ ನೀಡುತ್ತಿದ್ದರು. ಹಿಂದಿ ಗದ್ಯವಾಕ್ಯಗಳನ್ನು ಪದ್ಯದಂತೆ ರಾಗರಾಗವಾಗಿ ಹೇಳುವ ನೈಪುಣ್ಯ ಅವರದು. ಅವರು ಹೇಳಿದ್ದನ್ನು ಬೇರೆಯವರಿಂದ ನಾವು ಹತ್ತಾರು ಬಾರಿ ಕೇಳಿದ್ದೇವೆ: ''ನಮ್ಮ ದೇಶದ ಜನರಲ್ಲಿ ಸ್ವಾಭಿಮಾನವಿಲ್ಲ, ಆದ್ದರಿಂದಲೇ ನಮ್ಮ ಅದ್ಭುತ ದೇಶವು ತನ್ನ ಹಿಂದಿನ ಹಿರಿಮೆಯನ್ನು ಕಳೆದುಕೊಂಡಿದೆ. ಇಂದಿನ ತಂದೆ-ತಾಯಿಯರಿಗೆ ತಮ್ಮ ಮಕ್ಕಳನ್ನು ಹೇಗೆ ಬೆಳಸಬೇಕೆಂದು ಗೊತ್ತಿಲ್ಲ, ಆದ್ದರಿಂದ ಅವರೆಲ್ಲಾ ಹಾಳಾಗಿದ್ದಾರೆ. ನಮಗೆ ಮಂಗಲ್ ಪಾಂಡೆ ಹೆಸರು ಗೊತ್ತಿಲ್ಲ, ಚಂದ್ರಶೇಖರ ಆಜ಼ಾದರ ನೆನಪು ಉಳಿದಿಲ್ಲ'' ಇತ್ಯಾದಿ. ಋತಂಭರಾ ಅವರನ್ನು ಬೆಳೆಸಿದ ತಂದೆ-ತಾಯಿಗಳ ಬಗ್ಗೆ ಸ್ವತಃ ಆಕೆ ಯಾವ ಅಭಿಪ್ರಾಯವನ್ನಾದರೂ ಇಟ್ಟುಕೊಂಡಿರಲಿ, ಅದರ ಮಾತು ಬೇರೆ. ಆದರೆ ಮಂಗಲ್ ಪಾಂಡೆಯನ್ನು ಮರೆತಿರುವವರು ಯಾರು? ಸ್ವತಃ ಆಜ಼ಾದ್‌ರ ಸಿದ್ಧಾಂತಗಳನ್ನು ತಿಳಿದಿದ್ದರೆ ತಾನೆ ಈ ಮಹನೀಯರು ಮರೆಯುವುದು! ''ಹಿಂದುಸ್ತಾನ್ ಸಮಾಜವಾದಿ ಗಣತಂತ್ರ ಸಂಘಟನೆ'' ಎಂಬುದು ಆಜ಼ಾದ್, ಭಗತ್ ಸಿಂಗ್ ಮತ್ತು ಅವರ ಸಂಗಾತಿಗಳು ಕಟ್ಟಿದ್ದು, ಬೆಳೆಸಿದ್ದು. ಅದರ ಕಾರ್ಯಕ್ರಮ ಘೋಷಣೆ ಮತ್ತು ಸಂವಿಧಾನ ಲಭ್ಯವಿವೆ. ಅದನ್ನು ಈ 'ಸ್ವಾಭಿಮಾನಿ ಭಾರತೀಯ' ಉಪನ್ಯಾಸಕರಾಗಲಿ, ಸ್ವಾಮಿ ರಾಮದೇವ್ ಅವರಾಗಲಿ ಎಂದಾದರೂ ಓದಿದ್ದಾರೆಯೆ ಮತ್ತು ಓದಿದ್ದರೆ ಅದನ್ನು ಅಂಗೀಕರಿಸುತ್ತಾರೆಯೆ? ಸಮಾಜವಾದವೆಂದರೆ ಹೌಹಾರಿ ಅಬ್ಬರಿಸುವ ಭಾರತೀಯ ಜನತಾ ಪಕ್ಷದ ಈ ಕಾರ್ಯಕರ್ತರಿಗೆ ಚಂದ್ರಶೇಖರ ಆಜ಼ಾದರ ಹೆಸರು ಹೇಳುವ ನೈತಿಕ ಹಕ್ಕು ಏನಿದೆ?

ಹೇಗೂ ಇರಲಿ, ಇನ್ನೈದು ವರ್ಷದ ನಂತರ ರಾಮದೇವ್ ಅವರು ''ನೇರವಾಗಿ'' ರಾಜಕೀಯ ಪ್ರವೇಶಿಸಿ ನಮಗೆಲ್ಲಾ ಸ್ವರ್ಗಲೋಕದ ಸುಖವನ್ನು ನೀಡುತ್ತಾರೆ. ಇಷ್ಟು ದಶಕ, ಶತಮಾನಗಳನ್ನೇ ಕಳೆದಿದ್ದೇವೆ. ಐದು ವರ್ಷ ಏನು ಮಹಾ! 'ಮಹಾ' ಏನೆಂದರೆ ಆಗಲಾದರೂ ವೈಜ್ಞಾನಿಕ ಸಮಾಜವಾದದ ವ್ಯವಸ್ಥೆಯ ಅನಿವಾರ್ಯತೆ ಗೊತ್ತಾಗಬಹುದು. ಅಲ್ಲಿಯವರೆಗೆ ಜೈ ರಾಮದೇವ್, ಜೈ ಸ್ವಾಭಿಮಾನ್. ದೇಶದ ಸಾರ್ವಭೌಮತ್ವಕ್ಕೆ ಪುಡಿಕಾಸಿನ ಬೆಲೆ ನೀಡದೆ ಅಮೇರಿಕಾ-ಇಸ್ರೇಲ್‌ಗಳ ಪರಮ ಭಂಟರಾಗಿ ವರ್ತಿಸುತ್ತಿರುವವರಿಗೆ ಸ್ವಾಭಿಮಾನ ಬೇರೆ ಕೇಡು!

* * *

ಜೋಗಿಂದರ್ ಸಿಂಗ್ ಬಹಳ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಪೊಲೀಸ್ ಅಧಿಕಾರಿಯಾಗಿದ್ದರು; ನಂತರ ಸೆಂಟ್ರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಶನ್‌ನ ನಿರ್ದೇಶಕರಾಗಿದ್ದರು. ಶ್ರೀ ದೇವೇಗೌಡರು ಪ್ರಧಾನಿಯಾಗಿದ್ದಾಗ ಉನ್ನತ ಅಧಿಕಾರದಲ್ಲಿದ್ದ ಒಬ್ಬ ರಾಜಕೀಯ ನಾಯಕರ ಪರವಾಗಿ ಈತನಿಗೆ ಏನೋ ಹೇಳಿದ್ದರಂತೆ. ಅದನ್ನು ಹತ್ತು ವರ್ಷಗಳ ನಂತರ ಈಗ ಹೇಳುತ್ತಿರುವುದು ಸೋಜಿಗದ ಸಂಗತಿ. ಭಾರತೀಯ ಜನತಾ ಪಕ್ಷವು ವಿಜಯಿಯಾಗಬೇಕೆಂಬ ದೃಷ್ಟಿಯಿಂದ ಈ ಹೇಳಿಕೆ ನೀಡಿರುವುದು ಸ್ಪಷ್ಟವಾಗಿದೆ. ಜೋಗಿಂದರ್ ನಡೆಸುತ್ತಿದ್ದ ತನಿಖೆಯನ್ನು ನಿಲ್ಲಿಸಬೇಕೆಂದು ಪ್ರಧಾನಿಯು ಅವರಿಗೆ ಹೇಳಿದ್ದುದಾಗಿ ಈಗ ಬಾಯಿ ಬಿಡುತ್ತಿರುವ ವ್ಯಕ್ತಿಗೆ ಹತ್ತು ವರ್ಷಗಳಿಗೂ ಹೆಚ್ಚು ಕಾಲ ಬಾಯಿ ಹೊಲಿಯಲಾಗಿತ್ತೆ? ಚುನಾವಣಾ ಸಂದರ್ಭದಲ್ಲಿ ಆರ್ಥಿಕ, ವಿದೇಶಾಂಗ ನೀತಿಗಳನ್ನೋ ಆಂತರಿಕ ಭದ್ರತೆಯ ಬಗೆಗೋ ಚರ್ಚೆ ಮಾಡುವ ಬದಲು ಕೊಚ್ಚೆ ಎರಚುವುದಷ್ಟೇ ಚುನಾವಣಾ ಪ್ರಚಾರ ಎಂಬಂತೆ ವರ್ತಿಸುತ್ತಿರುವವರಲ್ಲಿ ಜೋಗಿಂದರ್ ಒಬ್ಬರು. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹಿಗ್ಗಿಸುವ ಬದಲಾಗಿ ಕತ್ತು ಹಿಚುಕುವ ಕ್ರಮ ಇದು. ಕಾಂಗ್ರೆಸ್ ಕೂಡ ಇಂತಹ ಕೀಳುಮಟ್ಟದ ಕೃತ್ಯಕ್ಕೆ ಹೊರತಲ್ಲ. ಶ್ರೀಮತಿ ಇಂದಿರಾ ಗಾಂಧಿಯವರ ಭಕ್ತ ಎಂಬ ಟೈಟಲ್ ಒಂದನ್ನೇ ರಾಜಕೀಯ ಬಂಡವಾಳವನ್ನಾಗಿ ಹೊಂದಿದ ಜಗದೀಶ ಟೈಟ್ಲರ್ ಮತ್ತು ಸಜ್ಜನಕುಮಾರ್ ಎಂಬ ದುರ್ಜನ ಇತ್ತೀಚೆಗಷ್ಟೆ ಕೇಂದ್ರ ತನಿಖಾ ಕಚೇರಿಯಿಂದ ಸಭ್ಯತೆಯ ಅರ್ಹತಾ ಪತ್ರ ಪಡೆದುಕೊಂಡದ್ದು ಸೋನಿಯಾ ಮತ್ತು ಮನಮೋಹನ್ ಸಿಂಗ್ ಅವರ ಮಧ್ಯಪ್ರವೇಶದಿಂದ ಎಂಬುದಕ್ಕೆ ಯಾವ ದಾಖಲೆಯ ಅವಶ್ಯಕತೆಯೂ ಇಲ್ಲ. ಆಗಾಗಿನ ಸರ್ಕಾರಗಳು ಸಿ.ಬಿ.ಐ. ಮತ್ತು ಇತರ ಸರ್ಕಾರಿ ಕೇಂದ್ರ ಸಂಸ್ಥೆಗಳನ್ನು ದುರುಪಯೋಗಪಡಿಸಿಕೊಂಡಿರುವುದು ಖಂಡನೀಯವಾದ ಒಂದು ಸತ್ಯ. ಆದರೆ ಜೋಗಿಂದರ್ ಈಗ ದೇವೇಗೌಡರ ತಥಾಕಥಿತ ನಿರ್ದೇಶನವನ್ನು ಪ್ರಸ್ತಾಪಿಸಿರುವುದು ಉಗ್ರಗಾಮಿ ಸಂಜಯ್ ದತ್ ಹೇಳಿರುವ ಪೊಳ್ಳುಮಾತಿಗಿಂತಲೂ ಭಿನ್ನವಲ್ಲ. ಜೈಲಿನಲ್ಲಿ ಇರಬೇಕಾಗಿದ್ದ ಈ ''ಅಮೋಘ ನಟ'' ಈಗ ಮುಲಾಯಂ ಪಕ್ಷದ ತಾರೆಯಾಗಿ ಮಿಂಚುತ್ತಿದ್ದಾನೆ. ಈಗ ಆತ ಹೇಳುತ್ತಾನೆ, ''ಪೊಲೀಸರ ಕ್ರೂರ ಹಿಂಸೆಯಿಂದಾಗಿ ನಾನು ತಪ್ಪೊಪ್ಪಿಗೆಯ ಪತ್ರ ಕೊಡಬೇಕಾಯಿತು'' ಎಂದು. ಇಷ್ಟು ವರ್ಷಗಳ ಕಾಲ ಸುಮ್ಮನಿರದೆ ಮುಂಚೆಯೇ ನ್ಯಾಯಾಲಯಕ್ಕೆ ಇದನ್ನು ನಿವೇದಿಸಿಕೊಳ್ಳಬಹುದಾಗಿತ್ತು, ಸಾಲದ್ದಕ್ಕೆ ಈಗ ಆತ ಹೇಳುತ್ತಾನೆ, ''ನಾನು ಮುಸಲ್ಮಾನ ತಾಯಿಯ ಮಗನಾದ್ದರಿಂದ ನನ್ನನ್ನು ಬಂಧಿಸಿ ಪೊಲೀಸರು ಮತ್ತು ಸರ್ಕಾರ ಹಿಂಸಿಸುತ್ತಿವೆ,'' ಎಂದು. ದಾವೂದ್ ಇಬ್ರಾಹಿಂನ ಪುಂಡುತಂಡದೊಡನೆ ಶಾಮೀಲಾಗಲು ತನ್ನ ತಾಯಿಯ ಮತಧರ್ಮವೇ ಈತನಿಗೆ ಕಾರಣವಾಗಿತ್ತೆ? ಅಥವಾ ಕಪ್ಪು ಪ್ರಪಂಚದ ಸಖ್ಯದಿಂದ ಲಾಭ ಪಡೆದಿದ್ದುದು ಕಾರಣವಾಗಿತ್ತೋ?

ಒಂದು ಹೊಸ ನಿಯಮವನ್ನು ಜಾರಿಗೆ ತರಬೇಕೇನೋ ಎನಿಸುತ್ತದೆ. ಇಲ್ಲದಿದ್ದರೆ ಚುನಾವಣೆಯ ಸಂದರ್ಭದ ಚರ್ಚೆಯು ಬಹಳ ಕೀಳುಮಟ್ಟದ್ದಾಗುತ್ತದೆ, ಇಲ್ಲವೇ ಕೆಸರು ಎರಚುವ ಒಂದು ಸಂಗತಿ ಬಿಟ್ಟು ಬೇರೇನೂ ಇರುವುದಿಲ್ಲ. ಚುನಾವಣಾ ಸಂದರ್ಭದಲ್ಲಿ ಕೊಡುವ ಹೇಳಿಕೆಗಳನ್ನು ನಿಜವೆಂದು ಸಾಬೀತುಪಡಿಸಲು ಅಭ್ಯರ್ಥಿಗಳು ಮತ್ತು ಪ್ರಚಾರಕರು ಬಾಧ್ಯರಾಗಬೇಕು. ಚುನಾವಣೆಯ ನಂತರವಾದರೂ ಇಂತಹ ಹೇಳಿಕೆಗಳನ್ನು ಸಂಬಂಧಪಟ್ಟ ವಕ್ತಾರರ ಮುಖಕ್ಕೆ ಹಿಡಿದು ಸಮಜಾಯಿಷಿ ನೀಡುವಂತೆ ಮಾಡಬೇಕು. ಅವರು ಹೇಳಿದ್ದಕ್ಕೆ ಪುರಾವೆ ಇಲ್ಲದಿದ್ದರೆ ಅವರು ಕಾನೂನು ಕ್ರಮಕ್ಕೆ ಒಳಗಾಗುವಂತಿರಬೇಕು. ಸಂಜಯ ದತ್ ನಿಜಕ್ಕೂ ಶಿಕ್ಷೆಗೆ ಅರ್ಹನಾಗಿದ್ದಾನೆ ಎಂಬುದು ಈಗಿನ ಆತನ ತಟವಟದ ಮಾತಿನಿಂದ ಗೊತ್ತಾಗುತ್ತದೆ.

* * *

ಇರಾಕಿನ ಒಬ್ಬ ಪತ್ರಕರ್ತನು ತನ್ನ ಆಳವಾದ ಭಾವನೆಗಳನ್ನು, ಸಿಟ್ಟು ಮತ್ತು ದುಃಖವನ್ನು, ಪ್ರಕಟಿಸಲು ಪ್ರಯೋಗಿಸಿದ ವಿಧಾನವನ್ನು ನಮ್ಮ ದೇಶದಲ್ಲಿ ಅತ್ಯಂತ ಕಳಪೆ ವಿಚಾರಗಳ ಹಿನ್ನೆಲೆಯಲ್ಲಿ ಬಳಸಲಾಗುತ್ತಿರುವುದು ಯಾರಿಗೂ ಗೌರವ ತರುವಂಥದಲ್ಲ. ಇರಾಕಿನ ಪರ್ತಕರ್ತನು ಬುಷ್‌ಗೆ ಗುರಿಯಿಕ್ಕಿ ಬೂಟ್ ಒಗೆದ; ಅದು ಗುರಿ ಮುಟ್ಟಲಿಲ್ಲವೆಂದು ಇನ್ನೊಂದನ್ನೂ ಎಸೆದ. ವಿಶ್ವದ ಕೋಟಿಗಟ್ಟಲೆ ಜನ ಅವನ ಸಿಟ್ಟನ್ನು ಅರ್ಥ ಮಾಡಿಕೊಂಡು ಸಾಂತ್ವನ ವ್ಯಕ್ತಪಡಿಸಿದ್ದಾರೆ. ಹತ್ತು ಲಕ್ಷ ಇರಾಕಿ ನಾಗರಿಕರನ್ನು ಕೊಂದ ಬುಷ್ ವಿರುದ್ಧ ಸಿಟ್ಟಾಗುವುದಕ್ಕೂ ಭಾರತೀಯ ಜನತಾ ಪಕ್ಷದ ಆಂತರಿಕ ವೈಮನಸ್ಯದಿಂದ ಅಸಮಾಧಾನ ವ್ಯಕ್ತಪಡಿಸುವುದಕ್ಕೂ ವ್ಯತ್ಯಾಸವಿಲ್ಲವೆ? ಲಾಲಕೃಷ್ಣ ಅಡ್ವಾನಿಯವರತ್ತ ಪಾದರಕ್ಷೆಯನ್ನು ಎಸೆದವನು ಇರಾಕಿನ ಪತ್ರಕರ್ತನಿಗೆ ಸಹ ಅವಮಾನವೆಸಗಿದ್ದಾನೆ! ಇಂತಹ ಪ್ರಸಂಗದ ಹಿನ್ನೆಲೆಯಲ್ಲಿ ಆತ್ಮಾವಲೋಕನ ಮಾಡಿಕೊಂಡರೆ ನಮ್ಮದು ಎಂತಹ ಖಾಲಿ ಕೊಡ ಎಂಬುದು ತಿಳಿಯುತ್ತದೆ. ಸಿಟ್ಟಿನ ಪ್ರದರ್ಶನಕ್ಕೂ ನಮಗೆ ಬೇರೆ ದೇಶಗಳ ಮಾದರಿ ಬೇಕು! ಇಷ್ಟು ವರ್ಷ ಪಾದರಕ್ಷೆಯ ಪ್ರಯೋಗ ಇಲ್ಲದಿದ್ದುದು ಈಗ ದಿಢೀರನೆ ಏಕೆ ಅವತರಿಸಬೇಕಿತ್ತು!!

* * *

ಏಪ್ರಿಲ್ ಮೊದಲ ವಾರದಲ್ಲಿ ದೆಹಲಿಯಲ್ಲಿ ಕಂಡುಬಂದ ಎರಡು ಪ್ರಸಂಗಗಳು ಹೀಗಿವೆ:

(ಅ) ನೇಹಾ ಗ್ರೆವಾಲ್ ಬ್ಯಾಡ್ಮಿಂಟನ್ ಪಂದ್ಯಗಳಲ್ಲಿ (ಸಾನಿಯಾರಂತೆ) ಉಚ್ಚಮಟ್ಟದ ಪ್ರದರ್ಶನ ನೀಡಲಾಗದೆ ಸೋಲು ಅನುಭವಿಸಿದ್ದರಿಂದ ಕೆಲವು ಯುವಕರು ಜ್ಯೋತಿಷಿಯೊಬ್ಬನ ಬಳಿ ತೆರಳಿ ನೇಹಾಳ ಗ್ರಹಗತಿಗಳನ್ನು ಸರಿಪಡಿಸಲು ಹವನವೊಂದನ್ನು ನಡೆಸ ಬೇಕೆಂದು ಆಗ್ರಹಿಸಿದರು. ಜ್ಯೋತಿಷಿಯ ಸಹಾಯ ವಿಲ್ಲದೆಯೂ ನಾಳಿನ ದಿನಗಳಲ್ಲಿ ನೇಹಾ ಮತ್ತೆ ಉತ್ತಮ ಆಟಗಾರ್ತಿಯಾಗಿ ಹೊರಬರುತ್ತಾಳೆಂದು ಆಶಿಸಬಹು ದಾಗಿದೆ. (ಆ) ಡಾ|| ಆರ್. ಎಸ್. ಪಂಚಮುಖಿ ಎಂಬ ವಿದ್ವಾಂಸರ ಹೆಸರು ಅರ್ಥಶಾಸ್ತ್ರದ ಕ್ಷೇತ್ರದಲ್ಲಿ ಪ್ರಖ್ಯಾತವಾಗಿದೆ. ಅವರು ಮೂರು ದಶಕಗಳಿಗೂ ಮೀರಿ ಅರ್ಥಶಾಸ್ತ್ರದಲ್ಲಿ ಪ್ರಾಧ್ಯಾಪಕರಾಗಿ ಮತ್ತು ಸಂಶೋಧಕರಾಗಿ ದೆಹಲಿಯಲ್ಲಿ ಕೆಲಸ ಮಾಡಿ ನಿವೃತ್ತಿ ಹೊಂದಿದ್ದಾರೆ. ಡಾ|| ವಿ.ಕೆ.ಆರ್.ವಿ. ರಾವ್ ಮತ್ತು ಡಾ|| ಕೆ. ಎನ್. ರಾಜ್ ಅಂಥವರ ಜೊತೆ ಕೆಲಸ ಮಾಡಿದ್ದ ಈ ವಿದ್ವಾಂಸರು ನಿವೃತ್ತಿಯ ನಂತರ ಮಾಡುತ್ತಿರುವುದೇನು ಗೊತ್ತೇ? ''ಹರಿ-ವಾಯುಗಳ ಪ್ರೇರಣೆಯಿಂದ'' ಶ್ರೀಯುತರು ಈಗ ದೆಹಲಿಯ ಆರ್. ಕೆ. ಪುರಂನಲ್ಲಿ ''ಸತ್ಸಂಗ'' ನಡೆಸುತ್ತಾರೆ, ಮಾಧ್ವ ಸಂಪ್ರದಾಯದಲ್ಲಿ ಪುರಾಣ-ಪುಣ್ಯಕಥೆಗಳನ್ನು ಹೇಳಿ ಅಪಾರ ಪುಣ್ಯ ಕಟ್ಟಿಕೊಳ್ಳುತ್ತಿದ್ದಾರೆ. ಅದು ಅವರ ಹಕ್ಕು, ಅದನ್ನು ಪ್ರಶ್ನಿಸುವಂತಿಲ್ಲ, ಬದಲಾಗಿ ವಿನಯದಿಂದ ಮಾನ್ಯ ಮಾಡಬೇಕು. ಆತಂಕಕ್ಕೆ ಬೇರೆಯ ಕಾರಣವಿದೆ: ಈ ಪುಣ್ಯಾತ್ಮ ರಾಘವೇಂದ್ರನ ಕೃಪೆಯಿಂದ ವಿದ್ಯಾರ್ಥಿಗಳಿಗೆ ಅರ್ಥಶಾಸ್ತ್ರದ ಉಪನ್ಯಾಸ ನೀಡುವ ಬದಲು ಬೃಂದಾವನದ ದರ್ಶನ ಮಾಡಿಸು ತ್ತಿದ್ದರೋ ಏನೋ, ಎಂದು. ಪಂಚಮುಖಿಯವರು ಪರವಾಗಿಲ್ಲ, ಏಕೆಂದರೆ ಬೆಂಗಳೂರಿನಲ್ಲಿ ಇಬ್ಬರು ''ಘನ'' ವಿದ್ವಾಂಸರು (ಅಥವಾ 'ದ್ರವಾನಿಲ' ವಿದ್ವಾಂಸರು) ಕಾಲೇಜುಗಳಿಂದ ನಿವೃತ್ತಿ ಪಡೆಯುವ ಮೊದಲೆ ಕಾಲೇಜಿನಲ್ಲಿ ಪಾಠ ಪ್ರವಚನದ ಬದಲು ಸಾರ್ವಜನಿಕವಾಗಿ ಪುರಾಣ ಪ್ರವಚನದಲ್ಲಿ ತೊಡಗಿಕೊಂಡುಬಿಟ್ಟಿದ್ದರು. ಅವರಲ್ಲಿ ಒಬ್ಬರು ಸಂಸ್ಕೃತ ಪಂಡಿತರು. ಬೆಂಗಳೂರಿನ ಕೆ. ಆರ್. ಪುರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಧ್ಯಾಪಕ ರಾಗಿದ್ದ ಕಾಲದಲ್ಲಿ ಒಮ್ಮೆ ಅವರು ಅಧ್ಯಾಪಕರ ಕೊಠಡಿಯಲ್ಲಿ ಹೇಳಿದ್ದರಂತೆ, ''ಈ ಶೂದ್ರರಿಗೆಲ್ಲಾ ಸಂಸ್ಕೃತ ಕಲಿಸಲು ನಾನೇನು ಮೂರ್ಖನೆ'' ಎಂದು; ಅರ್ಥಾತ್, ''ನಾನು ತರಗತಿಗೆ ಹೋಗಿ ಪಾಠ ಮಾಡುವುದಿಲ್ಲ'' ಎಂದು. ಆದರೆ ಸಂಬಳ ಮತ್ತು ನಿವೃತ್ತಿ ವೇತನ ಪಡೆಯಲು ಅಡ್ಡಿಯಿಲ್ಲ; ಏಕೆಂದರೆ ಅವರು ಮೂರ್ಖರಲ್ಲವಲ್ಲ!

* * *

ಪಾಕಿಸ್ತಾನದ ಇಸ್ಲಾಮಾಬಾದ್‌ನಲ್ಲಿರುವ ಕೈದ್-ಎ-ಅಜಂ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರ ಪ್ರಾಧ್ಯಾಪಕರಾಗಿರುವ ಪರ್ವೇಜ್ ಹೂದ್‌ಭಾಯ್ ಎಂಬುವರು ಇತ್ತೀಚೆಗೆ ಒಂದು ಲೇಖನ ಪ್ರಕಟಿಸಿದ್ದಾರೆ. ವಿಷಯ: ಪಾಕಿಸ್ತಾನವು ಸೌದಿ ಅರೇಬಿಯಾ ಸಂಪ್ರದಾಯದತ್ತ ಹೊರಳಿದ್ದು. ಅದರಲ್ಲಿ ಅವರು ಪ್ರಸ್ತಾಪಿಸಿರುವ ವಿಷಯಗಳನ್ನು ಸಂಗ್ರಹಿಸುವುದು ಕಷ್ಟ. ಆದರೆ ಅವರ ಅಭಿಪ್ರಾಯಗಳು ಸ್ಥೂಲವಾಗಿ ಹೀಗಿವೆ: (ಅ) ಪಾಕಿಸ್ತಾನದ ವಾಯವ್ಯದಲ್ಲಿ ಮಾತ್ರ ಜಡ್ಡು ಮತ ಸಂಪ್ರದಾಯದ ಪ್ರಾಬಲ್ಯವಿದೆ ಮತ್ತು ಮದರಸಾಗಳು ವಿಪುಲವಾಗಿ ಭಯೋತ್ಪಾದಕರನ್ನು ಸೃಷ್ಟಿಸುತ್ತಿವೆ ಯೆಂಬುದು ಸರಿಯಲ್ಲ; ಏಕೆಂದರೆ, ಪಾಕಿಸ್ತಾನದ ಶಿಕ್ಷಣ ವ್ಯವಸ್ಥೆಯಲ್ಲಿ ಎಲ್ಲ ಹಂತಗಳಲ್ಲೂ ಉಗ್ರಗಾಮಿತ್ವದ ಬೋಧನೆ ನಡೆಯುತ್ತಿದೆ. ಹೀಗೆಯೇ ಮುಂದು ವರಿದರೆ ಆಪತ್ತು ತಪ್ಪಿದ್ದಲ್ಲ. ಈ ವಿದ್ಯಾರ್ಥಿಗಳು ತಮ್ಮಂತೆ ಅಪ್ಪಟ ಜಡ್ಡುಮತಿಗಳಾದವರ ಜೊತೆ ಮಾತ್ರವೇ ವ್ಯವಹರಿಸಲು ಸಾಧ್ಯ; ಇತರರನ್ನು ದ್ವೇಷಿಸುತ್ತಾರೆ. (ಇದೇ ಸಂಚಿಕೆಯಲ್ಲಿ ಡಾ|| ಕೆ. ಎನ್. ಪಣಿಕ್ಕರ್ ಅವರ ಲೇಖನದ ಸಂಗ್ರಹಾನುವಾದವನ್ನು ನೋಡಿ. ಆರೆಸ್ಸೆಸ್‌ನವರು ನಡೆಸುತ್ತಿರುವ ಸರಸ್ವತಿ ವಿದ್ಯಾಮಂದಿರಗಳನ್ನವರು ಪ್ರಸ್ತಾಪಿಸಿದ್ದಾರೆ. ಅಲ್ಲೂ ಶಿಕ್ಷಣದ ಹೆಸರಿನಲ್ಲಿ ದ್ವೇಷದ ಬೀಜ ಬಿತ್ತಲಾಗುತ್ತಿದೆ). (ಆ) ವಾಯವ್ಯ ಪ್ರಾಂತ್ಯದ ಜಡ್ಡು ಮತಧರ್ಮದ ಪ್ರಭಾವವು ಕ್ರಮೇಣ ಪೆಷಾವರ್, ಇಸ್ಲಾಮಾಬಾದ್, ಲಾಹೋರ್, ಕರಾಚಿಗಳಿಗೂ ಹಬ್ಬುತ್ತಿದೆ. (ಇ) ಅಮೆರಿಕಾ ಮಾತ್ರವೇ ಭಯೋತ್ಪಾದಕರಂತೆ ವಾಯವ್ಯ ಪ್ರಾಂತಗಳಲ್ಲಿ ಜನಸಾಮಾನ್ಯರನ್ನು ಕೊಲ್ಲುತ್ತಿಲ್ಲ; ಪಾಕಿಸ್ತಾನದ ಸೈನ್ಯವೂ ಅದನ್ನೇ ಮಾಡುತ್ತಿದೆ. ಆದರೆ ನವಾಜ್ ಶರೀಫ್ ಮತ್ತು ಇಮ್ರಾನ್ ಖಾನ್ ಕೇವಲ ಅಮೆರಿಕಾವನ್ನು ಹೆಸರಿಸುತ್ತಾರೆ. (ಈ) ಭಾರತದಲ್ಲಿ ಸಾವಿರ ವರ್ಷಗಳಿಂದ ಇಸ್ಲಾಂ ಸಂಪ್ರದಾಯವೆಂದರೆ ಉನ್ನತ ಸಂಸ್ಕೃತಿ ಎನ್ನುವ ರೀತಿಯಲ್ಲಿ ಮತಧರ್ಮವು ಪಸರಿಸಿಕೊಂಡಿದೆ. ಅದರ (ಅಂದರೆ, ಭಾರತದ) ಭಾಗವಾಗಿದ್ದ ಪಾಕಿಸ್ತಾನದಲ್ಲೀಗ ಸೌದಿ ಅರೇಬಿಯಾದ ಮರಳು (ಮತ್ತು ಮರುಳು) ತುಂಬಿಕೊಳ್ಳುತ್ತಿದೆ, ಸೂಫಿ ಸಂತರ ಬದಲು ಕಟ್ಟಾ ಸಂಪ್ರದಾಯವಾದ ವಹಾಬಿ ಪಂಥ ಹಬ್ಬುತ್ತಿದೆ. (ಉ) ೨೫ ವರ್ಷಗಳ ಹಿಂದೆ ಪಾಕಿಸ್ತಾನದ ಸರ್ಕಾರವು ಇಸ್ಲಾಂ ಹೆಸರಿನಲ್ಲಿ ಅತ್ಯಂತ ಹೇಯ ಕೃತ್ಯಗಳನ್ನೆಸಗಿತು; ಈಗ ಆ ಕೊಳೆಯು ಜನಮನದಲ್ಲಿ ಸಾಂದ್ರವಾಗಿ ತುಂಬಿಕೊಂಡಿದೆ. (ಊ) ಪಾಕಿಸ್ತಾನದ ಹಳ್ಳಿಗಳಲ್ಲಿ ಪಶ್ಚಿಮ ಏಷ್ಯದ ಹಣದಿಂದಾಗಿ ದೊಡ್ಡ ದೊಡ್ಡ ಮಸೀದಿಗಳು ಬೆಳೆದಿವೆ. ಅಲ್ಲಿ ಸಲಾಫಿ ಮತ್ತು ದೇವ್‌ಬಂದಿ ಪಂಥಗಳ ಮತಾಂಧತೆಯ ಬೋಧನೆ ನಡೆಯುತ್ತಿದೆ. ಪಂಜಾಬ್ ಭಾಗದಲ್ಲಿ ಕೂಡ ಫಖ್ತೂನ್ ಮನೋಭಾವ ಹರಡುತ್ತಿ ರುವುದು ಇದರಿಂದಾಗಿಯೇ. ನ್ಯಾಯಾಲಯಗಳು ಸಹ ಈಗ ನಾಗರಿಕ ಸಂಹಿತೆಯ ಕಾನೂನಿನ ಬದಲಾಗಿ ಹನಾಫಿ ಕಾನೂನಿಗೆ ಪ್ರಾಶಸ್ತ್ಯ ನೀಡುತ್ತಿವೆ. (ಋ) ಸೌದಿ ಅರೇಬಿಯಾ ಮಾದರಿಯಲ್ಲಿ ಪಾಕಿಸ್ತಾನದಲ್ಲೀಗ ಸಂಸ್ಕೃತಿ, ಜ್ಞಾನ, ಕಲೆ, ಇವುಗಳಿಗೆ ವಿರೋಧ ವ್ಯಕ್ತವಾಗುತ್ತಿದೆ; ಸಂಗೀತಕ್ಕೆ ಸ್ಥಾನವಿಲ್ಲದಂತಾಗುತ್ತಿದೆ. ಆದರೆ ಶ್ರೀಮಂತರಿಗೆ ಇದಾವುದೂ ತಟ್ಟುವುದಿಲ್ಲ, ಅವರು ಯಥಾಪ್ರಕಾರ ತಮ್ಮ ಮೋಜಿನ ಅಮಲಿನಲ್ಲಿ ಕಳೆದುಹೋಗಿದ್ದಾರೆ. (ೠ) ಪಾಕಿಸ್ತಾನದ ಪ್ರಭುತ್ವಕ್ಕೆ ಈಗ ಇಸ್ಲಾಂ ಸವಾಲೆಸೆಯುತ್ತಿದೆ, ನನ್ನ ಜಡ್ಡುತನವನ್ನು ಸ್ವೀಕರಿಸು ಇಲ್ಲವೆ ತೊಲಗಿಹೋಗು, ಎಂದು. (ಎ) ಮಹಿಳೆಯರಂತು ಅತ್ಯಂತ ನಿಕೃಷ್ಟವಾಗಿ ಜೀವನ ಸವೆಸಬೇಕಾಗಿ ಬಂದಿದೆ. ಕರಾಚಿಯ ಒಂದು ಮದರಸಾದಲ್ಲಿ ನೂರಾರು ಜನ ಮಹಿಳೆಯರು ಸೇರಿದ್ದಾಗ ಗೊಂದಲವುಂಟಾಗಿ ೨೧ ಮಂದಿ ಸತ್ತರು. ಒಳಹೊಕ್ಕು ಸಹಾಯ ನೀಡಲು ಗಂಡಸರಿಗೆ ಅವಕಾಶ ನೀಡಲಿಲ್ಲ, ಇದು ಮುಲ್ಲಾ ನೀತಿ! ಬಾಲಾಕೋಟ್ ಎಂಬಲ್ಲಿ ಭೂಕಂಪವಾಗಿತ್ತು, ಅಕ್ಟೋಬರ್ ೨೦೦೫ ರಲ್ಲಿ, ವೈದ್ಯಕೀಯ ವಿದ್ಯಾಲಯದ ವಿದ್ಯಾರ್ಥಿಗಳು ಸ್ವಯಂಸೇವಕರಾಗಿ ಅಲ್ಲಿಗೆ ಹೋದಾಗ ಬಿದ್ದುಹೋಗಿದ್ದ ಸೂರುಗಳಡಿ ಸಿಕ್ಕಿಹಾಕಿಕೊಂಡಿದ್ದ ಹುಡುಗಿಯರನ್ನು ಹೊರತೆಗೆಯಲು ಅವರಿಗೆ ಅವಕಾಶ ನೀಡಲಿಲ್ಲ, ಇಂತಹ ಹತ್ತಾರು ಪ್ರಸಂಗಗಳನ್ನು ಉದಾಹರಿಸ ಬಹುದು. ಇದೆಲ್ಲಾ ಸೌದಿ ಅರೇಬಿಯಾದ ಕೀಳು ಮಾದರಿಗಳು. ಮಾರ್ಚ್ ೨೦೦೨ರಲ್ಲಿ ಒಂದು ಬಾಲಕಿಯರ ಶಾಲೆಗೆ ಬೆಂಕಿ ಬಿದ್ದಿತ್ತು, ಸೌದಿ ಅರೇಬಿಯಾದಲ್ಲಿ, ಮತಧರ್ಮದ ಪೊಲೀಸರು (ಮುತಾವೀನ್‌ಗಳು) ಹೆಣ್ಣುಮಕ್ಕಳನ್ನು ಜ್ವಾಲೆಗಳಿಂದ ಹೊರಬರಲು ಬಿಡಲಿಲ್ಲ, ಏಕೆಂದರೆ ಅವರು ಉದ್ದನೆಯ ತೊಡುಗೆಗಳನ್ನು (ಅಬಾಯಾಗಳನ್ನು) ತೆಗೆದಿರಿಸಿದ್ದರು.

– ಲೇಖನದಲ್ಲಿ ಇನ್ನೂ ಬೇರೆ ವಿವರಗಳೂ ಇವೆ. ಮುಖ್ಯವಾಗಿ ನಾವು ಗಮನಿಸಬೇಕಾದದ್ದು ಇದು : (೧) ತಾಲಿಬಾನ್‌ಗಳು ಭಾರತದ ಗಡಿಯನ್ನು ಮುಟ್ಟಿವೆ, ಕಟ್ಟೆಚ್ಚರ ಅತ್ಯಂತ ಮಹತ್ವದ್ದು; (೨) ಆಂತರಿಕವಾಗಿ ಮತಾಂಧತೆ ಹರಡುತ್ತಿದೆ. ಅದು ಇಸ್ಲಾಂ-ಹಿಂದುತ್ವ ಎರಡರಲ್ಲೂ ಕಾಣಸಿಗುತ್ತದೆ. ಇದು ಹಬ್ಬಿದರೆ ದೇಶಕ್ಕೆ ಕೇಡು ಖಚಿತ. (ಚುನಾವಣೆಯಲ್ಲಿ ಮತದಾರರು ಆಯ್ಕೆ ಮಾಡುವಾಗ ಇದನ್ನು ನೆನಪಿನಲ್ಲಿಡುವುದು ಆರೋಗ್ಯಕರ).

**ಆರ್ಥಿಕತೆ, ಇತಿಹಾಸ, ಸಂಸ್ಕೃತಿ, ಸಾಹಿತ್ಯ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಲೇಖನಗಳನ್ನು 'ಹೊಸತು' ಸ್ವಾಗತಿಸುತ್ತದೆ. ಲೇಖನಗಳು ಆದಷ್ಟು ಮಟ್ಟಿಗೆ ೧೫೦೦ ಪದಗಳನ್ನು ಮೀರದಂತಿದ್ದರೆ ಒಳ್ಳೆಯದು. ಅಂಚೆಚೀಟಿ ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಇರಿಸಿದ್ದರೆ ಪ್ರಕಟವಾಗದ ಬರಹಗಳನ್ನು ಹಿಂದಿರುಗಿಸಲಾಗುತ್ತದೆ.**

**'ಹೊಸತು' ಪತ್ರಿಕೆಯಲ್ಲಿ ಪ್ರಕಟವಾದ ಬರಹಗಳನ್ನು ಬೇರೆ ಪ್ರಕಟಣೆಗಳಲ್ಲಿ ಸೇರಿಸಿ ಕೊಳ್ಳಲು ಇಚ್ಛಿಸುವವರು ಪತ್ರ ಬರೆದು ಪರವಾನಗಿ ಪಡೆಯುವುದು ಸೂಕ್ತ. ಲೇಖಕರ ಅನುಮತಿಯನ್ನೂ ಪಡೆದುಕೊಳ್ಳಬೇಕು.**

*– ಸಂಪಾದಕ*




### ಅಗಲಿದ ಗುರುವರ್ಯ

**ಈ** ಇಪ್ಪತ್ತೊಂದನೇ ಶತಮಾನದಲ್ಲೂ
ಇಂತೊಬ್ಬ ಗುರು ಇದ್ದರೆಂದರೆ ಯಾರೂ
ನಂಬುವುದಿಲ್ಲ; ನಾನೂ ಕೂಡ!
ಅಂಥ ಗುರುವರ್ಯರಿವರು
ಎಸ್. ಎಸ್. ಹಿರೇಮಠರು.
ಹುಟ್ಟಿದ್ದು ಬೆಳಗಾವಿ; ಬೆಳೆದದ್ದು
ಧಾರವಾಡ; ಬಾಳಿದ್ದು ಬಳ್ಳಾರಿ.
ಹೀಗೆ ಮುಪ್ಪುರಿಗೊಂಡ ಚೇತನಕ್ಕೊಂದೇ
ಗುರಿ; ಅನ್ಯಾಯ, ಶೋಷಣೆ, ಅಮಾಯಕ
ದನಿಗಳನ್ನು ಕೇಳಿಸಿಕೊಳ್ಳುವ ಉಸಾಬರಿ!
ಊರು-ತೇರು; ಹಬ್ಬ-ಹರಿದಿನ ಹೀಗೆ
ಸಂಸ್ಕೃತಿಯನ್ನೇ ಬಗೆದು ನೋಡುವ ಹಂಬಲ!
ಅದನ್ನೆಲ್ಲ ಅಕ್ಕರದೊಳು ಝುಳಪಿಸುವ ಛಲ!
ಕಾಲೇಜು-ಮನೆ; ಮನೆ ಕಾಲೇಜು
ಹೀಗೆ ಎಲ್ಲಿ ಹೋದರೂ; ಎಲ್ಲೂ ಹೋಗದಿದ್ದರೂ
ಇವರಿಗೊಂದೇ ಧ್ಯಾನ! ಒಂದೇ ಗಾನ!
ಅದು ಸಮತಾ ಗಾನ - ಸರ್ವ ಸಮತಾ ಗಾನ!
ಶಿಷ್ಯನೊಳಗೊಬ್ಬ ಗುರು; ಗುರುವಿನೊಳಗೊಬ್ಬ
ಗೆಳೆಯ; ಗೆಳೆಯನೊಳಗೊಬ್ಬ ಆತ್ಮ ಸಂಗಾತಿ
ಹೀಗೆ ಕಾಣುವ ಅಪೂರ್ವ ನೋಟ!
ಹೀಗೆ ಕಳೆಯಿತು ಇವರ ಬದುಕಿನ ಆಟ!
ನೀವು ಹೋದಿರಿ ನಿಜ –
ಆದರೆ ನೀವು ಅರಳಿಸಿದ ಹೂಗಳ
ಕಂಪಿಗೆಲ್ಲಿಯ ಸಾವು ?!
ನೀವು ನೀಡಿದ ಹೊಸ ಕಣ್ಣಿಗೆಲ್ಲಿಯ ನೋವು ?
ನೀವೆಳೆದ ಬಂಡಾಯ ಬಂಡಿಗೆಲ್ಲಿಯ ನಿಲುವು ?

**ಹುರುಕಡ್ಲಿ ಶಿವಕುಮಾರ್**
*ಬಾಚಿಗೊಂಡನಹಳ್ಳಿ*

### ಮುದೇನೂರು ಸಂಗಣ್ಣ

ಡಾ|| ಮೃತ್ಯುಂಜಯ ರುಮಾಲೆಯವರು ಬರೆದ 'ಜಾನಪದವನ್ನು ಹಾಸುಂಡ ಸಂಗಣ್ಣ' (ಮಾರ್ಚ್ ಸಂಚಿಕೆ) ಅತ್ಯುತ್ತಮ ಲೇಖನವಾಗಿದೆ. ಜಾನಪದ ಆಸಕ್ತರಿಗೆ ಒಳ್ಳೆಯ ಮಾಹಿತಿ ಹೊತ್ತು ತಂದಿದೆ ಈ ಹೊಸತು. ಮುದೇನೂರು ಸಂಗಣ್ಣನವರನ್ನು ಜಾನಪದ ಕಣಜ ಎಂದರೆ ತಪ್ಪಾಗಲಾರದು. ಅವರ ಕಲಾ ಶ್ರೀಮಂತಿಕೆ ಜಾನಪದ ವೈಶಿಷ್ಟ್ಯವನ್ನು ಈ ಲೇಖನದಿಂದ ತಿಳಿಯಬಹುದಾಗಿದೆ. ಸಂಗಣ್ಣನವರು ಜಾನಪದದ ಜೊತೆ-ಜೊತೆಗೆ ಸಾಹಿತ್ಯವನ್ನು ಸರಳವಾಗಿ ರಚಿಸುತ್ತಾ ಜನರ ಮನಸ್ಸಿನೊಳಗೆ ಹೊಕ್ಕು ಅವರ ಹೃದಯದಲ್ಲಿ ನೆಲೆಯೂರಿದ್ದಾರೆ.

ಕೂಡ್ಲಗಿ **ವಿ. ಜಿ. ಕಾಶೀನಾಥ**

### ಪ್ರಿಯ ಹಿರೇಮಠ ನಿಮಗೊಂದು ಹೃದಯ ಪೂರ್ವಕ ನಮಸ್ಕಾರ

ಶ್ರೀ ಡಿ. ರವಿವರ್ಮ ಅವರ ಲೇಖನ ಆತ್ಮೀಯವಾಗಿ ಮೂಡಿಬಂದಿದೆ. ''ಯಾರೋ ಕೈಸನ್ನೆ ಮಾಡಿ ಕರೆದಂತಾಯಿತು... ನೋಡಿ! ಅವಾಕ್ಕಾದೆ... ನಮ್ಮವ್ವನ




ವಯಸ್ಸಾಗಿತ್ತು ಮದರ್ ಇಂಡಿಯಾದಷ್ಟೆ!'' ನಿಜಕ್ಕೂ ಕರುಣೆ ಮೂಡಿಸುವ ಕವನ. ಹಾಳು ಹೊಟ್ಟೆ ಎನ್ನುವುದು ಏನೇನೂ ಮಾಡಿಸುತ್ತದೆ... ಕೆಲವರು ತೀಟೆಗಾಗಿ ಸಣ್ಣ ವಯಸ್ಸಿನವರನ್ನು ಕೂಡಿದರೆ... ಹೊಟ್ಟೆಪಾಡು ಎನ್ನುವುದು ಏನನ್ನಾದರೂ ಮಾಡುತ್ತದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಏಪ್ರಿಲ್ ಸಂಚಿಕೆ ನನಗೆ ತುಂಬಾ ಹಿಡಿಸಿತು. ಯಾಕೆಂದರೆ, 'ಪ್ರಿಯ ಹಿರೇಮಠ ನಿಮಗೊಂದು ಹೃದಯಪೂರ್ವಕ ನಮಸ್ಕಾರ' ಲೇಖನ ಹೃದಯಸ್ಪರ್ಶಿಯಾಗಿದೆ ಮತ್ತು ಕರ್ನಾಟಕ ಏಕೀಕರಣದಲ್ಲಿ ರೋಣ ತಾಲ್ಲೂಕಿನ ಕೊಡುಗೆ ತುಂಬ ಮಹತ್ವದ ಲೇಖನ. ನನಗೆ ವಿಷಯ ಗೊತ್ತಿತ್ತು; ಆದರೂ ಅದನ್ನು ದಾಖಲಿಸಿದ ಡಾ|| ಕುಂಬಾರ ಅವರಿಗೆ ಅಭಿನಂದನೆಗಳು. ಇದು ಹಿಡಿಸಿದ್ದಕ್ಕೆ ನಾನೂ ರೋಣ ತಾಲ್ಲೂಕಿನವನೇ ಆದದ್ದು ಮತ್ತೊಂದು ಕಾರಣ.

ರಾಣೆಬೆನ್ನೂರು **ಪ್ರೊ|| ಎ. ಸಿ. ಹಿರೇವಡೆಯರ್**

### ಏಕಲವ್ಯ

ಸಮಾಜ ಚಿಂತಕ ಬರಗೂರರ 'ಏಕಲವ್ಯ' ಸಿನೆಮಾವನ್ನು ಬೆಳಗಾವಿ ಜಿಲ್ಲೆಯ ಸವದತ್ತಿಯಲ್ಲಿ ನಡೆದ ಪ್ರದರ್ಶನದಲ್ಲಿ ನಾನೂ ನೋಡಿರುವೆ. ಬುಡಕಟ್ಟು ಜನಾಂಗಕ್ಕೂ ಅಕ್ಷರ ಪ್ರವೇಶಿಸಿ ಅವರಲ್ಲಿಯೂ ಬದಲಾವಣೆ ಬರಬೇಕೆಂಬ ಮಹದಾಶೆಯಿಂದ ಹೊರಟ ಕಥೆ ಏಕಲವ್ಯ ನಿಷ್ಠೆಯ ಅವಶ್ಯಕತೆಯನ್ನು ಪ್ರತಿಬಿಂಬಿಸುತ್ತದೆ. ಏಕಲವ್ಯ ನಿಷ್ಠೆ ಅಂದರೆ ಜೀವಸಂಕುಲದ ಉಳಿವು, ಸ್ವಾಭಿಮಾನದ ನಡೆ ಎಂಬುದಾಗಿದೆ. ಆದರೆ ಚನ್ನಬಸವ ಪೂತ್ತೂರ್ಕರ ಅವರು ''ಬರಗೂರು ಅವರು ಹೇಳುವಂತೆ ಮಹಾಭಾರತದ 'ಏಕಲವ್ಯ' ಭಾರತದ ಪ್ರಸಕ್ತ ಸಂದರ್ಭದಲ್ಲಿ ಕೂಡ ಪ್ರಸ್ತುತವೇ ಆಗಿದ್ದಾನೆ. ಅವರ ಈಗಿನ 'ಏಕಲವ್ಯ' ಪ್ರಸ್ತುತವೆಂದು ಕಂಡುಬರುವುದಿಲ್ಲವಾದರೂ ಚಿತ್ರದ ಒಟ್ಟು ಆಶಯ ಬುಡಕಟ್ಟು ಜನಾಂಗದ ಬಗೆಗಿರುವ ವ್ಯವಸ್ಥೆಯ ಅವಜ್ಞೆಯನ್ನು ಎತ್ತಿ ತೋರಿಸುವಲ್ಲಿ ಸಫಲವಾಗಿದೆ'' ಎಂದಿದ್ದಾರೆ. (ಹೊಸತು, ಮಾರ್ಚ್ ೨೦೦೯ ಸಂಚಿಕೆ)

ಇಲ್ಲಿ ಏಕಲವ್ಯ ಒಂದು ರೂಪಕ. ತನ್ನಲ್ಲಿ ಅದಮ್ಯ ಆಸೆ, ಅದಕ್ಕೆ ತಕ್ಕ ಸಾಮರ್ಥ್ಯವನ್ನು ಹೊಂದಿದಾಗಲೂ ಸೌಲಭ್ಯ ವಂಚಿತ ಸಮುದಾಯವೊಂದರಲ್ಲಿ 'ಅಕ್ಷರನ' ಅಂದರೆ, ಅಕ್ಷರದ ಪ್ರವೇಶದಿಂದಾಗಿ ಆಗುವ ಬದಲಾವಣೆಯನ್ನು ಸಕಾರಾತ್ಮಕ ನೆಲೆಯಲ್ಲಿ ತೋರಿಸಲಾಗಿದೆ. 'ಅಕ್ಷರ'ವೆಂದರೆ ಅಕ್ಷರವಲ್ಲ ಅರಿವಿನಾಗೂಡು' ಎಂದು ಹೇಳುತ್ತಲೇ ''ಇಲ್ಲಿ ಹಾರಿತು ಹಕ್ಕಿ ಕನಸುಗಳ ರೆಕ್ಕೆಬಿಚ್ಚಿ..'' ಎಂದು ಅಕ್ಷರದಿಂದ ತೆರೆದುಕೊಳ್ಳುವ ಬದುಕಿನ ಅನಾವರಣವಾಗುತ್ತದೆ. ಪುರೋಹಿತಶಾಹಿ ಹುಟ್ಟು ಹಾಕಿದ ಭಯ ಮತ್ತು ಭಕ್ತಿಯ ಹುನ್ನಾರ ದೇವರ ಹೆಸರಿನಲ್ಲಿ ನಡೆಯುವುದನ್ನು ಅಂದರೆ ಬುಡಕಟ್ಟು ಜನಾಂಗದ ಮೌಢ್ಯತೆಯನ್ನೇ ಬಂಡವಾಳವಾಗಿಸಿಕೊಂಡು ದೇವರ ಹೆಸರಿನಲ್ಲಿ ರಾಜಕಾರಣಿಯೊಬ್ಬ ಏಕಲವ್ಯನ ವಿದ್ಯೆ, ಓಟಕ್ಕೆ ಅಡ್ಡಿಪಡಿಸುವುದನ್ನು ತೋರಿಸುವುದರ ಮೂಲಕವೇ ಅದನ್ನು ಲೇವಡಿ ಮಾಡುತ್ತದೆ. ಇಲ್ಲಿ ಬರಗೂರರು ಪ್ರಖರ ವೈಚಾರಿಕತೆಯನ್ನು ತೆರೆಯ ಮೇಲೆ ದೃಶ್ಯಮಾಧ್ಯಮದ ಮೂಲಕ ಹೇಗೆ ತೋರಿಸಬಹುದು ಎಂಬುದಕ್ಕೆ ನಿದರ್ಶಕರಾಗಿ ನಿಲ್ಲುತ್ತಾರೆ. ಅಕ್ಷರನಿಂದಾಗಿ ಕಲಿಕೆ ಮತ್ತು ಓಟದ ಪ್ರಾಕ್ಟೀಸನ್ನು ಮುಂದುವರೆಸಿ ಏಕಲವ್ಯ ಗೆದ್ದು ಪ್ರಶಸ್ತಿ ಹಿಡಿದು ಓಡಿರುವುದನ್ನು ತೋರಿಸುವುದರ ಮೂಲಕ ಭಯ ಮತ್ತು ಭಕ್ತಿಯನ್ನು ಬಿತ್ತುವವರ ಕುತಂತ್ರವನ್ನು ಬಯಲಿಗೆಳೆಯಲಾಗಿದೆ.

ಅಲ್ಲದೆ, ೯೦ರ ದಶಕದಲ್ಲಿ ಬಂದಂತಹ ಮಾರುಕಟ್ಟೆ ಕೇಂದ್ರಿತ ಬದಲಾದ ಬದುಕಿನಲ್ಲಿ ಬದಲಾಗುತ್ತಿರುವ ಮಹಿಳಾ ಚಿಂತನೆಗಳಲ್ಲಿ ಹೆಣ್ಣು ಮಾರಾಟದ ಸರಕಾಗುವಂತೆ ಅವಳ ಬ್ರೇನ್‌ವಾಶ್ ಮಾಡುವಂತಹ, ಅವಳ ಆಲೋಚನಾ ಶಕ್ತಿಯನ್ನು ಕುಂದಿಸುವಂತಹ ಸಿನೇಮಾ ಮತ್ತು ಟಿ. ವಿ. (ಧಾರಾವಾಹಿಗಳು) ಮಾಧ್ಯಮಗಳಲ್ಲಿ ಮಹಿಳಾ ಪಾತ್ರಗಳು ಮಿಂಚುತ್ತಿವೆ. ಇಲ್ಲವೆ

ಪ್ರಧಾನ ಸಂಸ್ಕೃತಿಯ ಸ್ಥಾಪಿತ ಮೌಲ್ಯಗಳ ಆದರ್ಶೀಕೃತ ನೆಲೆಗಳಲ್ಲಿ ಗಂಡನಿಗಾಗಿ, ಮನೆತನದ ಮರ್ಯಾದೆಗಾಗಿ ತನ್ನ ಬದುಕು ಸವೆಸುವ ಪಾತಿವ್ರತ್ಯದ ಹೇರಿಕೆಯಲ್ಲಿ ಮತ್ತೆ ಅವಳ ಚಿಂತನೆಗೆ ಹಿನ್ನಡೆಯನ್ನುಂಟುಮಾಡಲಾಗುತ್ತಿದೆ. ಉದಾ: ೧. ಮಾಂಗಲ್ಯ ಮಾಂಗಲ್ಯ ನಮ್ಮ ಜೀವಕ್ಕಿಂತ ಅಮೂಲ್ಯ ೨. ಮಲ್ಲಿಕಾ ಶೆರಾವತ್ ಒಂದು ಕಡೆ ಹೇಳಿದಂತೆ ''ನನ್ನ ದೇಹವನ್ನು ನಾನೇಕೆ ಬಂಡವಾಳ ಮಾಡಿಕೊಳ್ಳಬಾರದು'' – ಇದು ಮಾರುಕಟ್ಟೆ ಕೇಂದ್ರಿತ ನೆಲೆಯಲ್ಲಿ ಮಾರುಕಟ್ಟೆ ಹುಟ್ಟುಹಾಕುತ್ತಿರುವ ಚಿಂತನೆ. ಆದರೆ ಬರಗೂರರ ಸಿನೇಮಾಗಳಲ್ಲಿ ಬರುವ ಮಹಿಳಾ ಪಾತ್ರಗಳು ಗಂಭೀರ ಚಿಂತನೆಯ ಬದುಕುಮುಖಿಯಾದ ಆಶಾವಾದದಿಂದ ಕೂಡಿದ ದಿಟ್ಟ ಹೋರಾಟದ ಪಾತ್ರಗಳು. ಮೂಢನಂಬಿಕೆಗಳನ್ನು ಪರೀಕ್ಷಿಸುತ್ತಲೇ ಅವುಗಳನ್ನು ಒಡೆಯುವ ಸಾಹಸ ಮಾಡುತ್ತವೆ. ಈ ಏಕಲವ್ಯದ ಲಕ್ಷ್ಮಿ ತಾನೂ ಅಕ್ಷರ ಕಲಿತು ತನಗೆ ದಕ್ಕಿದ ವಿದ್ಯೆಯಿಂದ ಹಟ್ಟಿಗೆ ಬೆಳಕಾಗುತ್ತಾಳೆ. ಅಕ್ಷರನ ನಂತರ ಕಲಿಕೆಯನ್ನು ಮುಂದುವರೆಸುತ್ತಾಳೆ. 'ದಾಸ್ಯದಿಂದ ನರಳುವ ದ್ರೋಣನಿಗಿಂತ ನೀನು ಏಕಲವ್ಯನಾಗು' ಎಂದು ತಮ್ಮನಲ್ಲಿ ಜಾಗೃತಿಯ ಕೆಚ್ಚು ಮೂಡಿಸುತ್ತಾಳೆ. ಮಣ್ಣಿನ ಜನರು ತಮಗೆ ಅನ್ನ ಕೊಟ್ಟ ಭೂಮಿಯೊಂದಿಗೆ ಇಟ್ಟು ಕೊಂಡಿರುವ ನಂಟುಗೆ, ಭಾವನಾತ್ಮಕ ಬೆಸುಗೆ ಎಂತಹುದು ಎಂಬುದನ್ನು ಮನಮಿಡಿಯುವಂತೆ ತೋರಿಸಲಾಗಿದೆ. ಲಕ್ಷ್ಮಿ 'ಅಕ್ಷರ'ನ ಗೋರಿಯನ್ನು ಅಗೆಯುತ್ತ, ಅಳುತ್ತ ಅದನ್ನು ಬಿಟ್ಟು ಹೋಗದೆ ಕೆಚ್ಚಿನಿಂದ ಹೋರಾಟದ ಬದುಕನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. 'ಕನಸುಗಳ ರೆಕ್ಕೆ ಬಿಚ್ಚಿ ಹಾರಿದ ಹಕ್ಕಿ' ನಿಜವಾದ ಬದುಕಿನ ಹುಡುಕಾಟವನ್ನು ಆರಂಭಿಸುತ್ತದೆ. ಆಗ ಅಲ್ಲಿ ಏಕಲವ್ಯ ದಾರಿ ತೆರೆದುಕೊಳ್ಳುತ್ತದೆ.

'ಅಕ್ಷರ'ನನ್ನು ಒಂದು ಪ್ರತಿಮೆಯಾಗಿ ಈ ಸಿನೇಮಾದಲ್ಲಿ ಬಳಸಿದ್ದಾರೆ. ಅಕ್ಷರದಿಂದಲೇ ಬದುಕಿನ ಬದಲಾವಣೆ ಸಾಧ್ಯ ಎಂದು ನಂಬಿರುವ ಬರಗೂರರು 'ಅಕ್ಷರ' ಎನ್ನುವ ವ್ಯಕ್ತಿಯನ್ನು ಯಾರು ಎಷ್ಟೇ ಸಾಯಿಸಿದರೂ ಆತನು ಕಲಿಸಿದ ಅಕ್ಷರಕ್ಕೆ, ಅರಿವಿಗೆ ಸಾವಿಲ್ಲ ಎಂಬುದನ್ನು ಅಕ್ಷರನ ಸಾವಿನ ಮೂಲಕ ಸಮರ್ಥವಾಗಿ ತೋರಿಸಿದ್ದಾರೆ. ಇದು ಬರಗೂರರ ಅತ್ಯುತ್ತಮ ನಿರ್ದೇಶನಕ್ಕೆ ಅವರ ವೈಚಾರಿಕ ಚಿಂತನೆಗೆ ಸಾಕ್ಷಿ.

ತಮ್ಮ ಚಿತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿರುವ ಪ್ರಯೋಗಶೀಲ ನಿರ್ದೇಶಕರಾದ ಬರಗೂರು ''ಸಮುದಾಯದತ್ತ ಸಿನೇಮಾ: ನೂರು ದಿನ ನೂರು ಊರು'' ಎಂಬ ಹೊಸ ಮಾದರಿಯ ಪ್ರಯೋಗವೂ ಅವರ ಮಾನವೀಯ ಅಂತಃಕರಣಕ್ಕೆ ಸಾಕ್ಷಿ. ಸಾಮಾಜಿಕ ಬದಲಾಣೆಯನ್ನೇ ಮುಖ್ಯ ಆಶಯವನ್ನಾಗಿಟ್ಟುಕೊಂಡು ಈ ಅಭಿಯಾನವನ್ನು ಆರಂಭಿಸುವ ಮೂಲಕ ತಮ್ಮ ವೈಚಾರಿಕ ಚಿಂತನೆಗಳನ್ನು ಅನಕ್ಷರಸ್ಥ ಸಮುದಾಯಕ್ಕೂ ತಲುಪಿಸುವ ನಿಟ್ಟಿನಲ್ಲಿ ಈ ಮೂಲಕ ದುಡಿಯುತ್ತಿದ್ದಾರೆ.

'ಏಕಲವ್ಯ' ಸಿನೇಮಾ ಕುರಿತ ಲೇಖನ ಪ್ರಕಟಿಸಿದ ತಮಗೂ ಅಂಥ ಸಿನೇಮಾವನ್ನು ಕೊಟ್ಟ ಬರಗೂರ ವರಿಗೂ ವಂದನೆಗಳು.

*ಮುಧೋಳ* **ಅನಸೂಯ ಕಾಂಬಳೆ**

**ಹೊಸತು**

'ಹೊಸತು' ಪತ್ರಿಕೆಯ ತ್ರೈವಾರ್ಷಿಕ ಚಂದಾ ಹಣ ೩೦೦/- ರೂಪಾಯಿಗಳನ್ನು ಚೆಕ್ ಮೂಲಕ ಕಳಿಸುತ್ತಿದ್ದೇವೆ. ಸಾಹಿತ್ಯ, ವಿಜ್ಞಾನ, ರಾಜಕಾರಣ, ವರ್ತಮಾನ ಹೀಗೆ ಒಟ್ಟಾರೆ ಸಮಾಜದ ಸರ್ವಾಂಗೀಣ ಸಂಸ್ಕೃತಿಯ ಬಿಂಬ ಮತ್ತು ಗತಿದರ್ಶಿಯಾದ ತಮ್ಮ ಪತ್ರಿಕೆಯನ್ನು ನಮ್ಮ ಇಂದಿನ ಯುವ ಪೀಳಿಗೆ ಓದಬೇಕಾಗಿದೆ. ನಿಮ್ಮ ಈ ವರ್ಷದ ಜನವರಿ ತಿಂಗಳ ವಿಶೇಷಾಂಕ ನೋಡಿದೆವು. ಎಲ್ಲ ವಲಯದ ಬರಹಗಳನ್ನು-ಬರಹಗಾರರನ್ನು ಒಳಗೊಂಡಂತಹ ಹೋಲಿಸ್ಸಿಕ್ಕಾದ ಪತ್ರಿಕೆಯು ನಿಮ್ಮದಾಗಿದೆ. ನಮ್ಮ ಕಾಲೇಜಿನ ವಿದ್ಯಾರ್ಥಿನಿಯರ ಜ್ಞಾನ ವಿಕಾಸಕ್ಕಾಗಿ ದಯಮಾಡಿ ನಮ್ಮ ಗ್ರಂಥಾಲಯಕ್ಕೆ ನಿಗದಿತವಾಗಿ ತಮ್ಮ 'ಹೊಸತು' ಪತ್ರಿಕೆಯನ್ನು ಕಳುಹಿಸಿಕೊಡಬೇಕಾಗಿ ಕೋರಿಕೆ.

**ಪ್ರಾಂಶುಪಾಲರು**

*ಮಹಾರಾಣಿ ಮಹಿಳಾ ಕಲಾ, ವಾಣಿಜ್ಯ*
*ನಿರ್ವಹಣಾ ಕಾಲೇಜು, ಬೆಂಗಳೂರು*

**ಮುಗಿದ ಮತ್ತೊಂದು ಮಹಿಳಾ ದಿನಾಚರಣೆ**

ಮತ್ತೊಂದು ಮಾರ್ಚ್ ೮ ಬಂದುಹೋಯಿತು. ಎಲ್ಲ ಕ್ಷೇತ್ರಗಳಲ್ಲಿ ಉನ್ನತ ಸಾಧನೆಗೈದ ಮಹಿಳೆಯರನ್ನೆಲ್ಲ ನೆನೆದಾಯಿತು. ಅಭಿನಂದನೆಗಳ ವಿನಿಮಯವಾಯಿತು. ಎಲ್ಲ ಸರಿ. ಯುದ್ಧವಿರಲಿ, ಗಲಭೆಗಳಾಗಲಿ ಅಥವಾ ಯಾವುದೇ ದುರಂತಗಳಾಗಲಿ ಅವುಗಳ ಮೊದಲ ಪರಿಣಾಮ ಆಗುವುದು ಮಹಿಳೆಯರ ಮೇಲೆ. ಆ ದುಷ್ಪರಿಣಾಮಗಳ ತೀವ್ರತೆಯೂ ಮಹಿಳೆಯರ ಮೇಲೆಯೇ ಹೆಚ್ಚು. ಹಾಗೆಯೇ ಈಗಿನ ಆರ್ಥಿಕ ಕುಸಿತದ ದುಷ್ಪರಿಣಾಮವೂ ಮೊದಲು ಮತ್ತು ತೀವ್ರವಾಗಿ ತಟ್ಟುತ್ತಿರುವುದು ಮಹಿಳೆಯರನ್ನೇ.

ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ (ಐ.ಎಲ್.ಓ.) ಹೇಳುವಂತೆ ಏಷ್ಯಾ ಪೆಸಿಫಿಕ್ ವಿಭಾಗದಲ್ಲಿಯೇ ಈ ವರ್ಷ ೨೨ ಮಿಲಿಯನ್ ಕಾರ್ಮಿಕರು ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಈ ಪ್ರದೇಶದಲ್ಲಿ ೧೪೦ ಮಿಲಿಯನ್ ಜನ ಬಡತನದ ಅಂಚಿಗಿಂತ ಕೆಳಗೆ ತಳ್ಳಲ್ಪಡುತ್ತಿದ್ದಾರೆ. ದುರಂತವೆಂದರೆ ಕೆಲಸ ಕಳೆದುಕೊಳ್ಳುತ್ತಿರುವ ಮಿಲಿಯಾಂತರ ಜನರಲ್ಲಿ ಮಹಿಳೆಯರೆಷ್ಟು ಎಂಬ ಬಗ್ಗೆ ಯಾರೂ ವಿಶೇಷವಾಗಿ ಗಮನಿಸುತ್ತಿಲ್ಲ.

೧೯೯೭ರ ಆರ್ಥಿಕ ಸಂಕಷ್ಟದ ಕಾಲದಲ್ಲಿ ಏಷ್ಯಾದಲ್ಲಿ ಕೆಲಸ ಕಳೆದುಕೊಂಡವರ ಅಂಕಿ ಅಂಶ ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಉದಾಹರಣೆಗೆ, ಥೈಲ್ಯಾಂಡ್‌ನಲ್ಲಿ ಗಾರ್ಮೆಂಟ್ ಉದ್ಯಮದಲ್ಲಿ ಕೆಲಸ ಕಳೆದುಕೊಂಡ ಮಹಿಳೆಯರು ಶೇ. ೯೫. ಆಟಿಕೆಗಳ ಉದ್ಯಮದಲ್ಲಿ ಶೇ. ೮೮. ಕೊರಿಯಾದಲ್ಲಿ ಹಣಕಾಸು ವಲಯದಲ್ಲಿ ಕೆಲಸ ಕಳೆದುಕೊಂಡ ಮಹಿಳೆಯರು ಶೇ. ೮೬. ಏಕೆ ಹೀಗೆ ಎಂದು ಕೇಳಿದರೆ ಇದಕ್ಕೆ ಕಾರಣ ಸ್ಪಷ್ಟ. ಹೆಚ್ಚು ಕಾರ್ಮಿಕ ಆಧಾರಿತ ಉದ್ಯಮಗಳಲ್ಲಿ, ರಫ್ತು ಆಧಾರಿತ ಗಾರ್ಮೆಂಟ್, ಆಟಿಕೆ ಮುಂತಾದ ಉದ್ಯಮಗಳಲ್ಲಿ ದುಡಿಯುವವರು ಮಹಿಳೆಯರು. ತಾತ್ಕಾಲಿಕ, ಗುತ್ತಿಗೆ ಆಧಾರಿತ, ಕೂಲಿ ಆಧಾರಿತ, ನೌಕರಿಗಳಲ್ಲಿ ದುಡಿಯುವವರು ಮಹಿಳೆಯರು. ಆರ್ಥಿಕ ಕುಸಿತಗಳು ಎದುರಾದಾಗಲೆಲ್ಲ ಮೊದಲ ಹೊಡೆತ ಬೀಳುವುದು ಇಂಥ ರಫ್ತು ಆಧಾರಿತ ಉದ್ದಿಮೆಗಳ ಮೇಲೆಯೇ. ಹಾಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ಕಳೆದು ಕೊಳ್ಳುವುದೂ ಮಹಿಳೆಯರೇ.

ದುಡಿಯುವ ಹೆಣ್ಣು ಕೆಲಸ ಕಳೆದುಕೊಂಡರೆ ಅವಳ ಸಂಸಾರ ಇನ್ನಷ್ಟು ದುಃಸ್ಥಿತಿಗೆ ದೂಡಲ್ಪಡುತ್ತದೆ. ಅಧ್ಯಯನಗಳು ಹೇಳುವಂತೆ ಬಡ ಕುಟುಂಬದ ದುಡಿಯುವ ಹೆಣ್ಣಿನ ಆದಾಯ ಆ ಕುಟುಂಬದಲ್ಲಿ ಬಹಳ ಮಹತ್ವದ್ದಾಗಿರುತ್ತದೆ. ಆಕೆ ಕೆಲಸ ಕಳೆದುಕೊಂಡರೆ ಆ ಸಂಸಾರದ ಮಕ್ಕಳ, ಅದರಲ್ಲೂ ಹೆಣ್ಣುಮಕ್ಕಳ, ವಿದ್ಯಾಭ್ಯಾಸಕ್ಕೆ ಪೆಟ್ಟು ಬೀಳುತ್ತದೆ. ಪೌಷ್ಟಿಕ ಆಹಾರದ ಕೊರತೆ, ಅನಾರೋಗ್ಯ ಹೆಚ್ಚುತ್ತದೆ.

ಇಂತಹ ಸ್ಥಿತಿಗೆ ಕಾರಣಗಳು ಅನೇಕ. ಅವುಗಳಲ್ಲಿ ಪ್ರಮುಖವಾದುವೆಂದರೆ, ಮಹತ್ವದ ನಿರ್ಣಾಯಕ ಸ್ಥಾನಗಳಲ್ಲಿ ಮಹಿಳೆಯರು ಇಲ್ಲದಿರುವುದು. ಮಹಿಳಾ ನೌಕರರನ್ನೇ ಹೆಚ್ಚು ಹೊಂದಿರುವ ಉದ್ಯಮಗಳಲ್ಲೂ ಅದರ ಮಾಲೀಕರು ಹಾಗೂ ಆ ಮಹಿಳಾ ನೌಕರರ ಸಂಘಟನೆಗಳ ಮುಖಂಡರೂ ಪುರುಷರೇ ಆಗಿರುತ್ತಾರೆ. ಕಳೆದ ವರ್ಷದ ಅಂಕಿ ಅಂಶಗಳಂತೆ, ಪ್ರಜಾಪ್ರಭುತ್ವ ಮಾದರಿ ಆಡಳಿತ ಹೊಂದಿರುವ ದೇಶಗಳಲ್ಲಿ ಒಟ್ಟಾರೆ ರಾಷ್ಟ್ರೀಯ ಮಹಿಳಾ ಪ್ರತಿನಿಧಿಗಳ ಸಂಖ್ಯೆ ಶೇ. ೧೮ ಮಾತ್ರ. ಆಫ್ರಿಕಾ, ಯೂರೋಪ್, ಲ್ಯಾಟಿನ್ ಅಮೆರಿಕಾಗಳಲ್ಲಿ ಪರವಾಗಿಲ್ಲ ಎನ್ನಬಹುದಾದ ಶೇ. ೨೫ರಷ್ಟು ಮಹಿಳಾ ಪ್ರತಿನಿಧಿಗಳಿದ್ದರೆ, ಜಗತ್ತಿನ ಶೇ. ೨೫ ಪಾರ್ಲಿಮೆಂಟ್‌ಗಳಲ್ಲಿ ಮಹಿಳೆಯರ ಸಂಖ್ಯೆ ಈಗಲೂ ಶೇ. ೧೦ಕ್ಕಿಂತ ಕಡಿಮೆ ಇದೆ.

ನಮ್ಮ ದೇಶದಲ್ಲಿ ಶೇ. ೩೩ ಮಹಿಳಾ ಮೀಸಲಾತಿ ಮಸೂದೆ ಇನ್ನೊಂದು ಪ್ರಹಸನ ಕಂಡು ಪ್ರಸಕ್ತ ಲೋಕಸಭೆಯ ಅವಧಿಯೂ ಮುಗಿದುಹೋಯಿತು. ಶೇ. ೩೩ ಸ್ಥಾನಗಳ ಮೀಸಲಾತಿ ಬೇಕು ಎಂದು ಪ್ರತಿಪಾದಿಸುವ ಪಕ್ಷಗಳೂ ಈ ಚುನಾವಣೆಯಲ್ಲಿ ತಮ್ಮ ಪಕ್ಷದ ಅಭ್ಯರ್ಥಿಗಳನ್ನಾಗಿ ಮಹಿಳೆಯರನ್ನು ಕಣಕ್ಕಿಳಿಸುವ ಧೈರ್ಯ ತೋರುತ್ತಿಲ್ಲ. ನಿರ್ಣಾಯಕ ಸ್ಥಾನಗಳಲ್ಲಿ ಮಹಿಳೆಯರಿರದಿದ್ದರೆ ಮಹಿಳೆಯರ ಪರ ನಿರ್ಣಯಗಳು ಸಾಧ್ಯವೇ ? ಹೀಗೇ ಇನ್ನೊಂದು ಮಹಿಳಾ ದಿನಾಚರಣೆ ಬರುತ್ತದೆ, ಒಂದಿಬ್ಬರು ರಾಜಕೀಯದಲ್ಲಿ ಉನ್ನತ ಸ್ಥಾನದಲ್ಲಿರುವ ಮಹಿಳೆಯರನ್ನೂ, ಒಂದಿಬ್ಬರು ಕಾರ್ಪೊರೇಟ್ ಮುಖ್ಯಸ್ಥೆಯರನ್ನೂ, ಒಂದಿಬ್ಬರು ಉನ್ನತ ಸ್ಥಾನಕ್ಕೇರಿದ ಮಹಿಳಾ ಅಧಿಕಾರಿಗಳನ್ನೂ, ಇನ್ನೊಂದಿಬ್ಬರು ಇತರ ಕ್ಷೇತ್ರಗಳಲ್ಲಿ ಸಾಧನೆಗೈದ ಮಹಿಳೆಯರನ್ನೂ ನೆನೆದು ಹೆಮ್ಮೆಪಟ್ಟುಕೊಳ್ಳುವುದೂ, ಅಭಿನಂದನೆಗಳ ವಿನಿಮಯವೂ, ಸಭೆಗಳೂ ನಡೆಯುತ್ತವೆ. ಚಿನ್ನಾಭರಣ ಅಂಗಡಿಗಳು, ಸೀರೆ ಅಂಗಡಿಗಳೂ ವಿಶೇಷ ಸೇಲ್ ಹಾಕುತ್ತವೆ. ಮಾರ್ಚ್ ೮ ಮುಗಿಯುತ್ತದೆ.

*ಶಿವಮೊಗ್ಗ* **ನಾಗರತ್ನ ಎಸ್. ಬಿ.**

# ಸಮಗ್ರ ಸಂಶೋಧನೆಯ ಸಮೃದ್ಧ ವ್ಯಕ್ತಿತ್ವ : ಡಾ|| ಎಂ. ಎಂ. ಕಲಬುರ್ಗಿ



''ಕನ್ನಡ ಸಂಶೋಧನೆಯ ಇತಿಹಾಸದಲ್ಲಿ ಆಕರನಿಷ್ಠಶೋಧ, ವಿಶ್ಲೇಷಣನಿಷ್ಠಶೋಧ, ವ್ಯಾಖ್ಯಾನನಿಷ್ಠಶೋಧ – ಹೀಗೆ ಮೂರು ಮಜಲುಗಳು ಕಂಡುಬರುತ್ತವೆ. ಈ ಮೂರೂ ಮಜಲುಗಳಲ್ಲಿ ನಾನು ದುಡಿದಿದ್ದೇನೆ. ಸಂಶೋಧನೆ ಏಕಶಿಸ್ತೀಯ ಅಧ್ಯಯನ ಕ್ಷೇತ್ರವಲ್ಲ, ಬಹುಶಿಸ್ತೀಯ ಅಧ್ಯಯನ ಕ್ಷೇತ್ರ. ಈ ಮಾತಿಗೆ ಅರ್ಥ ತುಂಬುವಂತೆ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಶಾಸನ, ಜಾನಪದ, ವ್ಯಾಕರಣ, ಛಂದಸ್ಸು, ಹಸ್ತಪ್ರತಿಶಾಸ್ತ್ರ, ಗ್ರಂಥಸಂಪಾದನಶಾಸ್ತ್ರ, ನಾಮಶಾಸ್ತ್ರ ಇತ್ಯಾದಿ ಕ್ಷೇತ್ರಗಳಲ್ಲಿ ನಾನು ಕೆಲಸ ಮಾಡಿದ್ದೇನೆ. ಇವುಗಳನ್ನು ಬಳಸಿಕೊಂಡು ಅಂತರ್ಶಿಸ್ತೀಯ ಸಂಶೋಧನೆಯನ್ನು ಪೂರೈಸಿದ್ದೇನೆ. – ಹೀಗೆ ಸಂಶೋಧನೆಯ ಎಲ್ಲ ಹಂತ, ಎಲ್ಲ ಆಯಾಮ, ಎಲ್ಲ ವಿಷಯಗಳನ್ನು ತೆಕ್ಕೆಗೆ ಅಳವಡಿಸಿಕೊಂಡು ದುಡಿದಿದ್ದೇನೆ.''

*– ಡಾ|| ಎಂ. ಎಂ. ಕಲಬುರ್ಗಿ*

## ಪ್ರಕಾಶ ಗಿರಿಮಲ್ಲನವರ

**ಡಾ||** ಎಂ. ಎಂ. ಕಲಬುರ್ಗಿ ಅವರ ಹುಟ್ಟೂರು ಯರಗಲ್ಲ, ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಒಂದು ಸಣ್ಣ ಹಳ್ಳಿ. ಅವಿಭಕ್ತ ಪ್ರಜ್ಞೆ, ಶ್ರಮಸಂಸ್ಕೃತಿ ಅವರ ಕುಟುಂಬದ ಮೌಲ್ಯಗಳು. ಆ ಮೌಲ್ಯಗಳೇ ಅವರ ಬದುಕನ್ನು ರೂಪಿಸುತ್ತ ಬಂದವು. ತಂದೆ ಸದಾಕಾಲ ಹೇಳುತ್ತಿದ್ದ ''ಅಂಬಲಿ ಕಂಬಳಿ ಆಸ್ತಿ, ಮಿಕ್ಕಿದ್ದೆಲ್ಲ ಜಾಸ್ತಿ'' ಎಂಬಂಥ ಮಾತುಗಳು, ಫ. ಗು. ಹಳಕಟ್ಟಿಯವರ 'ಶಿವಾನುಭವ' ಪತ್ರಿಕೆಯಲ್ಲಿಯ ''ಕೆಲಸ ಮಾಡುವವನ ಮನಸ್ಸು ಸ್ವಚ್ಛವಿರುತ್ತದೆ'' ಎಂಬ ವಾಕ್ಯ – ಇವು ಅವರ ಎಳೆಯ ಮನಸ್ಸನ್ನು ಪ್ರಭಾವಿಸಿದವು.

ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮ ಯರಗಲ್ಲದಲ್ಲಿ, ಹಾಗೂ ಮಾಧ್ಯಮಿಕ ಶಿಕ್ಷಣವನ್ನು ತಾಲ್ಲೂಕು ಸ್ಥಳ ಸಿಂದಗಿಯಲ್ಲಿ ಪಡೆದ ಡಾ|| ಕಲಬುರ್ಗಿ ಅವರು ಕಾಲೇಜು ಶಿಕ್ಷಣವನ್ನು ಜಿಲ್ಲಾ ಸ್ಥಳ ಬಿಜಾಪುರದಲ್ಲಿ ಮುಗಿಸಿದರು. ಬಿಜಾಪುರದಲ್ಲಿ ಪ್ರೊಫೆಸರ್ ಬಿ. ಟಿ. ಸಾಸನೂರ ಅವರ ಬೋಧನೆಯು ಮೂಲತಃ ಅವರಲ್ಲಿದ್ದ ಕನ್ನಡ ಒಲವನ್ನು ಬೆಳೆಸಿತು. ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪಡೆಯುತ್ತಿರುವಾಗ ಡಾ|| ಆರ್. ಸಿ. ಹಿರೇಮಠರ ವಿದ್ವತ್ತು-ಪರಿಶ್ರಮಗಳು ಡಾ|| ಕಲಬುರ್ಗಿ ಅವರ ಕನ್ನಡ ಒಲವು ಇನ್ನೂ ವರ್ಧಿಸುವಂತೆ ಮಾಡಿದವು.

ಆರಟಾಳ ರುದ್ರಗೌಡರು ರೊದ್ದ ಶ್ರೀನಿವಾಸರಾಯರ ಪ್ರಯತ್ನದ ಫಲವಾಗಿ ೧೯೧೮ರಲ್ಲಿ ಹುಟ್ಟಿದ ಧಾರವಾಡದ ಕರ್ನಾಟಕ ಕಾಲೇಜು ಉತ್ತರ ಕರ್ನಾಟಕದ ಅತ್ಯಂತ ಪ್ರತಿಷ್ಠಿತ ಕಾಲೇಜು. ವಿ. ಕೆ. ಗೋಕಾಕ, ಮೆನೆಝಿಸ್, ಸ. ಸ. ಮಾಳವಾಡ ಮುಂತಾದ ಸುಪ್ರಸಿದ್ಧ ವಿದ್ವತ್ ಪ್ರಭೃತಿಗಳು ಪ್ರಾಚಾರ್ಯರಾಗಿದ್ದ ಈ ಕಾಲೇಜಿನಲ್ಲಿ ೧೯೬೨ರಲ್ಲಿ ಡಾ|| ಎಂ. ಎಂ. ಕಲಬುರ್ಗಿ ಅವರು ಅಧ್ಯಾಪಕರಾಗಿ ಸೇವಾವೃತ್ತಿ ಪ್ರಾರಂಭಿಸಿದರು. ಇಲ್ಲಿ ಅವರು ಸಾಹಿತ್ಯ-ಸಂಶೋಧನ ಮಾರ್ಗಗಳಲ್ಲಿ ಸಾಗಲು ಪ್ರೇರಕವಾದ ಪರಿಸರ ದೊರೆಯಿತು. ಅವರೇ ಹೇಳುವಂತೆ ''ಇಲ್ಲಿ ನನ್ನ ಸಮಗ್ರಶಕ್ತಿ ಮತ್ತು ಆಸಕ್ತಿಗಳನ್ನು ಅಧ್ಯಯನ, ಅಧ್ಯಾಪನ ವಿಷಯಗಳಲ್ಲಿ ಕೇಂದ್ರೀಕರಿಸಿದೆ. ವರ್ಗ ಕೋಣೆಯ ಬೋಧನ-ಗ್ರಂಥಾಲಯ ವಾಚನಗಳು ನನ್ನ ಇಲ್ಲಿಯ ಹವ್ಯಾಸಗಳಾಗಿದ್ದವು. ಇಲ್ಲಿ ನನ್ನ ಅಧ್ಯಾಪನ ಕಲೆಗೆ ಸರಿಯಾದ ಚೌಕಟ್ಟು ಪ್ರಾಪ್ತವಾಯಿತು. ''ಗ್ರಂಥಾಲಯದಲ್ಲಿ ಕಲಬುರ್ಗಿಯವರು ಒಂದೊಂದು ಪುಸ್ತಕ ಓದುವುದಿಲ್ಲ, ಒಂದೊಂದು ಪುಸ್ತಕ ಕಪಾಟು ಓದುತ್ತಾರೆ'' ಎಂದು ವಿದ್ಯಾರ್ಥಿಗಳು ಮಾತನಾಡಿಕೊಳ್ಳುವ ರೀತಿಯಲ್ಲಿ ಈ ಬೃಹತ್ ಪುಸ್ತಕ ಭಂಡಾರವನ್ನು ಬಳಸಿಕೊಂಡೆ. ಈ ವ್ಯಾಪಕ ಅಧ್ಯಯನ ಭವಿಷ್ಯದ ನನ್ನ ಬೆಳವಣಿಗೆಗೆ ಮೂಲಧನವಾಗಿ ಪರಿಣಮಿಸಿತು. ಈ ಹಂತದಲ್ಲಿಯೇ ಬರವಣಿಗೆ ಮತ್ತು ಸಾಹಿತ್ಯಿಕ ಸಂವಾದಗಳಲ್ಲಿ ತೊಡಗಿಕೊಳ್ಳಲಾರಂಭಿಸಿದೆ.''

ಡಾ|| ಎಂ. ಎಂ. ಕಲಬುರ್ಗಿ ಅವರು ಕರ್ನಾಟಕ ಕಾಲೇಜಿನಲ್ಲಿ ಮೂರು ವರ್ಷಗಳವರೆಗೆ ಅಧ್ಯಾಪಕರಾಗಿ ಸೇವೆಸಲ್ಲಿಸಿ ನಂತರ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಅಧ್ಯಾಪಕರಾಗಿ ಬಂದರು (೧೯೬೬). ಕನ್ನಡ ಅಧ್ಯಯನ ಪೀಠವನ್ನು ಬೆಳೆಸುವ ಜೊತೆಯಲ್ಲಿ ತಾವೂ ಬೆಳೆದರು. ೧೯೮೨ರಲ್ಲಿ ಸಂಸ್ಥೆಯ ಮುಖ್ಯಸ್ಥರಾಗಿ ನಿಘಂಟುವಿಜ್ಞಾನ, ನಾಮವಿಜ್ಞಾನ, ಸೃಜನ - ವಿಮರ್ಶನ - ಸಂಶೋಧನ ವಿಷಯಗಳ ಅನ್ವಯಿಕ ಬೋಧನೆಗಳನ್ನು ಜೋಡಿಸಿ, ಕನ್ನಡ ಪಠ್ಯಕ್ರಮವನ್ನು ನವೀಕರಿಸಿ, ವಿಸ್ತರಿಸಿದರು. ವಿಭಾಗದ ಗ್ರಂಥಾಲಯವನ್ನು ಸುಸಜ್ಜಿತಗೊಳಿಸಿದರು. ನಾಡಿನೆಲ್ಲೆಡೆ ಸುತ್ತಿ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಇನ್ನೂ ಹೆಚ್ಚಾಗಿ 'ಡಾ|| ಆರ್. ಸಿ. ಹಿರೇಮಠ ವ್ಯಾಖ್ಯಾನಮಾಲೆ'ಯನ್ನು ಅಪಾರ ಪರಿಶ್ರಮ ವಹಿಸಿ ಅಸ್ತಿತ್ವಕ್ಕೆ ತಂದರು. ಅಂದು ಅವರು ಪ್ರಾರಂಭಿಸಿದ 'ಕನ್ನಡ ಅಧ್ಯಾಪಕರ ಸಮ್ಮೇಳನ' ಇಂದು ಉತ್ತರ ಕರ್ನಾಟಕದ ಹತ್ತಾರು ಪ್ರದೇಶಗಳಲ್ಲಿ ಜರುಗಿ ಪ್ರಾಧ್ಯಾಪಕರ ಸಾಹಿತ್ಯಿಕ-ಸಾಂಸ್ಕೃತಿಕ ಕಾಳಜಿಯನ್ನು ಇಮ್ಮಡಿಗೊಳಿಸಿದೆ. ಕನ್ನಡ ವಿಭಾಗದಲ್ಲಿ ಜರುಗುತ್ತಿರುವ 'ಸಂಸ್ಕೃತಿ ಸಮ್ಮೇಲನ' 'ಜಾನಪದ ಸಮ್ಮೇಲನ' ಕೂಡ ಡಾ|| ಕಲಬುರ್ಗಿ ಅವರ ಕಲ್ಪನೆಯೇ ಆಗಿದೆ. ಜಾನಪದ ಸ್ನಾತಕೋತ್ತರ ವಿಭಾಗ, ಭಾಷಾ ವಿಜ್ಞಾನ ವಿಭಾಗ, ಶಾಸನ ವಿಭಾಗ ಮುಂತಾದ ವಿಭಾಗಗಳನ್ನು ಇನ್ನೂ ವಿಸ್ತಾರಗೊಳಿಸಿ ಅಲ್ಲಿ ಆಳವಾದ ಪಾಂಡಿತ್ಯದ ನಿರಂತರ ಸಂಶೋಧನೆ-ಅಧ್ಯಯನ-ಅಧ್ಯಾಪನ ನಡೆಯುವಂತೆ ನೋಡಿಕೊಂಡರು. ಕರ್ನಾಟಕ ವಿಶ್ವವಿದ್ಯಾಲಯ ವಿದ್ವತ್ತಿನ ಹತ್ತಾರು ಶಾಖೆಗಳನ್ನು ಬೆಳೆಸುವಂತೆ, ಈ ಭಾಗದ ವಿದ್ವಾಂಸರ ಬೆಳವಣಿಗೆಯ ದೃಷ್ಟಿಯಿಂದ ಕೆಲವು ಪತ್ರಿಕೆಗಳನ್ನು ಪ್ರಾರಂಭಿಸಿತು. 'ಕರ್ನಾಟಕ ಭಾರತಿ', 'ವಿದ್ಯಾರ್ಥಿ ಭಾರತಿ', 'ಮಾನವಿಕ ಭಾರತಿ', 'ವಿಜ್ಞಾನ ಭಾರತಿ' ಪತ್ರಿಕೆಗಳ ಪ್ರಕಟಣೆಯಲ್ಲಿ ಡಾ|| ಕಲಬುರ್ಗಿ ಅವರ ಸಾಹಸಪೂರ್ಣ ಶ್ರಮ ಕಾರಣವಾಗಿ 'ಕರ್ನಾಟಕ

ಭಾರತಿ' ನಾಡಿನ ವಿದ್ವತ್‌ವಲಯದ ಒಂದು ಮಾದರಿ ಪತ್ರಿಕೆಯೆನಿಸಿತು. ಈ ಎಲ್ಲ ಪತ್ರಿಕೆಗಳ ಸಂಪಾದಕರಾಗಿ-ಸಲಹೆಗಾರರಾಗಿ ಡಾ|| ಕಲಬುರ್ಗಿ ಅವರು ತಾವೂ ಬೆಳೆಯುವುದರ ಜೊತೆಗೆ ಇತರ ವಿದ್ವಾಂಸರಿಗೂ ಒಂದು ವೇದಿಕೆ ನಿರ್ಮಿಸಿಕೊಟ್ಟಿದ್ದು ಅಭಿಮಾನದ ಸಂಗತಿಯೆನಿಸಿದೆ.

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮುರಗೋಡ ಮಹಾಂತ ಶಿವಯೋಗಿಗಳ ಶತಮಾನೋತ್ಸವ ಸವಿನೆನಹಿನಲ್ಲಿ ಅಸ್ತಿತ್ವಕ್ಕೆ ಬಂದ ಬಸವೇಶ್ವರ ಪೀಠದ ಮುಖ್ಯಸ್ಥರಾಗಿ ಡಾ|| ಎಂ. ಎಂ. ಕಲಬುರ್ಗಿ ಅವರು ಮಾಡಿದ ಕಾರ್ಯ ಅನನ್ಯ. ಬಸವೇಶ್ವರ ಬೋಧನೆ, ಗ್ರಂಥಾಲಯ, ವಿಶೇಷೋಪನ್ಯಾಸ-ಪ್ರಚಾರೋಪನ್ಯಾಸ, ಪುಸ್ತಕ ಪ್ರಕಟಣೆ – ಈ ನಾಲ್ಕೂ ನೆಲೆಗಳಲ್ಲಿ ಡಾ|| ಕಲಬುರ್ಗಿ ಅವರ ಶ್ರಮನಿಷ್ಠ ದುಡಿಮೆಯಿಂದ ಈ ಪೀಠ ಕ್ರಮಬದ್ಧಗೊಂಡಿತು. ಸಂಸ್ಥೆಗಳನ್ನು ಬೆಳೆಸುವ-ಉಳಿಸುವ ಅವರ ವಿಚಾರಗಳು ಗಮನೀಯ. ಅವರೇ ಹೇಳುವಂತೆ ''ನನ್ನ ಸ್ವಭಾವ ವ್ಯಕ್ತಿಕೇಂದ್ರಿತವಲ್ಲ, ಸಮಾಜಕೇಂದ್ರಿತ – ಸಂಸ್ಥೆಕೇಂದ್ರಿತ. ಹೀಗಾಗಿ ಸಂಸ್ಥೆಯ ಯೋಗಕ್ಷೇಮ ಮೊದಲು, ಆಮೇಲೆ ನನ್ನದು ಎಂಬ ಭಾವದಿಂದ ಅಧ್ಯಯನಪೀಠದ ಎಲ್ಲ ವಿಭಾಗಗಳ ಹಿತವನ್ನು ಗಮನದಲ್ಲಿಟ್ಟುಕೊಂಡು ದುಡಿದಿದ್ದೇನೆ; ಈ ಸಂಸ್ಥೆಯ ಎರಡನೆಯ ತಲೆಮಾರಿನ ಮುಖ್ಯವ್ಯಕ್ತಿಯೆಂದು ಜನ ಗುರುತಿಸುವ ಪ್ರಮಾಣದಲ್ಲಿ ಶ್ರಮಿಸಿದ್ದೇನೆ.'' ಇದನ್ನು ಗಮನಿಸಿಯೇ ಡಾ|| ಆರ್. ಸಿ. ಹಿರೇಮಠ ಅವರು ''ಡಾ|| ಕಲಬುರ್ಗಿಯವರು ನನ್ನ ಉತ್ತರಾಧಿಕಾರಿ'' ಎಂದು ಹೇಳಿರುವುದು ಮತ್ತು ಡಾ|| ಹಾ. ಮಾ. ನಾಯಕರು ''ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡವನ್ನು ಕಟ್ಟುವ ಕೆಲಸ ಮಾಡಿದವರಲ್ಲಿ ಕಲಬುರ್ಗಿಯವರೂ ಕೂಡುತ್ತಾರೆ. ಕನ್ನಡವನ್ನು ಕಟ್ಟುವುದೆಂದರೆ, ಅದನ್ನು ಬೆಳೆಸಲು ಏನು ಬೇಕೋ ಅದನ್ನು ಮಾಡುವುದು. ಆ ಕೆಲಸವನ್ನು ಅವರು ಸತತವಾಗಿ ಮಾಡಿಕೊಂಡು ಬಂದಿದ್ದಾರೆ'' ಎಂದು ಹೇಳಿರುವುದು ಡಾ|| ಕಲಬುರ್ಗಿ ಅವರ ಸಾಧನೆಯನ್ನು ಬಿಂಬಿಸುತ್ತದೆ.

ಡಾ|| ಎಂ. ಎಂ. ಕಲಬುರ್ಗಿ ಅವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿಯಾಗಿ ಸಂಶೋಧನಾಂಗ, ಪ್ರಸಾರಾಂಗ, ಆಡಳಿತಾಂಗ ಈ ಮೂರು ನೆಲೆಯಲ್ಲಿ ವಿಶ್ವವಿದ್ಯಾಲಯಕ್ಕೊಂದು ಅಪೂರ್ವ ಕಾಯಕಲ್ಪ ಒದಗಿಸಿದರು. ಅವರು ಕುಲಪತಿ ಹುದ್ದೆ ಸ್ವೀಕರಿಸಿದಾಗ ವಿಶ್ವವಿದ್ಯಾಲಯ ೨ ಕೋಟಿ ಸಾಲದ ಹೊರೆಯಲ್ಲಿತ್ತು. ವಿಶ್ವವಿದ್ಯಾಲಯವನ್ನು ಸಾಲದಿಂದ ಮುಕ್ತಮಾಡಿ ಕನ್ನಡ ಪ್ರಜ್ಞೆಯನ್ನು ಜಾಗತಿಕ ಪ್ರಜ್ಞೆಯಾಗಿಸುವ ನಿಟ್ಟಿನಲ್ಲಿ ಬೆಳೆಸಿ ಇತರ ವಿಶ್ವವಿದ್ಯಾಲಯಗಳಿಗಿಂತ ಉನ್ನತ ದರ್ಜೆಯ ವಿಶ್ವವಿದ್ಯಾಲಯವನ್ನಾಗಿ ಮೂರು ವರುಷಗಳ ಅವಧಿಯಲ್ಲಿ ಕಟ್ಟಿದ ರೀತಿ ಅಪೂರ್ವ. ವಿಶ್ವವಿದ್ಯಾಲಯದ ಶಿಕ್ಷಣ ನವೀಕರಣಗೊಳ್ಳುವ ಮೂಲಕ ವಿಸ್ತಾರಗೊಳ್ಳಬೇಕೆಂಬ ಆಶಯದಿಂದ ಮಹಿಳಾ ಅಧ್ಯಯನ ವಿಭಾಗ, ದ್ರಾವಿಡ ಅಧ್ಯಯನ ವಿಭಾಗ, ವಿಶ್ವಕನ್ನಡ ವಿಭಾಗ, ದಾಸಸಾಹಿತ್ಯ ಪೀಠ, ಶಂಬಾ ಅಧ್ಯಯನ ಪೀಠ, ಜೈನ ಅಧ್ಯಯನ ಪೀಠಗಳನ್ನು ಹೊಸದಾಗಿ ಅಸ್ತಿತ್ವಕ್ಕೆ ತಂದರು. 'ಜಗತ್ತಿನ ಎಲ್ಲ ದಾರಿಗಳೂ ಹಂಪೆಯ ಕಡೆಗೆ' ಹೊರಳಬೇಕೆಂಬ ತಮ್ಮ ಕನಸನ್ನು ನನಸಾಗಿಸುವತ್ತ ಪರಿಶ್ರಮವಹಿಸಿದರು.

ಪ್ರಸಾರಾಂಗಕ್ಕೆ ಒಂದು ಮೂರ್ತಸ್ವರೂಪ ಕೊಟ್ಟ ಡಾ|| ಎಂ. ಎಂ. ಕಲಬುರ್ಗಿ ಅವರು ಸರಕಾರದ ಅನುದಾನ, ದಾನಿಗಳ ಸಂಗ್ರಹದ ಮೂಲಕ ೩೦೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದು ಅದ್ಭುತ ಕಾರ್ಯವೆಂದೇ ಹೇಳಬೇಕು. ಹಸ್ತಪ್ರತಿ ವಿಭಾಗ, ಜಾನಪದ-ಪುರಾತತ್ವ ವಿಭಾಗ, ಶಿಲ್ಪಕಲಾ ವಿಭಾಗ, ಗ್ರಂಥಾಲಯ, ಮ್ಯೂಸಿಯಂ ಮುಂತಾದ ಇತರ ವಿಭಾಗಗಳು ಇವರ ಕುಲಪತಿ ಅವಧಿಯಲ್ಲಿ ತುಂಬ ವೇಗವಾಗಿ ಬೆಳೆದವು. ಅಲ್ಲಿಯ ಪ್ರಾಧ್ಯಾಪಕರನ್ನು ವೈಯಕ್ತಿಕ ಯೋಜನೆ – ಸಾಂಸ್ಥಿಕ ಯೋಜನೆ ಎಂಬ ಆಯಾಮಗಳಲ್ಲಿ ಕ್ರಿಯಾಶೀಲಗೊಳಿಸಿದರು.

ಡಾ|| ಎಂ. ಎಂ. ಕಲಬುರ್ಗಿ ಅವರ ಸಾಹಿತ್ಯಿಕ, ಶೈಕ್ಷಣಿಕ ಶ್ರಮ-ಸೇವೆಯನ್ನು ಗಮನಿಸಿ, ಕರ್ನಾಟಕ ಸರಕಾರ ರಾಜ್ಯದ ಪ್ರತಿಷ್ಠಿತ 'ಪಂಪಪ್ರಶಸ್ತಿ' ನೀಡಿ ಗೌರವಿಸಿದೆ. ಸಾರ್ವಜನಿಕರು ಅವರ ೭೦ನೆಯ ಹುಟ್ಟುಹಬ್ಬ ಆಚರಿಸಿ 'ಮಹಾಮಾರ್ಗ' ಹೆಸರಿನ ಅಭಿನಂದನ ಗ್ರಂಥ ಅರ್ಪಿಸಿದರು. ನಾಮವಿಜ್ಞಾನ ಕ್ಷೇತ್ರದ ಗಣ್ಯ ಸಾಧನೆಗಾಗಿ, ತಂಜಾವೂರಿನಲ್ಲಿ ಜರುಗಿದ ಆಲ್ ಇಂಡಿಯ ಪ್ಲೇಸ್ ನೇಮ್ ಕಾನ್ಫರೆನ್ಸ್‌ನ ಅಧ್ಯಕ್ಷ ಗೌರವ, 'ಜಾನಪದ ಮತ್ತು ಯಕ್ಷಗಾನ ಅಕಾಡೆಮಿ'ಯ 'ಜಾನಪದತಜ್ಞ' ಪ್ರಶಸ್ತಿ , ಮಹಾಲಿಂಗಪುರದಲ್ಲಿ ಜರುಗಿದ 'ಅಖಿಲ ಕರ್ನಾಟಕ ಶ್ರೀಕೃಷ್ಣ ಪಾರಿಜಾತ ಸಮ್ಮೇಲನ'ದ ಅಧ್ಯಕ್ಷತೆಯ ಗೌರವ, ಇತಿಹಾಸ ಕ್ಷೇತ್ರದ ದುಡಿಮೆಯನ್ನು ಗಮನಿಸಿ, ಸಂಡೂರಿನಲ್ಲಿ ಜರುಗಿದ 'ಇತಿಹಾಸ ಸಮ್ಮೇಲನ' ದ ಅಧ್ಯಕ್ಷ ಗೌರವ, ಅ. ಭಾ. ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮುಂತಾದ ಗೌರವಗಳಲ್ಲದೆ, ದೇಜಗೌ ಟ್ರಸ್ಟಿನ 'ವಿಶ್ವಮಾನವ' ಪ್ರಶಸ್ತಿ , ಕರ್ನಾಟಕ ಘನ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದಿರುವ ಅವರಿಗೆ ಈಗ ಪ್ರತಿಷ್ಠಿತ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ.

ರಾಜ್ಯದಲ್ಲಿ ಕನ್ನಡವೇ ಮುಖ್ಯಭಾಷೆಯಾಗಿರಬೇಕು. ಶಿಕ್ಷಣದ ಪ್ರಾರಂಭದ ಹಂತದಲ್ಲಿ ಕನ್ನಡಕ್ಕೆ ಅಗ್ರಸ್ಥಾನವಿರಬೇಕೆಂಬುದು ಹಿರಿಯರ ಆಶಯ. ಆದರೆ ಸರಕಾರದ ಅತಿರೇಕದ ನಿರ್ಧಾರದಿಂದ ಕನ್ನಡ ಭಾಷೆಗೆ ಕುತ್ತು ಬಂದಾಗ, ಕನ್ನಡ ಭಾಷೆಯ ಉಳಿವಿಗಾಗಿ ಉತ್ತರ ಕರ್ನಾಟಕದ ಜನರು ಮೊದಲ ಧ್ವನಿ ಎತ್ತಿದರು. ಅದರಲ್ಲೂ ಧಾರವಾಡದ 'ಕನ್ನಡ ಕ್ರಿಯಾ ಸಮಿತಿ' ಡಾ|| ಪಾಟೀಲ ಪುಟ್ಟಪ್ಪ, ಡಾ|| ಕಲಬುರ್ಗಿ, ಪ್ರೊ|| ಚಂಪಾ ಅವರ ನೇತೃತ್ವದಲ್ಲಿ ಬಹುದೊಡ್ಡ ಆಂದೋಲನವನ್ನೇ ಮಾಡಿತು. ಡಾ|| ರಾಜಕುಮಾರ ಇವರು ಆಂದೋಲನವನ್ನು ಸೇರಿಕೊಳ್ಳುವ ಮೂಲಕ ರಾಜ್ಯವ್ಯಾಪಿಯಾಗಿ ಸರಕಾರದ ನಿರ್ಧಾರವನ್ನು ವಿರೋಧಿಸುವ ಕಾರ್ಯ ಜರುಗಿತು. ಇದರಿಂದ ಸರಕಾರ ಬೇಷರತ್ತಾಗಿ ಇವರ ಬೇಡಿಕೆಯನ್ನು ಮನ್ನಿಸಿ 'ಕನ್ನಡ ಭಾಷೆ'ಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಡಮಾಡಿತು. ಈ ಕುರಿತು ಡಾ|| ಕಲಬುರ್ಗಿ ಅವರು ''ಇದು ನನ್ನ ಜೀವನದ ಬಹು ದೊಡ್ಡ ಕನ್ನಡ ಸೇವೆ'' ಎಂದು ಭಾವತುಂಬಿ ನುಡಿಯುತ್ತಾರೆ.

ಡಾ|| ಎಂ. ಎಂ. ಕಲಬುರ್ಗಿ ಅವರ ಸಾಹಿತ್ಯಿಕ, ಶೈಕ್ಷಣಿಕ ಶ್ರಮ-ಸೇವೆಯನ್ನು ಗಮನಿಸಿ, ಕರ್ನಾಟಕ ಸರಕಾರ ರಾಜ್ಯದ ಪ್ರತಿಷ್ಠಿತ 'ಪಂಪಪ್ರಶಸ್ತಿ' ನೀಡಿ ಗೌರವಿಸಿದೆ. ಸಾರ್ವಜನಿಕರು ಅವರ ೭೦ನೆಯ ಹುಟ್ಟುಹಬ್ಬ ಆಚರಿಸಿ 'ಮಹಾಮಾರ್ಗ' ಹೆಸರಿನ ಅಭಿನಂದನ ಗ್ರಂಥ ಅರ್ಪಿಸಿದರು. ನಾಮವಿಜ್ಞಾನ ಕ್ಷೇತ್ರದ ಗಣ್ಯ ಸಾಧನೆಗಾಗಿ, ತಂಜಾವೂರಿನಲ್ಲಿ ಜರುಗಿದ ಆಲ್ ಇಂಡಿಯ ಪ್ಲೇಸ್ ನೇಮ್ ಕಾನ್ಫರೆನ್ಸ್‌ನ ಅಧ್ಯಕ್ಷ ಗೌರವ, 'ಜಾನಪದ ಮತ್ತು ಯಕ್ಷಗಾನ ಅಕಾಡೆಮಿ'ಯ 'ಜಾನಪದತಜ್ಞ' ಪ್ರಶಸ್ತಿ, ಮಹಾಲಿಂಗಪುರದಲ್ಲಿ ಜರುಗಿದ 'ಅಖಿಲ ಕರ್ನಾಟಕ ಶ್ರೀಕೃಷ್ಣ ಪಾರಿಜಾತ ಸಮ್ಮೇಲನ'ದ ಅಧ್ಯಕ್ಷತೆಯ ಗೌರವ, ಇತಿಹಾಸ ಕ್ಷೇತ್ರದ ದುಡಿಮೆಯನ್ನು ಗಮನಿಸಿ, ಸಂಡೂರಿನಲ್ಲಿ ಜರುಗಿದ 'ಇತಿಹಾಸ ಸಮ್ಮೇಲನ'ದ ಅಧ್ಯಕ್ಷ ಗೌರವ, ಅ. ಭಾ. ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮುಂತಾದ ಗೌರವಗಳಲ್ಲದೆ, ದೇಜಗೌ ಟ್ರಸ್ಟಿನ 'ವಿಶ್ವಮಾನವ' ಪ್ರಶಸ್ತಿ, ಕರ್ನಾಟಕ ಘನ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದಿರುವ ಅವರಿಗೆ ಈಗ ಪ್ರತಿಷ್ಠಿತ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ.

ಹಲವಾರು ಸಲ ವಿಶ್ವವಿದ್ಯಾಲಯದ ಸೆನೆಟ್, ಸಿಂಡಿಕೇಟ್, ಅಕಾಡೆಮಿಕ್ ಕೌನ್ಸಿಲ್ ಸಭೆಗಳ ಸದಸ್ಯರಾಗಿ, ಕಲಾವಿಭಾಗದ ಡೀನ್ ಆಗಿ ಕೆಲಸ ನಿರ್ವಹಿಸಿದ ಅವರು, ಕನ್ನಡ ಸಂಶೋಧನ ಸಂಸ್ಥೆ (ಕೆ.ಆರ್.ಆಯ್.)ಯ ಕಾರ್ಯ ನಿರ್ವಾಹಕ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಸಂಸ್ಕೃತಿಯೆನ್ನುವುದು 'ಸಮೂಹಸಮ್ಮತ ಜೀವನ ಪದ್ಧತಿ'ಯಾಗಿದೆ. ಪ್ರಾಚೀನ ಕನ್ನಡ ಸಮಾಜ ತನ್ನ ಬದುಕಿನಲ್ಲಿ ಸಾಮಾಜಿಕ ನ್ಯಾಯ - ಸಾಮಾಜಿಕ ಅನ್ಯಾಯ ರೂಪದ ಅನೇಕ ಜೀವನಪದ್ಧತಿಗಳನ್ನು ರೂಪಿಸಿ ಕೊಂಡಿದ್ದಿತು. ವರ್ತಮಾನದ ಬದುಕನ್ನು ಅರ್ಥಮಾಡಿ ಕೊಳ್ಳಲು, ಸರಿಪಡಿಸಲು ನೆರವಾಗುವ ಇದರ ಅಧ್ಯಯನ ಇಂದು ತುಂಬ ಮಹತ್ವ ಪಡೆದಿದೆ.' ಎಂಬ ಹಿನ್ನೆಲೆಯಲ್ಲಿ ಸಾಹಿತ್ಯ, ಶಾಸನ, ಜಾನಪದ ಮುಂತಾದ ಶಿಷ್ಟ-ಪರಿಶಿಷ್ಟ ಆಕರಗಳನ್ನು ಬಳಸಿಕೊಂಡು, ಕಳೆದುಹೋದ ಕನ್ನಡಿಗರ ಅನೇಕ ಜೀವನಪದ್ಧತಿ-ನಂಬಿಕೆಗಳನ್ನು ಶೋಧಿಸುವ ಕಾರ್ಯವನ್ನು ಡಾ|| ಎಂ. ಎಂ. ಕಲಬುರ್ಗಿ ಅವರು ತುಂಬ ಪ್ರಾಮಾಣಿಕವಾಗಿ ಮಾಡಿದ್ದಾರೆ. ರಾಜಕೀಯ-ಸಾಮಾಜಿಕ ವಲಯದ ಜೊತೆಗೆ ಧಾರ್ಮಿಕ ವಲಯದ ಬೌದ್ಧ-ಜೈನ-ಲಿಂಗಾಯತ-ವೈದಿಕ ಇತ್ಯಾದಿ ಮುಖ್ಯ ಧರ್ಮಗಳು ಮತ್ತು ನಾಥ ಇತ್ಯಾದಿ ಸಂಪ್ರದಾಯಗಳ ಸಂಸ್ಕೃತಿಗಳು ಅವರ ಅಧ್ಯಯನಕ್ಕೆ ವಸ್ತುವಾಗಿವೆ. ಕನ್ನಡ ಸಾಹಿತ್ಯದ ವಿಸ್ತಾರವನ್ನು ಕುರಿತು ತುಂಬ ಆಳವಾಗಿ ಅಧ್ಯಯನ ಮಾಡಿರುವ ಡಾ|| ಕಲಬುರ್ಗಿ ಅವರು ಶಾಸನಗಳಲ್ಲಿ ತೊಡಕಾಗಿ ನಿಂತ ಅನೇಕ ಶಬ್ದಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಣೆಗೊಳಪಡಿಸಿದ್ದಾರೆ. ಪಂಪ ಮತ್ತು ವಚನಕಾರರು ಅವರ ಪ್ರೀತಿಯ ವಿಷಯಗಳು. ಪಂಪಭಾರತದ ಅನೇಕ ಪದ್ಯಗಳ ಅರ್ಥ ಬಿಡಿಸುವಲ್ಲಿ, ಪಂಪನ ತಾಯಿಯ ಊರು ಗದಗ ಹತ್ತಿರದ ಅಣ್ಣಿಗೇರಿ ಎಂದು ಶೋಧಿಸುವಲ್ಲಿ ಅವರು ತೋರಿದ ಸಂಶೋಧನ ಜಾಣ್ಮೆ ಮೆಚ್ಚುವಂತಹದು. ''ಕನ್ನಡ ಕಾವ್ಯಪರಂಪರೆಯ ದೇಸಿ-ಮಾರ್ಗ, ಲೌಕಿಕ-ಆಗಮಿಕ, ವಸ್ತುಕ-ವರ್ಣಕ, ರೀತಿ-ಶೈಲಿ, ಸಾಹಿತ್ಯಸಂವಹನ, ದೇಶಿಸಾಹಿತ್ಯ ಸಂಪಾದನೆಯ ವಿಧಾನ, ಶ್ಲೇಷಕಾವ್ಯ-ಶಾಸ್ತ್ರಕಾವ್ಯ – ಸಮಸ್ತಕಾವ್ಯ, ಪ್ರದರ್ಶನ-ಪ್ರಸಂಗ-ಪ್ರಬಂಧ, ಶೂನ್ಯ ಸಂಪಾದನೆಯ ಸಾಹಿತ್ಯಪ್ರಕಾರದ ಸ್ವರೂಪ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಹೊಸ ವಿಚಾರಗಳನ್ನು ಮಂಡಿಸಿದ್ದೇನೆ. ಪಂಪ, ಅಭಿನವಪಂಪ, ಬಸವಣ್ಣ ಮೊದಲಾದವರ ರಚನೆಗಳನ್ನು ಹೊಸ ರೀತಿಯಿಂದ ವ್ಯಾಖ್ಯಾನಿಸಿದ್ದೇನೆ'' ಎಂದು ತಮ್ಮ ಸಾಹಿತ್ಯಕ್ಷೇತ್ರದ ವ್ಯಾಪ್ತಿಯನ್ನು ಅವರು ಒಂದೆಡೆ ತಿಳಿಸಿದ್ದಾರೆ.

ಕನ್ನಡ ಸಂಸ್ಕೃತಿಯನ್ನು ಅತ್ಯಂತ ನಿಖರವಾಗಿ ತಿಳಿಸುವ ಮೂಲ ದಾಖಲೆಗಳೆಂದರೆ ಶಾಸನಗಳು. ಶಾಸನ ಕ್ಷೇತ್ರ ಪಾಶ್ಚಿಮಾತ್ಯರಿಂದ ದೇಶೀಯ ವಿದ್ವಾಂಸರಿಗೆ ಬಳುವಳಿಯಾಗಿ ಬಂದ ಒಂದು ಉಪೇಕ್ಷಿತ ಕ್ಷೇತ್ರ. ಡಾ|| ಎಂ. ಎಂ. ಕಲಬುರ್ಗಿ ಅವರು 'ಶಾಸನಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಷಯ ಸಂಶೋಧನೆ, ಪೂರಕ ಗ್ರಂಥಗಳ ರಚನೆ, ಶಾಸನಗಳ ಪ್ರಕಟನೆಗೆ ಪ್ರೇರಣೆ, ಶಾಸನಕ್ಷೇತ್ರದ ಸಂಶೋಧನೆಗೆ ಮಾರ್ಗದರ್ಶನ' – ಎಂಬ ನಾಲ್ಕೂ ಆಯಾಮಗಳಲ್ಲಿ ದುಡಿದವರು. 'ಶಾಸನಗಳಲ್ಲಿ ಶಿವಶರಣರು', 'ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು', 'ಶಾಸನ ವ್ಯಾಸಂಗ', ೧-೨, 'ಧಾರವಾಡ ಜಿಲ್ಲೆಯ ಶಾಸನಸೂಚಿ' ಮುಂತಾದ ಶಾಸನಾಧ್ಯಯನದ ಕೃತಿಗಳಲ್ಲದೆ ಶಾಸನಗಳನ್ನಾಧರಿಸಿ ನೂರಾರು ವಿಶ್ಲೇಷಣಾತ್ಮಕ - ವ್ಯಾಖ್ಯಾನಾತ್ಮಕ ಸಂಶೋಧನ ಲೇಖನಗಳನ್ನು ಮಾರ್ಗ ಸಂಪುಟದಲ್ಲಿ ಅಳವಡಿಸಿದ್ದಾರೆ. ಶಾಸನಕ್ಷೇತ್ರ ಪ್ರವೇಶಿಸುವ ಯಾರೇ ಆಗಲಿ ಡಾ|| ಕಲಬುರ್ಗಿ ಅವರ ಸಂಶೋಧನೆಯನ್ನು ಪರಿಶೀಲಿಸದೆ ಮುಂದೆ ಹೋಗಲಾರರು.

ಆಧುನಿಕ ಶಿಕ್ಷಣದ ಪರಿಣಾಮವಾಗಿ ಕನ್ನಡ ಅಧ್ಯಯನ ಕ್ಷೇತ್ರಗಳು ಇನ್ನೂ ವ್ಯಾಪಕವಾಗಿ ಬೆಳೆದವು. ಹೀಗಾಗಿ ಕನ್ನಡದ ಹೊಸ ಕ್ಷೇತ್ರಗಳನ್ನು ಕುರಿತು ಸಾಹಿತ್ಯ ರಚಿಸುವ ಅನಿವಾರ್ಯತೆ ಸಮಕಾಲೀನ ವಿದ್ವತ್ ಸಮಾಜದ ಮೇಲಿತ್ತು. ಈ ಹಿನ್ನೆಲೆಯಲ್ಲಿ ಡಾ|| ಎಂ. ಎಂ. ಕಲಬುರ್ಗಿ ಅವರ 'ಕನ್ನಡ ಹಸ್ತಪ್ರತಿಶಾಸ್ತ್ರ', 'ಕನ್ನಡ ಗ್ರಂಥಸಂಪಾದನಶಾಸ್ತ್ರ', 'ಕನ್ನಡ ಸಂಶೋಧನಶಾಸ್ತ್ರ', 'ಕನ್ನಡ ನಾಮವಿಜ್ಞಾನ' – ಈ ನಾಲ್ಕು ಗ್ರಂಥಗಳು ಆಯಾ ಕ್ಷೇತ್ರಗಳ ಕೊರತೆಯನ್ನು ತುಂಬಿಕೊಟ್ಟಿವೆ. ವಿಶ್ವವಿದ್ಯಾಲಯದ ಅಧ್ಯಯನ, ಅಧ್ಯಾಪನಗಳನ್ನೇ ಮೂಲಧನವಾಗಿಸಿಕೊಂಡು ಬರೆದ ಇವು, ಅನುವಾದ ಇಲ್ಲವೆ ಅನುಸರಣೆಗಳೆನಿಸದೆ, ಸ್ವತಂತ್ರ ರಚನೆಗಳೆನಿಸಿವೆ. ಇವುಗಳಲ್ಲಿ 'ಕನ್ನಡ ಗ್ರಂಥಸಂಪಾದನ ಶಾಸ್ತ್ರ'ವನ್ನು ಕುರಿತು ಡಾ|| ಹಾ. ಮಾ. ನಾಯಕರು ಬರೆದ ''ವಿದ್ವತ್ತು, ಪಾಂಡಿತ್ಯ ಇವು ನಮ್ಮೊಂದಿಗೆ ಕೊನೆಗಾಣುತ್ತವೆಂದು ಭಾವಿಸಿರುವ ಜನ ಇನ್ನೂ ಇರುವಾಗಲೇ ನೀವು ಇಂಥ ಪುಸ್ತಕವನ್ನು ಪ್ರಕಟಿಸಿರುವುದು ಅಭಿಮಾನದ ಮಾತು'' ಎಂಬುದು ಮನನೀಯವೆನಿಸಿದೆ. ಕನ್ನಡ ಗ್ರಂಥಸಂಪಾದನ

## ಪುನರಾಯಾನ್ ಮಹಾಕಪಿಃ

ಹೇಳು ನೀನು.... ಹೆದರಬೇಡ
ಯಾರವಳು ನಿನ್ನ ಅಮೆರಿಕಾ ಬಾಸು
ಐ.ಟಿ. ಸ್ಪೆಷಲಿಸ್ಟು?
ಹಾ... ಜೆನ್ನಿಫರ್... ಹೇಳು ಅವಳಿಗೆ

ನಿಮ್ಮ ಹುಡುಗ ಹುಡುಗಿಯರು
ಎಸ್.ಎಸ್.ಎಲ್.ಸಿ. ದಾಟುವುದಿಲ್ಲ
ಹೊಸಲು ದಾಟುತ್ತಾರೆ.

ಉನ್ನತ ಶಿಕ್ಷಣ ವರ್ಜ್ಯ:
ಬೀಚಿಂದ ಬೀಚಿಗೆ ಅಲೆಯುತ್ತಾರೆ;
ಗಾಂಜ, ಚರಸ್, ವಿಸ್ಕಿ, ರಮ್ಮಿನಲ್ಲಿ ಮುಳುಗುತ್ತಾರೆ;
ಕಂಟ್ರೀಟುಕಂಟ್ರಿ ಸುತ್ತುತ್ತಾರೆ;
ಅನುಭವದ ಪಾಠ ಕಲಿತರೂ
ಹತಾಶೆಯ ಪೀಕಲಾಟ ತಪ್ಪಿದ್ದಲ್ಲ ಅವರಿಗೆ.

ಅದಕ್ಕೇ ನೀವು...
ಇಂಡಿಯಾದಿಂದ ಇಂಪೋರ್ಟ್
ಮಾಡಿಕೊಳ್ಳುತ್ತೀರಿ;
ಬೊಗಸೆ, ಬೊಗಸೆ ಸಂಬಳ ಪೀಕುತ್ತೀರಿ;
ಕಾಲ್‌ಸೆಂಟರ್ ಸುತ್ತ ಹಾತೊರೆಯುತ್ತೀರಿ;
ಹಗಲೂ ರಾತ್ರಿ ನಿದ್ದೆಗೆಡಿಸುತ್ತೀರಿ
ಹೊರೆಹೊರೆ ಕೆಲಸ ಹೇರುತ್ತೀರಿ;
ಅರ್ಧ ಜೀವನವನ್ನೇ ನುಂಗಿಹಾಕುತ್ತೀರಿ.

ಆದರೂ... ತಲೆ ಬಗ್ಗಿ, ಬಗ್ಗಿಸಿ
ಗುಲಾಮಿ ಮಾಡುತ್ತಿದ್ದೇವೆ ನಾವು;
ರಾಷ್ಟ್ರಗೀತೆ ಹ್ರಸ್ವ ಮಾಡಲೂ ತಯಾರು;
ನಿಮಗಾಗಿ; ನಿಮ್ಮ ಖುಷಿಗಾಗಿ;
ಏಕೆ ಗೊತ್ತಾ... ನಮ್ಮಲ್ಲಿ, ನಮಗೆ
ಅವಕಾಶವಿಲ್ಲ

ನಿಮಗೇನು ಗೊತ್ತು?...
ಮನೆ ಮಂದಿಯೆಲ್ಲ ಸೇರುವ ಸಂಭ್ರಮ;
ಹಬ್ಬದ ಗೌಜು, ಗದ್ದಲದ ನಡುವೆ
ಮನಸ್ಸು ಹಗುರ ಮಾಡಿಕೊಳ್ಳುವ ಗಮ್ಮತ್ತು;
ಪಟಾಕಿ ಸಿಡಿಸುವ ಗೈರತ್ತು;
ರುಚಿ, ರುಚಿ, ಭಕ್ಷ್ಯ ಭೋಜ್ಯ
ನೈವೇದ್ಯದ ಹಿಕಮತ್ತು.

ಕಾಣುತ್ತಿದ್ದೇನೆ...
ಸಾಗರ ಮಧ್ಯದ ನನ್ನ ಸುವರ್ಣಲಂಕೆಯನ್ನು;
ಧ್ವಂಸ ಮಾಡುವ ನಿಮ್ಮ ಕಸರತ್ತನ್ನು;
ಭಯಾನಕವಾಗಿ ನಮ್ಮನ್ನು ನುಂಗಿ ನೊಣೆಯುತ್ತ
ಮತ್ತೊಮ್ಮೆ ನಮ್ಮನ್ನಾಳುವ ಹುನ್ನಾರನ್ನು;
'ಪುನರಾಯಾನ್ ಮಹಾಕಪಿಃ' ಎಂಬುದನ್ನು.



ನಾಗರಾಜ ರಾಯ್ಕಲ್
ಸಿ-೧೩೨, 'ನಂದನ', ೨ನೇ ತಿರುವು, ಅಗ್ರಹಾರ, ಸಾಗರ - ೫೭೭೪೦೧, ಶಿವಮೊಗ್ಗ ಜಿಲ್ಲೆ

ಶಾಸ್ತ್ರವು ದೇಶಿ ಮತ್ತು ಮಾರ್ಗ ಎಂಬ ಎರಡು ಕವಲುಗಳಲ್ಲಿ ರೂಪುಗೊಳ್ಳಬೇಕಾಗಿತ್ತು. ಆದರೆ ಪಾಶ್ಚಿಮಾತ್ಯ ವಿದ್ವಾಂಸರಿಂದ ಅದು ಒಂದೇ ತಳಹದಿಯಲ್ಲಿ ರೂಪುಗೊಳ್ಳುತ್ತ ಬಂದಿತು. ಹೀಗಾಗಿ ಶ್ರವಣ ಸಂಸ್ಕೃತಿ ಪಾತಳಿಯಲ್ಲಿ ಹುಟ್ಟಿದ ದೇಶಿ ಸಾಹಿತ್ಯವು ಮಾರ್ಗ ಸಾಹಿತ್ಯದ ಪಾತಳಿಯಲ್ಲಿ ಸಂಪಾದನೆಗೆ ಒಳಗಾದುದು ವಿಷಾದದ ಸಂಗತಿಯೇ ಸರಿ. ಪಾಶ್ಚಿಮಾತ್ಯ ವಿದ್ವಾಂಸರಿಂದ ನಡೆದ ಈ ತಪ್ಪುಗಳನ್ನು ಸರಿಪಡಿಸಿಕೊಂಡು ಎರಡು ಕವಲುಗಳಲ್ಲಿ ಕನ್ನಡ ಪ್ರಾಚೀನ ಸಾಹಿತ್ಯವನ್ನು ಸಂಪಾದಿಸುವ ಹೊಣೆಯನ್ನು ಡಾ|| ಕಲಬುರ್ಗಿ ಅವರು ತುಂಬ ಅವಧಾನದಿಂದ ಹೊತ್ತರು. ಅವರ ಗ್ರಂಥ ಸಂಪಾದನ ಸೂತ್ರದನ್ವಯ 'ಹರಿಹರನ ಸಮಗ್ರ ರಗಳೆ', 'ಸಮಗ್ರ ವಚನಸಾಹಿತ್ಯ ಸಂಪುಟ'ಗಳ ಸಂಪಾದನೆ ಮತ್ತು ಪ್ರಕಟಣೆಗಳು ಐತಿಹಾಸಿಕ ಘಟನೆಗಳೆನಿಸಿವೆ. 'ಕರ್ನಾಟಕದ ಕೈಫಿಯತ್ತುಗಳು', 'ಕುಮಾರ ರಾಮನ ಸಾಂಗತ್ಯಗಳು', 'ಕೇಶೀರಾಜ ಕೃತಿಗಳು' ಮುಂತಾದ ಕೃತಿಗಳು ಅವರ ಗ್ರಂಥಸಂಪಾದನ ಶಾಸ್ತ್ರದ ನಿಶಿತಮತಿಗೆ ಉತ್ತಮ ನಿದರ್ಶನವೆನಿಸಿವೆ.

''ನಾನು ಹಳ್ಳಿ ಮೂಲದ, ಕೃಷಿಕ ವೃತ್ತಿಯ, ಅವಿಭಕ್ತ ಕುಟುಂಬದವನು. ಈ ಮೂರು ಆಯಾಮಗಳು ಕಾರಣವಾಗಿ ಜಾನಪದ ನನ್ನ ಸ್ವಭಾವವಾಗಿಬಿಟ್ಟಿದೆ. ಹೀಗಾಗಿ ಜಾನಪದ ಬೋಧನೆ, ಸಂಶೋಧನೆ, ಸಂಘಟನೆ, ಪ್ರಸಾರ ಇತ್ಯಾದಿ ಕಾರ್ಯಗಳಲ್ಲಿ ನಾನು ಸಹಜವಾಗಿಯೇ ಪಾತ್ರವಹಿಸಿದೆ'' ಎಂದು ಡಾ|| ಎಂ. ಎಂ. ಕಲಬುರ್ಗಿ ಅವರೇ ಒಂದು ಕಡೆ ಹೇಳುತ್ತಾರೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 'ಜಾನಪದ ಸಾಹಿತ್ಯ ಸಮ್ಮೇಲನ' ಅಸ್ತಿತ್ವಕ್ಕೆ ಬರುವಲ್ಲಿ ಮುಖ್ಯಪಾತ್ರ ವಹಿಸಿದುದು, ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ 'ದೇಶಿ ಸಮ್ಮೇಲನ' ಆರಂಭಿಸಿದುದು, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಜಾನಪದ ಮ್ಯೂಸಿಯಂ ಸಲುವಾಗಿ ವಸ್ತುಗಳನ್ನು ಸಂಗ್ರಹಿಸಿದುದು, ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಸುಸಜ್ಜಿತ ಜಾನಪದ ಮ್ಯೂಸಿಯಂ ಸ್ಥಾಪಿಸಿದುದು, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಾರ್ಷಿಕ 'ಜಾನಪದ ಆನ್ವಯಿಕ ಅಧ್ಯಯನ ಶಿಬಿರ'ವನ್ನು ಆರಂಭಿಸಿದುದು, ಗದುಗಿನ ತೋಂಟದಾರ್ಯ ಮಠದ ಲಿಂಗಾಯತ ಅಧ್ಯಯನಸಂಸ್ಥೆಯ ಆಶ್ರಯದಲ್ಲಿ 'ಪ್ರವಾದಿ ಬಸವೇಶ್ವರ' ನಾಟಕದ ಪಠ್ಯ ರಚಿಸಿ, ಇದನ್ನು ಪ್ರಸಿದ್ಧ ಕಲಾವಿದ ಶ್ರೀ ಬೆಳಗಲ್ಲು ವೀರಣ್ಣ ಕುಟುಂಬದ ಮೂಲಕ ಜಾನಪದ ತೊಗಲುಗೊಂಬೆ ಆಟಕ್ಕೆ ಅಳವಡುವಂತೆ ಮಾಡಿ, ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ೧೦೦ ಪ್ರಯೋಗಗಳನ್ನು ಮಾಡಿಸಿರುವುದು, ಜಾನಪದ ಕ್ಷೇತ್ರಕಾರ್ಯ, ವಿಚಾರ ಸಂಕಿರಣ, ಪುಸ್ತಕ ಪ್ರಕಟಣೆಗಳು ದೊಡ್ಡ ಪ್ರಮಾಣದಲ್ಲಿ ಜರಗುವಂತೆ ದುಡಿದುದು, ಸಾಹಿತ್ಯ, ಶಾಸನ, ಭಾಷೆ, ಗ್ರಾಮೀಣ ಆಚರಣೆಗಳನ್ನು ಆಕರವಾಗಿ ಬಳಸಿ ಜಾನಪದ ಅಧ್ಯಯನ-ಲೇಖನ ಬರವಣಿಗೆ ಕಾರ್ಯ ಮಾಡಿದುದು ಅವರ ಜಾನಪದ ಪ್ರೀತಿಯನ್ನು ತೋರಿಸುತ್ತದೆ.

ಬಸವಪ್ರಣೀತ ಲಿಂಗಾಯತ ಧರ್ಮವು ಶೈವ-ವೀರಶೈವ ಪದಗಳ ಒಳಸುಳಿಯಲ್ಲಿ ಸಿಕ್ಕು ಅನುಭವಿಸಿದ ಆತಂಕಗಳನ್ನು ತುಂಬ ಗಂಭೀರವಾಗಿ ಅಧ್ಯಯನ ಮಾಡಿದ ಡಾ|| ಎಂ. ಎಂ. ಕಲಬುರ್ಗಿ ಅವರು ಶರಣ ಚಳುವಳಿಯ ಪ್ರೇರಣೆ ಅದರ ನಿಜಸ್ವರೂಪ, ಆಯಾಮಗಳು, ಭವಿಷ್ಯತ್ತಿನಲ್ಲಿ ಅದು ಪಡೆದುಕೊಂಡ ತಿರುವುಗಳು ಮುಂತಾದ ವಿಷಯಗಳನ್ನು ತಮ್ಮ ಸಂಶೋಧನ ಲೇಖನಗಳ ಮೂಲಕ ಸಮುದಾಯಕ್ಕೆ ತಿಳಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ವಿದ್ವಾಂಸರು ಜನಪ್ರಿಯ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತ ಅನೇಕ ಸಂಸ್ಕೃತಿಯ ಮೂಲಧಾತುವೆನಿಸುವ ಕ್ಷೇತ್ರಗಳನ್ನು ಉಪೇಕ್ಷಿಸಿದ್ದರು. ಅಂಥ ಕ್ಷೇತ್ರಗಳನ್ನು ಹುಡುಕಿ, ದುಡಿಯುವ ಮೂಲಕ ಕನ್ನಡದ ಕೆಲವು ಕೊರತೆಗಳನ್ನು ತುಂಬಿಕೊಡುವ ಕೆಲಸವನ್ನು ಡಾ|| ಕಲಬುರ್ಗಿ ಅವರು ಮಾಡಿರುವುದಲ್ಲದೆ, ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಉಪೇಕ್ಷಿತ ವಿಷಯಗಳನ್ನು ಕೊಡುವುದರ ಮೂಲಕ ಸಂಶೋಧನ ಕ್ಷೇತ್ರದ ಮುಚ್ಚಿದ ಅನೇಕ ಬಾಗಿಲುಗಳು ತೆರೆದುಕೊಳ್ಳುವಂತೆ ಮಾಡಿದ್ದಾರೆ.

**ಮಾರ್ಗ - ೪**

ಕಳೆದ ವರ್ಷದ ಪ್ರತಿಷ್ಠಿತ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯು ಡಾ|| ಎಂ. ಎಂ. ಕಲಬುರ್ಗಿ ಅವರ 'ಮಾರ್ಗ - ೪' ಕೃತಿಗೆ ದೊರೆತಿದೆ. ಮಾರ್ಗ - ೪ ಸಂಪುಟವು ಅವರ ಈ ಹಿಂದೆ ಬಂದ ಮೂರು ಸಂಪುಟಗಳಿಗಿಂತ ತುಂಬ ಭಿನ್ನವೂ ವಿಶೇಷವೂ ಆಗಿದೆ. ಮೂರು ಸಂಪುಟಗಳಲ್ಲಿ ಮಾಡಿದ ಚಿಂತನೆಗಳು ಇಲ್ಲಿ ತುಂಬ ಆಳವಾಗಿ ಪರಿಷ್ಕರಣಗೊಂಡಿವೆ. ಮುಖ್ಯವಾಗಿ 'ವೀರಶೈವ' ಪದ ಮೂರು ಸಂಪುಟಗಳಲ್ಲಿ ವ್ಯಾಪಕವಾಗಿ ಬಳಕೆಯಾಗಿತ್ತು. ನಾಲ್ಕನೆಯ ಸಂಪುಟದ ಮೂಲಕ 'ವೀರಶೈವ' ಪದವು ಲಿಂಗಾಯತ ಧರ್ಮದ ಒಂದು ಸಂಪ್ರದಾಯರೂಪದ ಪದವಾಗಿದೆ. ಅದು ಧರ್ಮದ ಶಬ್ದವಾಗಲಾರದು ಎಂಬುದನ್ನು ಹಲವಾರು ಪ್ರಾಚೀನ ಆಧಾರಗಳನ್ನು ನೀಡುವ ಮೂಲಕ ಸಮರ್ಥಿಸಿದ್ದಾರೆ. ಈ ಸಂಪುಟದ ಬಗ್ಗೆ ಅವರೇ ಹೇಳುವಂತೆ –

**''ಇತ್ತೀಚೆಗೆ ಸಮಾಜದಲ್ಲಿ ಸಹಜ ಬದಲಾವಣೆಯ ಜೊತೆಗೆ, ರಾಜಕೀಯ ಧಾರ್ಮಿಕ ಧುರೀಣರಿಂದಾಗಿ ಕೃತಕ ಬದಲಾವಣೆಗಳು ಸಂಭವಿಸುತ್ತಲಿವೆ. ಇವರು ಸುಳ್ಳು ಇತಿಹಾಸದ ಮೂಲಕ ವರ್ತಮಾನದಲ್ಲಿ ಹುಟ್ಟುಹಾಕುತ್ತಲಿರುವ ಶೋಷಣೆಯನ್ನು ಹತ್ತಿಕ್ಕಲು, ನಿಜ ಇತಿಹಾಸವನ್ನು ಶೋಧಿಸಿಕೊಡುವುದು ಸಂಶೋಧಕನ ಕರ್ತವ್ಯವಾಗಿದೆ. ಅಂದರೆ ಸಂಶೋಧನೆ ಎನ್ನುವುದು ಕೇವಲ ಇತಿಹಾಸದ ಶೋಧವಲ್ಲ. ಇತಿಹಾಸವನ್ನು ಮುಂದುಮಾಡಿಕೊಂಡು ವರ್ತಮಾನವನ್ನು ದುರುಪಯೋಗಮಾಡಿಕೊಳ್ಳುವವರೊಂದಿಗೆ ನಡೆಸುವ ಹೋರಾಟವಾಗಿದೆ. ಸತ್ಯವೆಂಬ ಭೂತಕಾಲದ ಬಲದಿಂದ ಅಸತ್ಯವೆಂಬ ವರ್ತಮಾನ ಕಾಲವನ್ನು ಸರಿಪಡಿಸುವುದಾಗಿದೆ. ಹೀಗಾಗಿ ನನ್ನ ಸುತ್ತಲಿನ ವರ್ತಮಾನದ ಅಸತ್ಯಗಳು ಭೂತದ ಸತ್ಯವನ್ನು ಹುಡುಕಲು ನನ್ನನ್ನು ಒತ್ತಾಯಿಸಿದ ಫಲವಾಗಿ, ಇಲ್ಲಿಯ ಬಹಳಷ್ಟು ಲೇಖನಗಳು ಹುಟ್ಟಿಕೊಂಡಿವೆ. ಸಮಾಜದ ಪ್ರಚಲಿತ ಸಮಸ್ಯೆಗಳನ್ನು ಎತ್ತಿಕೊಂಡುದಲ್ಲದೆ, ಶಿಷ್ಟ ಆಕರಗಳೊಂದಿಗೆ ಪರಿಶಿಷ್ಟ ಆಕರಗಳನ್ನೂ ಬಳಸಿಕೊಂಡ ಕಾರಣ, ಇವು ಒಂದಿಷ್ಟು ಸಾಮಾಜಿಕ ಹೊಳಪನ್ನೂ ಒಳಗೊಂಡಿವೆ.''** (ಮಾರ್ಗಕ್ಕೆ ಮೊದಲು)

ಅಂತೆಯೇ ಮಾರ್ಗ - ೪ ಸಂಪುಟದಲ್ಲಿ ಕೂಡಲ ಸಂಗಮದ ಜಾತವೇದಿ ಗದ್ದುಗೆ: ಸುಳ್ಳಿನ ಕಂತೆ, ವೀರಶೈವ ಪದ: ಐತಿಹಾಸಿಕ ಬೆಳವಣಿಗೆ, ವೀರಶೈವ ಪದ: ಭೌಗೋಲಿಕ ಪ್ರಸಾರ, ಸಿದ್ಧಾಂತ ಶಿಖಾಮಣಿ: ಸೃಷ್ಟಿ ಸಂದರ್ಭ, ಚತುರಾಚಾರ್ಯ ಪೀಠ: ಸೃಷ್ಟಿ ಸಂದರ್ಭ, ಆಗಮಗಳ ಉತ್ತರ ಭಾಗ ಮತ್ತು ವೀರಶೈವ, ಪಂಚಮಸಾಲಿ ಹಾಗೆಂದರೇನು? ಕನಕದಾಸರ ವಿಷಯದಲ್ಲಿ ಸೃಷ್ಟಿಸಿಕೊಂಡಿರುವ ಗೊಂದಲಗಳು, ಕುರುಬ ಸಮಾಜ-ಲಿಂಗಾಯತ ಸಮಾಜ ಮುಂತಾದ ಲೇಖನಗಳು ವರ್ತಮಾನದಲ್ಲಿ ನಡೆದ ಅನೇಕ ಗೊಂದಲ-ಸಂಘರ್ಷದ ವಿಷಯಗಳಿಗೆ ತಕ್ಕ ಉತ್ತರವಾಗಿವೆ. ಭಾಷೆ, ಕಾವ್ಯ-ಶಾಸನ, ಸಂಸ್ಕೃತಿ, ಸಮಾಜ, ಧರ್ಮ, ಸಂಸ್ಕೃತಿ ಪಲ್ಲಟೀಕರಣ, ಮತಾಂತರ, ದೀಕ್ಷೆ, ಕನ್ನಡ ಸಂಸ್ಕೃತಿಯ ಪ್ರಸಾರ, ಅನ್ಯಸಂಸ್ಕೃತಿಗಳ ಆಗಮನ. ಕನ್ನಡಿಗರ ಮರಾಠಿ-ತಮಿಳು-ತುಳು ಪ್ರೀತಿ, ರಾಜಕೀಯ ಸ್ಥಿತ್ಯಂತರ, ಧಾರ್ಮಿಕ ಬದಲಾವಣೆ, ಸ್ವಧರ್ಮ-ಅನ್ಯಧರ್ಮದ ಶೋಷಣೆಗಳು, ದೇವಾಲಯಗಳು ಮುಂತಾದ ಒಟ್ಟು ಕರ್ನಾಟಕ ಇತಿಹಾಸದ ಸಂಸ್ಕೃತಿಗೆ ಸಂಬಂಧಿಸಿದ ಮಹತ್ವದ ಲೇಖನಗಳೂ ಇಲ್ಲಿವೆ.

''ಬಹುಶಃ ನನ್ನ 'ಮಾರ್ಗ' ಸಂಪುಟಗಳಲ್ಲಿ ಇದೇ ಕೊನೆಯದೆಂದು ಕಾಣುತ್ತದೆ. ಹೀಗೆ ಹೇಳಲು ಕಾರಣ ವಯಸ್ಸು. ಇದಕ್ಕಿಂತ ಸಂಶೋಧನ ಲೇಖನಗಳ ಪ್ರಕಟಣೆಗೆ ಸೂಕ್ತ ಪತ್ರಿಕೆಗಳಿಲ್ಲದಿರುವುದು. ಲೇಖನ ಸಾಹಿತ್ಯ ಹುಟ್ಟುವುದು – ಬೆಳೆಯುವುದು ಸಾಮಾನ್ಯವಾಗಿ ಪತ್ರಿಕಾ ಮಾಧ್ಯಮದಲ್ಲಿ. ಲೇಖನ-ಪ್ರತಿಲೇಖನಗಳ ಸಂವಾದಕ್ಕೆ ನೆರವಾಗುವ ಮೂಲಕ ಪತ್ರಿಕೆಗಳು ಪರಿಸರದ ಒಟ್ಟು ಬರವಣಿಗೆಯನ್ನು ಜೀವಂತವಾಗಿರಿಸುತ್ತವೆ; ವಿಚಾರ ಪರಿಷ್ಕರಣಕ್ಕೆ ಸಹಕರಿಸುತ್ತವೆ. ಇಂದು ಇಂಥ ಅನುಕೂಲತೆ ಕ್ಷೀಣಿಸಿರುವ ಕಾರಣ, ಏಕಕಾಲಕ್ಕೆ ನೂರರಷ್ಟು ಲೇಖನ ಬರೆದು 'ಮಾರ್ಗ' ಸಂಪುಟ ಪ್ರಕಟಿಸುವುದು ಕಷ್ಟದ ಕೆಲಸ'' (ಮಾರ್ಗಕ್ಕೆ ಮೊದಲು) ಎಂದು ಡಾ|| ಎಂ. ಎಂ. ಕಲಬುರ್ಗಿ ಅವರು ಆತಂಕ ವ್ಯಕ್ತಪಡಿಸಿದ್ದರು. ಆದರೆ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ 'ಲಿಂಗಾಯತ' ಪತ್ರಿಕೆ ಪ್ರಾರಂಭದೊಡನೆ ಅವರ ಲೇಖನ ಬರೆಯುವ ಉತ್ಸಾಹ ಇಮ್ಮಡಿಯಾಗಿದೆ. ನಿಯಮಿತವಾಗಿ ಹೊಸ ಹೊಸ ಆಲೋಚನೆಗಳ ಸಂಶೋಧನ ಲೇಖನಗಳನ್ನು ಪ್ರಕಟಣೆಗೆ ಕಳಿಸುತ್ತಿರುವುದು ಪ್ರಾಯಶಃ ಇನ್ನೊಂದು ಮಾರ್ಗ ಸಂಪುಟ ಹೊರಬರಬಹುದೆಂಬ ಭರವಸೆಯನ್ನು ಮೂಡಿಸಿದೆ. ಕನ್ನಡ ಸಾಹಿತ್ಯ 'ಮಾರ್ಗ'ವು ಆದಿಕವಿ ಪಂಪನಿಂದ ಸಮೃದ್ಧವಾಗಿ ಬೆಳೆದು ಡಾ|| ಎಂ. ಎಂ. ಕಲಬುರ್ಗಿ ಅವರಂಥ ಶ್ರೇಷ್ಠ ಸಂಶೋಧಕರ ಮೂಲಕ ಹೊಸ ರೂಪ ಪಡೆದುಕೊಂಡಿದೆ. 'ಮಾರ್ಗ' ನಿರಂತರ ಕನ್ನಡ ಸಾಹಿತ್ಯ ಸಂಶೋಧನೆಗಳಿಗೆ ಬೆಳಕಿನ ದೀಪವಾಗಲಿ. ಪ್ರಾಯಶಃ ಇನ್ನಷ್ಟು ಮಾರ್ಗ ಸಂಪುಟಗಳು ಡಾ|| ಕಲಬುರ್ಗಿ ಅವರಿಂದ ಹೊರಬರಲಿ. ಆ ಮೂಲಕ ಕನ್ನಡ ಸಾಹಿತ್ಯ 'ಮಾರ್ಗ' ಚಿರಂತನವಾಗಿರಲಿ ಎಂಬ ಆಶಯದೊಂದಿಗೆ ಅವರ ೭೦ನೆಯ ಹುಟ್ಟುಹಬ್ಬಕ್ಕೆ ಶುಭಾಶಯಗಳನ್ನು ಸಲ್ಲಿಸುವೆ.

**ಪ್ರಕಾಶ ಗಿರಿಮಲ್ಲನವರ**
ಕೆ. ಪಿ. ನಿಲಯ, ಶಿವಬಸವನಗರ, ಬೆಳಗಾವಿ

# ಅಮರ ಜವಾನ

**ಹ**ಸಿ ಸೌದೆ ಇರಬೇಕು. ಮೊನ್ನೆ ಮಳೆ ಬಂದಿತ್ತಲ್ಲ. ಎಲ್ಲಾ ನೆನೆದುಹೋಗಿದೆ. ಪುಟು ಮಾಡಲೂ ಕೂಡ ಒಂದಿಷ್ಟು ಬರಲು ಪುಂಡಿ ಕಡ್ಡಿ ಏನೂ ಇಲ್ಲ. ಎಷ್ಟಂತ ಚಿಮಣಿಎಣ್ಣೆ ಹಾಕಿ ಪುಟು ಮಾಡುವುದು. ಈ ಸೌದೇ ಎಷ್ಟು ಊದಿದರೂ ಉರಿ ಹತ್ತಿಕೊಳ್ಳುತ್ತಲೇ ಇಲ್ಲ. ಉಸಿರನ್ನೆಲ್ಲ ಬಿಗಿಹಿಡಿದು ಪುರ್‌ऽऽ, ಪುರ್‌ऽऽ ಎಂದು ಊದಿದಾಗ ಮಿಣುಕು ದೀಪ ಹೊತ್ತಿಸಿದಂತೆ ಒಂದಿಷ್ಟು ಉರಿ ಅಂಟಿಕೊಂಡು ಮರುಕ್ಷಣವೇ ಆರಿಹೋಗುತ್ತಿತ್ತು. ಒಂದು ಕಡೆ ಒಲೆ ಊದುವ ಆಯಾಸದಿಂದ ತೇಗು ಬರುತ್ತಿದ್ದರೆ ಇನ್ನೊಂದು ಕಡೆ ಹೊಗೆಯ ಘಾಟಿನ ಆಕ್ರಮಣ ಉಸಿರು ಕಟ್ಟಿಸುತ್ತಿತ್ತು. ಇದೆಲ್ಲಕ್ಕೂ ಹೆಚ್ಚಾಗಿ ಮತ್ತೊಂದು ಕಡೆ ಹೃದಯದ ಅಂತರಾಳದಲ್ಲಿ ಒಳಗೊಳಗೇ ಹೊಗೆಯಾಡಿಕೊಂಡು ಹೊರಗೆ ಚಿಮ್ಮಿ ಬರುವುದಕ್ಕಾಗಿ ಬಾಧಿಸುತ್ತಿದ್ದ ಉಮ್ಮಳ ಬೇರೆ. ಹೊತ್ತಿಕೊಳ್ಳದ ಈ ಸೌದೆಯ ಹಾಗೆಯೇ ಮನಸ್ಸಿನ ಉಮ್ಮಳ ಕಾಡಿಸುತ್ತಿದೆ. ಹೊರಗೆ ಜ್ವಾಲೆ ಕಾಣಿಸುತ್ತಿಲ್ಲ, ಆದರೆ ಒಳಗೊಳಗೇ ಅದು ದಹಿಸುತ್ತಿದೆ – ಈ ನೀರೊಲೆಯಲ್ಲಿ ಇಷ್ಟಿಷ್ಟೆ ಹೊತ್ತಿಕೊಂಡು ದಹಿಸುತ್ತಿರುವ ಸೌದೆಯ ಹಾಗೆ. ಒಮ್ಮೆ ಧಗಧಗನೇ



ಪ್ರೊ॥ ಭಾಲಚಂದ್ರ ಜಯಶೆಟ್ಟಿ

ಅಂಥ ಮಂಪರಿನಲ್ಲಿಯೂ ಎಂಥದ್ದೋ ಒಂದು ಅನುಭವ. ಕನಸೋ ನನಸೋ ಗೊತ್ತಿಲ್ಲ. ಒಮ್ಮೆಲೇ ಏನೋ ಸಿಡಿಲು, ಮಿಂಚು, ಬಿರುಗಾಳಿ, ಸುಂಟರಗಾಳಿ. ಆಕಾಶದಿಂದ ಏನೋ ಹಾರಿಬರುತ್ತಿದೆ. ರೆಕ್ಕೆ ಬಿಚ್ಚಿಕೊಂಡಿದೆ. ಅಬ್ಬಾ! ಅದೆಂಥ ರೆಕ್ಕೆ! ಅದು ರಣಹದ್ದೇ ಇರಬೇಕು. ಇಲ್ಲ ಮೇಲೆ ಎರಗಿಬೀಳುತ್ತಿರುವ ರೆಕ್ಕೆ ಹೊತ್ತ ಆಕಾಶ ಕಾಯ, ಕಣ್ಣು ಮೂಗು ಬಾಯಿ ಒಂದೂ ಇಲ್ಲ. ಒಟ್ಟಾರೆ ಮುಖ ಎಂಬುದೇ ಇಲ್ಲ. ಬರೀ ದೇಹ ಮಾತ್ರ, ದೇಹದೊಳಗಿನ ದೈತ್ಯ ಶಕ್ತಿ ಮಾತ್ರ. ಬೇಟೆಯ ಪ್ರಾಣಿಯನ್ನು ತನ್ನ ಪಂಜೆಯಲ್ಲಿ ಹಿಡಿದುಕೊಂಡು ಹಾರಿಹೋಗವಂಥ ರಣಹದ್ದು.

ಉರಿದು ತನ್ನನ್ನೂ ಉರಿಸಿ ಸುಟ್ಟು ಬೂದಿಯನ್ನಾಗಿ ಮಾಡಿದರೆ ಎಷ್ಟು ಹಿತ. ಹಸಿ ಸೌದೆಯ ಘಾಟಿನ ಜೊತೆಗೆ ಕಣ್ಣೀರು ತಾನೇ ತಾನಾಗಿ ಹರಿದುಬರುತ್ತಿತ್ತು. ಅದರ ಜೊತೆಜೊತೆಗೆ ಹೃದಯದಲ್ಲಿ ಹೆಪ್ಪುಗಟ್ಟಿದ ನೋವು ಯಾವಾಗ ನಿಧಾನವಾಗಿ ಕರಗಿ ನೀರಾಗಿ ಆ ಕಣ್ಣೀರಿನಲ್ಲಿ ಸೇರಿಕೊಂಡಿತ್ತೋ ಗೊತ್ತಾಗಲಿಲ್ಲ. ಒಲೆಯ ಹೊಗೆ ಉಸಿರು ಕಟ್ಟಿಸುತ್ತಿದ್ದರೂ ಹೃದಯದಿಂದ ಉಕ್ಕಿ ಹರಿದುಬರುತ್ತಿದ್ದ ಉಮ್ಮಳವು ಹೃದಯದ ಭಾರವನ್ನು ಕಡಿಮೆ ಮಾಡುತ್ತಿತ್ತು. ಮನಸ್ಸು ಬಿಚ್ಚಿ ಮುಕ್ತವಾಗಿ ಅತ್ತು ಹೃದಯದ ಒತ್ತಡವನ್ನು ಕಡಿಮೆ ಮಾಡಿಕೊಳ್ಳಬೇಕೆಂದರೆ ಅಂಥ ಅವಕಾಶವೇ ತನಗಿಲ್ಲದಂತಾಗಿತ್ತು. ಮಗನ ಗುಣಗಾನಮಾಡಿ, ಹಾಡಿ ಹೊಗಳಿ ರಾಗ ತೆಗೆದು ಅಳುವ ಅತ್ತೆಯ ಹಾಗೆ ತಾನು ತನ್ನ ಗಂಡನಿಗಾಗಿ, ಆತನ ಜೊತೆಗೆ ಕಳೆದ ಆ ಮಧುರ ಕ್ಷಣಗಳ ಕುರಿತು ಬಾಯಿ ಬಿಚ್ಚುವುದು ಸಾಧ್ಯವೇ? ಹೊರಗೆ ಅತ್ತೆಯ ಪ್ರಲಾಪ ತಾರಕಕ್ಕೇರುತ್ತಿದೆ.

''ಪೋರಿ ಸುಳಿ ಭಲೋ ಇಲ್ಲೇ ಯವ್ವಾ !... ನಾ ಪೈಲಾನೇ ಹೇಳಿದ್ನೇ ಯವ್ವಾ !...''

ತನ್ನನ್ನು ನೋಡಲು ಬಂದಾಗ ಎಷ್ಟೊಂದು ಪರಿಪರಿಯಾಗಿ ಪರೀಕ್ಷಿಸಿದ್ದಳಲ್ಲ, ಅತ್ತೆಯೆನ್ನುವ ಈ ಮುದುಕಿ. ಎತ್ತರ ಅಳೆದಿದ್ದಳು. ಕೈಬೆರಳು ಅಳೆದು ಎತ್ತರಕ್ಕೆ ತಾಳೆ ನೋಡಿದ್ದಳು, ಪಾದ ಪರೀಕ್ಷಿಸಿದ್ದಳು, ಒಳ ಮನೆಗೆ ಬಂದು ಮುದ್ದು ಮಾಡುವಂತೆ ನಟಿಸಿ ಹತ್ತಿರ ಕೂಡಿಸಿಕೊಂಡು ಏನೇನೋ ಮುಟ್ಟಿ ನೋಡಿದ್ದಳು. ಸಂತೆಯಲ್ಲಿ ದನಗಳನ್ನು ಖರೀದಿಸುವಾಗ ಹೀಗೆ ನೋಡುತ್ತಾರೆಂದು ಕೇಳಿದ್ದೆ. ಕುದುರೆಗಳ ಸುಳಿಗಳನ್ನು ಪರೀಕ್ಷಿಸುತ್ತಾರೆಂದು ಅಪ್ಪ ಹೇಳುತ್ತಿದ್ದ. ಸುಳಿ ಚೆನ್ನಾಗಿಲ್ಲದಿದ್ದರೆ ಸವಾರಿ ಮಾಡಿದಾಗ ಆ ಸವಾರನಿಗೆ ಕುದುರೆ ಗೂಟ ಜಡಿಯುತ್ತದೆಯಂತೆ, ಅಂಥ ಕುದುರೆಯಿಂದ ಒಳ್ಳೆಯದಾಗುವುದಿಲ್ಲ ಎಂದು ಶಾಸ್ತ್ರದಲ್ಲಿದೆಯಂತೆ, ಹಾಗಂತ ಅಪ್ಪ ಹೇಳಿದ್ದು ನೆನಪು. ಹೆಣ್ಣಿನಲ್ಲಿ ಅಂಥ ಯಾವ ಸುಳಿ ಇರುತ್ತಿರಬಹುದು ? ಹೆಣ್ಣಿನ ಮೇಲೆ ಸವಾರಿ ಮಾಡುವ ಗಂಡಿಗೆ ಅಂಥ ಯಾವ ಸುಳಿ ಗುದ್ದಿ ಗುದ್ದಿ ಕೊಲ್ಲುತ್ತಿರಬೇಕು ? ಈ ಅತ್ತೆಯೆನ್ನುವವಳು ನನ್ನಲ್ಲಿ ಅಂಥ ಸುಳಿಯನ್ನು ಎಲ್ಲಿ ಕಂಡಳು ? ಅಷ್ಟೆಲ್ಲ ನೋಡಿ, ಮನಸ್ಸಿಗೆ ಖಾತ್ರಿಯಾದ ಮೇಲೆಯೇ ಈಕೆ ನನ್ನನ್ನು ಸೊಸೆಯಾಗಿ ತಂದುಕೊಳ್ಳಲು ಒಪ್ಪಿದ್ದಲ್ಲವೆ ? ಈಗ ಸುಳಿ ಭಲೋ ಇಲ್ಲ ಅಂದ್ರೆ ಏನರ್ಥ ? ಹೆಣ್ಣು ನೋಡುವಾಗ ಕಾಣಿಸದಿದ್ದ ಸುಳಿ ಈಗ ಕಾಣಿಸಿಕೊಂಡಿತೆ ?

ಮಾವ ನಡುವೆ ಬಾಯಿ ಹಾಕಿ ಸಮಾಧಾನ ಮಾಡಲು ಪ್ರಯತ್ನಿಸುತ್ತಿದ್ದ– ''ಆಯ್ತು ಹೋಯ್ತು, ಈಗ ಆಡಿಕೊಂಡರೆ ಬರಾದಿಲ್ಲ, ಬಾರ್ಸಾದಿಲ್ಲ'' ಹೆಂಡತಿ ಸೋನುಬಾಯಿಯ ಮಾತಿಗೆ ಸಮರ್ಥನೆಯನ್ನೂ ಸೂಚಿಸದಂಥ ಮತ್ತು ಅದನ್ನು ಸ್ಪಷ್ಟವಾಗಿ ಖಂಡಿಸದಂಥ ಧಾಟಿಯಲ್ಲಿ ಗ್ಯಾನಬಾ ನುಡಿದ.

ಸೋನುಬಾಯಿಯ ಆಲಾಪನೆ ನಿಲ್ಲಲೇ ಇಲ್ಲ.

''ಎಂಥ ಜಾಮರ್ದ ಮಗಾ ಇದ್ನೆವ್ವೋ! ಅಂಥ ಮಗಾ ಇನ್ನೆಲ್ಲಿ ಸಿಕ್ಕಾನೋ ? ಇನ್ನೂ ವರ್ಷ ಸೈತ ತುಂಬಲಿಲ್ಲೋ ಮಗನೇ! ನುಂಗಿ ನೀರ ಕುಡದ್ಯಲ್ಲೋ

ಮಗನೇ! ನಾ ಏನ ಮಾಡ್ಲ್ಯೋ ಮಗನೇ!...''

ಗ್ಯಾನಬಾ ಜಬರಿಸಿ ಆಕೆಯ ಬಾಯಿಮುಚ್ಚಿಸಲು ಪ್ರಯತ್ನಿಸಿದ. ''ಲೇ ಹ್ವಾದ ಮಗಾ ತಿರುಗಿ ಬರಾಣೆಲ್ಲ. ಅಂವಾ ಏನೂ ಹಲ್ಕಾ ಕೆಲ್ಸಾ ಮಾಡಿ ಓಡಿಹೋಗಿಲ್ಲ. ಏನೋ, ಬಡತನಾ ತಾಳಲಾರ್ದೆ ಹ್ವಾದ, ಹ್ವಾದಾಂವ ಲೌಕಿಕನೇ ಮಾಡ್ದ. ಈಗ ಆ ಆಸ್ರಾಪ್ ಪೋರಿಗೆ ದೋಷ ಕೊಡಾದಂದ್ರ ಅಂದಾತಾಯಿ ಒಳ್ಳೇ ಮಾತಲ್ಲ. ಸುಮ್ನನಾಗು.''

''ಹ್ಯಾಂಗ ಸುಮ್ನನಾಗ್ಲ್ಯೋ ಓರಿಯಾ? ಇದೇ ಕೈಲಿ ಹಾಲು ಕುಡುಸಿದ್ನೆಲ್ಲೋ ಮಗನೇ! ಮುದ್ದು ಮಾಡಿ ಬೆಳೆಸಿದ್ನೆಲ್ಲೋ ಮಗನೇ! ಈಗ ನನ್ನ ಬಾಳಾನ ಸುಡಗಾಡ ಸೇರಿಸಿದ್ನೆಲ್ಲೇ ಯವ್ವಾ!''

ಗ್ಯಾನಬಾ ಸಮಾಧಾನ ಹೇಳಲು ಪ್ರಯತ್ನಿಸಿದ, ''ಮಗಾ ಏನು ದಂಗಾಮಸ್ತಿ ಮಾಡಿ ಸತ್ತಿಲ್ಲ. ಬ್ಯಾನಿ ಬ್ಯಾಸರಕಿ ಬಂದು ನರಳಾಡಿ ಪ್ರಾಣ ಬಿಟ್ಟಿಲ್ಲ. ವೀರ ಮರಾಠಾ ಶಿವರಾಯನ ರಕ್ತದ ಹೆಸರು ಮೆರೆಸಿ, ದೇಶಕ್ಕಾಗಿ ಹೋರಾಡಿ ಸತ್ತಾನ... ಇದು ಹೆಮ್ಮೆ ಪಡಬೇಕಾದಂಥ ಸಂಗತಿ. ರಾಮಚಂದ್ರ ಹೋದರೇನಾತು! ತುಳಸೀರಾಮ ಹಾನ, ನಮ್ಮ ದೀಪದ ಕುಡಿ ಕಮರಿಲ್ಲ. ರಾಮಚಂದ್ರ ಲೌಕಿಕ ಮಾಡಿ ಹ್ವಾದ. ನಮ್ಮ ಹೆಸರು ಮೆರಸಿ ಹ್ವಾದ. ಅಂವಾ ಈ ಮರ್ತ್ಯಾಕ ಬಂದಿದ್ದೇ ಅಷ್ಟರ ಸಲ್ಯಾಕ. ಕೆಲಸಾ ಮುಗೀತು ಹೊಂಟಹ್ವಾದ. ತುಳಸೀರಾಮಗ ನೋಡಿ ನಾವು ಏನೂ ಕಳಕೊಂಡಿಲ್ಲಂತ ಸಮಾಧಾನ ತಂದುಕೊಬೇಕು! ಖರೇ ಕಳಕೊಂಡಾಕಿ ಅಂದ್ರ ಜಾನಕಿ. ನಮ್ಮ ವಂಸದ ಕುಡಿ ಕಮರಿಲ್ಲ, ತುಳಸೀರಾಮ ಹಾನ. ಆದ್ರ ಆಕೀ ಬಾಳ್ಯಾ ಹಾಳಾಯ್ತಲ್ಲ. ಇಂಥಾ ವ್ಯಾಳ್ಯಾದಾಗ ನಾವ ಬಿಟ್ಟರ ಆಕೀಗಿ ಯಾರು ದಿಕ್ಕದಾರ? ಆಕೀದೇನ ತಪ್ಪದ ಇದರಾಗ? ಪಾಪದ ಪೋರಿ. ಅಂಥ ಅಸ್ರಾಪ್ ಪೋರಿ ಜಾನಕಿಗೆ ಏನೂ ಅನಬ್ಯಾಡ.''

ಜಾನಕಿಗೆ ಒಂದಿಷ್ಟು ಉಸಿರು ಬಂದಂತಾಯಿತು. ಅದು ಮಾವನ ಹೃದಯದ ಅಂತರಾಳದಿಂದ ಬಂದ ಮಾತೋ ಅಥವಾ ಒಣ ಮಾತಿನ ಸಹಾನುಭೂತಿಯೋ ಗೊತ್ತಾಗಲಿಲ್ಲ. ಆದರೆ ಆ ಮಾತು ಕೇಳುತ್ತಿದ್ದರೆ ಒಂದಿಷ್ಟು ಮನಸ್ಸಿಗೆ ನೆಮ್ಮದಿ ಅನಿಸುತ್ತಿತ್ತು. ಉಸಿರು ಹಿಡಿದು ಕೂಂಡಿರಲು ಸಧ್ಯಕ್ಕೆ ಸಾಕೆನಿಸಿತು.

ಸಾವಿನ ಸುದ್ದಿ ಬರುವುದಕ್ಕೆ ನಾಲ್ಕು ದಿನದ ಹಿಂದೇನೇ ರಾಮಚಂದ್ರನ ಪತ್ರ ಬಂದಿತ್ತು. ಹೆಲ್ಮೆಟ್ ಹಾಕೊಂಡು, ಕೈಯಲ್ಲಿ ರೈಫಲ ಹಿಡಿದು ತೆಗೆಸಿಕೊಂಡಿದ್ದ ಫೋಟೊನೂ ಆ ಪತ್ರದ ಜೊತೆಗಿತ್ತು. ಅದೇನು ಆ ಕುಡಿಮೀಸಿ, ಕಣ್ಣಲ್ಲಿ ಆಶೆ ತುಂಬಿದ ಕಾಂತಿ. ಪತ್ರದಲ್ಲಿ ಏನೇನೋ ಬರೆದಿದ್ದ. ಅದನ್ನೆಲ್ಲ ನೆನೆಸಿಕೊಳ್ಳಲೂ ನಾಚಿಕೆಯಾಗುತ್ತಿತ್ತು. ಛೀಃ ಈ ಗಂಡಸರಿಗೆ ನಾಚಿಕೆಯನ್ನುವುದೇ ಇರೋದಿಲ್ಲ ಅಂದುಕೊಂಡು ಏಕಾಂತದಲ್ಲಿ ಖುಷಿಪಟ್ಟಿದ್ದೆ ಆತನ ಜೊತೆಗೆ ಕಳೆದ ಒಂದೊಂದೇ ರಾತ್ರಿಗಳು, ರಾತ್ರಿಯ ಒಂದೊಂದೇ ಕ್ಷಣಗಳು ನೆನಪಾಗಹತ್ತಿದ್ದವು. ಆ ಪತ್ರ ನೀರಿನಲ್ಲಿ ನೆನೆದು ಹಾಳಾಗಬಾರದೆಂದು ಸಣ್ಣ ಪ್ಲಾಸ್ಟಿಕ್ ಚೀಲದಲ್ಲಿ ಹಾಕಿ ಭದ್ರವಾಗಿ ಮುಚ್ಚಿಟ್ಟಿದ್ದೆ. ಎಲ್ಲಿ? ಛೀಃ, ಹೇಳಲು ನಾಚಿಕೆಯಾಗುತ್ತದೆ. ಮನೆಯಲ್ಲಿ ಎಲ್ಲಿಟ್ಟರೂ ಅದು ಸುರಕ್ಷಿತವಲ್ಲ ಎಂದು ಗೊತ್ತು. ಗಂಡ ಯುದ್ಧಕ್ಕೆ ಹೋದ ಮೇಲೆ ನನ್ನದು ಅನ್ನುವಂಥ ಪ್ರತ್ಯೇಕವಾದ ಏಕಾಂತ ಇರಲೇ ಇಲ್ಲ. ಇನ್ನು ಆ ಪತ್ರಾನ ಎಲ್ಲಿ ಮುಚ್ಚಿಡಲಿ. ಹಗಲೂ ರಾತ್ರಿ ಬ್ಲೌಜಿನೊಳಗೆ, ಮೊಲೆಕಟ್ಟಿನ ಒಳಗೆ ಇಟ್ಟುಕೊಳ್ಳುತ್ತಿದ್ದೆ. ಸ್ನಾನ ಮಾಡುವಾಗ ಮಾತ್ರ ತೆಗೆದಿಟ್ಟು ಮತ್ತೆ ಸ್ನಾನ ಆದ ಮೇಲೆ ಮಡಿಮಾಡಿದ ಮೊಲೆಕಟ್ಟಿನೊಳಗೆ ಇಟ್ಟುಕೊಳ್ಳುತ್ತಿದ್ದೆ. ಈಗಲೂ ಅಲ್ಲೇ ಇದೆ. ಇನ್ನೂ ಅದೆಷ್ಟು ದಿನ ಹೀಗೆ?

ಅವೊತ್ತು ರಾತ್ರಿ ಕಣ್ಣಿಗೆ ಕಣ್ಣೇ ಹತ್ತಲಿಲ್ಲ. ರಾತ್ರಿಯೆಲ್ಲ ಅವನದೇ ಧ್ಯಾನ. ಈಗ ಬಂದಾನು, ಆಗ ಬಂದಾನು ಎಂದು ಕಾಯುವುದೇ ಆಯಿತು. ಒಂದಿಷ್ಟು ಜಂಪು ಹತ್ತಿದರೆ ಸಾಕು, ಕನಸಿನ ಲೋಕಕ್ಕೆ ಜಾರಿಬಿಡುತ್ತಿದ್ದೆ. ಇಲ್ಲ, ಅವನೇ ಕನಸಿಗೆ ಜಾರಿಸಿಕೊಳ್ಳುತ್ತಿದ್ದ. ಹಾಗೆ ಜಾರಿಸಿಕೊಂಡವನು ಎಂತೆಂಥ ಕೀಟಲೆ ಕೊಡುತ್ತಿದ್ದ. ಮದುವೆಯ ಹೊಸತಿನ ಆ ಎಲ್ಲ ಪ್ರಯೋಗಗಳನ್ನು ಕನಸಿನಲ್ಲಿ ನನ್ನ ಮೇಲೆ ಮಾಡುತ್ತಿದ್ದ. ಮೈ ಜುಮ್ಮೆನ್ನುತ್ತಿತ್ತು. ಆಕಾಶಕ್ಕೆ ತೇಲಿಕೊಂಡು ಹಾರಾಡಿದಂತೆ ಆಗುತ್ತಿತ್ತು. ನರನಾಡಿಗಳಲ್ಲಿ ಕಟ್ಟಿರುವೆಗಳು ಓಡಾಡಿದಂತಾಗುತ್ತಿತ್ತು. ಮೈ ಹಗುರಾಗಿ, ಒಂದು ದೀರ್ಘ ಕಂಪನದಿಂದ ಹಿಂಡಿದಂತಾಗಿ, ನೆಲಕ್ಕೆ ಜಾರಿದಂತಾಗಿ, ನೆಲ ಮುಟ್ಟುವಷ್ಟರಲ್ಲಿ ಕನಸೆಲ್ಲ ಮಾಯ. ಕೊನೆಗೂ

ಕನಸಾಗಿಯೇ ಉಳಿದುಬಿಟ್ಟ. ಎಚ್ಚರಾಗಿ ಹಾಸಿಗೆಯಲ್ಲಿ ಹೊರಳ್ಯಾಡುವಷ್ಟರಲ್ಲಿ ಕೋಳಿ ಕೂಗುತ್ತಿತ್ತು. ಹೊತ್ತು ಮೂಡಿ ಮುಂಜಾನೆಯಾದರೆ ಮತ್ತೆ ಬಾಡಿಗೆ ಎತ್ತಿನಂತೆ ದುಡಿಯುವುದು ಇದೆಯಲ್ಲ! ಆದರೆ ಕನಸಿನಲ್ಲಿ ಬಂದವನು ನಿದ್ದೆಯನ್ನು ಕದ್ದುಕೊಂಡು ಹೋಗುತ್ತಿದ್ದ. ಎಷ್ಟೇ ಪ್ರಯತ್ನಪಟ್ಟರೂ ನಿರಾಳವಾದ ನಿದ್ದೆಯ ಸುಳಿವೇ ಇಲ್ಲದಂತಾಗಿತ್ತು.

ಹೊರಗೆ ಹಕ್ಕಿಗಳ ಚಿಲಿಪಿಲಿ ಕೇಳಿಸಹತ್ತಿತು. ಇನ್ನೇನು ಬೆಳಕಾಯಿತಲ್ಲ ಎಂದು ಹಾಸಿಗೆ ಬಿಟ್ಟು ಎದ್ದಿದ್ದೆ. ಒಂದಿಷ್ಟು ಬಾಯಿ ಮುಕ್ಕಳಿಸಿ ತಂಬಿಗಿ ತುಂಬಿಕೊಂಡು ಹಿತ್ತಲಕಡೆಗೆ ಹೋದೆ. ಗಂಡ ಹೋದಾಗಿನಿಂದ ಏಕಾಂತವಾಗಿ ಸಿಗುವ ಜಾಗವೆಂದರೆ ಅದೊಂದೆ. ರಾತ್ರಿಯೆಲ್ಲ ಕಾಡಿದ ಕನಸು, ಅವನ ನೆನಪು ಅಲ್ಲಿಯೂ ಬಿಡಲಿಲ್ಲ. ಅದೇ ಗುಂಗಿನಲ್ಲಿ ಹೋಳುಗುಂಡಿಯಲ್ಲಿ ಕುಳಿತಿರುವಾಗ ಮನೆಯಿಂದ ಚೀರಾಟ, ಹಾರಾಟ ಕೇಳಿಬರಹತ್ತಿತು. ಏನಾಯಿತೋ ಎಂದು ಗಾಬರಿಯಾಗಿ ತಕ್ಷಣ ನೀರು ಮುಟ್ಟಿ ಎದ್ದು ಹಿತ್ತಲದಿಂದ ಮನೆಯ ಅಂಗಳಕ್ಕೆ ಬರುವಷ್ಟರಲ್ಲಿ ಅತ್ತೆ, ಮಾವ, ಮೈದುನ, ನೆರೆಹೊರೆಯವರು ಎಲ್ಲಾ ಸೇರಿ ಒಂದೇ ಸವನೆ ರಾಗ ತೆಗೆದು ಅಳುತ್ತಿದ್ದಾರೆ. ಏನಾಯಿತೆಂದು ಕೂಡಲೆ ನನಗೆ ತಿಳಿಯಲಿಲ್ಲ. ಅಂಗಳದಲ್ಲಿ ಒಬ್ಬ ಪೊಲೀಸನವನು ನಿಂತಿದ್ದ. ಅವನೂ ಗಾಬರಿಯಾಗಿದ್ದ. ಏನಾಯಿತು ಶಿವನೇ! ಎಂದು ನನ್ನ ಮನಸ್ಸು ಕೊರಗಹತ್ತಿತು.

ಜಾನಕಿಯನ್ನು ನೋಡುತ್ತಿದ್ದಂತೆ ಸೋನುಬಾಯಿಯ ದನಿ ಇನ್ನೂ ಎತ್ತರಕ್ಕೆ ಹೋಯಿತು. ಇನ್ನೊಂದಿಷ್ಟು ರಾಗ ತೆಗೆದು ಪ್ರಲಾಪಿಸಹತ್ತಿದಳು, ''ಹೊಂಟಹ್ವಾದನಲ್ಲೇ ನನ ರಾಜಾ, ರಾಮಚಂದ್ರ ಇನ್ನಿಲ್ಲೆವ್ವೋ, ಮಗಳೇ!'' ಜಾನಕಿಗೆ ದಿಗ್ಭ್ರಾಂತಿಯಾಯಿತು. ಒಂದರೆ ಕ್ಷಣ ಏನೂ ಅರ್ಥವಾಗದಿದ್ದರೂ ನಿಜ ಸಂಗತಿ ತಿಳಿಯಲು ತಡವಾಗಲಿಲ್ಲ. ಪೊಲೀಸಿನವನು ತಮ್ಮ ಸ್ಟೇಶನ್ನಿಗೆ ಬಂದ ವೈರ್‌ಲೆಸ್ ಸುದ್ದಿಯನ್ನು ಮನೆಗೆ ತಿಳಿಸಲು ಬಂದಿದ್ದ.

ಆ ದಿನ ರಣರಂಗದಲ್ಲಿ ತನ್ನ ಗಂಡ ಗುಂಡಿನ ದಾಳಿಗೆ ಬಲಿಯಾದ ಸುದ್ದಿ ಬಂದಾಗಿನಿಂದಲೇ ಅತ್ತೆಯ ಪ್ರಲಾಪ ಶುರುವಾಗಿತ್ತು. ಗಂಗಿ ಎತ್ತಿನಂತೆ ಮೂಕಪ್ರಾಣಿಯಾಗಿ ಮನೆತುಂಬಿಕೊಳ್ಳುವ ಸೊಸೆಯಂದಿರ ಮೇಲೆಯೇ ಅತ್ತೆ ಎನಿಸಿಕೊಂಡವರು ತಮ್ಮ ಕಲುಷವನ್ನೆಲ್ಲ ಕಾರಿಕೊಳ್ಳುವುದು. ಬಾಳಿನ ಕೊನೆಯ ದಡವನ್ನು ಮುಟ್ಟಿಸುತ್ತೇನೆಂದು ಕೈ ಹಿಡಿದ ಗಂಡನು ಬಾಳನೌಕೆಯನ್ನು ಹತ್ತುವಷ್ಟರಲ್ಲಿ ತಾನೇ ನೀರುಪಾಲಾಗಿ ಹೋದರೆ ಪಾಪ ಆ ಹೆಣ್ಣಿನ ಗತಿ ಏನು? ಈ ಕುರಿತು ಹೆಣ್ಣು ಎನಿಸಿಕೊಂಡ ಯಾವ ಅತ್ತೆಯೂ ಯೋಚಿಸುವುದೇ ಇಲ್ಲ. ಆ ಕ್ಷಣದಲ್ಲಿ ತಾನೂ ಒಂದು ಹೆಣ್ಣು ಎನ್ನುವುದನ್ನು ಮರೆತಿರುತ್ತಾಳೆ.

ಮಿಲ್ಟ್ರಿ ವ್ಯಾನಿನಲ್ಲಿ ರಾಮಚಂದ್ರನ ಕಳೆಬರ ಬಂದು ಇಳಿದಾಗ ಜಾನಕಿಯು ನಿಂತ ಜಾಗದಲ್ಲಿಯೇ ಕುಸಿದು ಬಿದ್ದು ಮೂರ್ಛೆ ಹೋಗಿದ್ದಳು! ಯಾರು ಯಾರೋ ಏನೇನು ಮಾಡಿದರೋ.... ಆಕೆಗೆ ಒಂದೂ ಗೊತ್ತಿಲ್ಲ. ಪ್ರಜ್ಞೆ ಬಂದಾಗ ಆಕೆ ಆಸ್ಪತ್ರೆಯ ಹಾಸಿಗೆಯಲ್ಲಿದ್ದಳು. ನಾಲ್ಕಾರು ಜನ ಹಿರಿ ಕಿರಿಯ ಡಾಕ್ಟರರು ಆಕೆಯನ್ನು ಸುತ್ತುವರೆದಿದ್ದರು. ಅಲ್ಲೇ ಎಲ್ಲೋ ಜಿಲ್ಲಾಧಿಕಾರಿಗಳು ಇದ್ದರಂತೆ. ಜಿಲ್ಲಾಧಿಕಾರಿಗಳ ಕಚೇರಿಯ ಹಿರಿಯ ಸಹಾಯಕನೊಬ್ಬ ಏನೇನೋ ಕಾಗದ ಪತ್ರಗಳ ಮೇಲೆ ಜಾನಕಿಯ ರುಜು ಪಡೆಯುವುದಕ್ಕಾಗಿ ಕಾದು ಕುಳಿತಿದ್ದ. ಆಕೆಗೆ ಪ್ರಜ್ಞೆ ಬರುತ್ತಿದ್ದಂತೆ ಆತ ಮುಂದೆ ಬಂದು ಮೊದಲು ತನ್ನ ಕರ್ತವ್ಯವನ್ನು ಪೂರ್ಣಗೊಳಿಸಿದ. ಅರೆಮರೆ ಪ್ರಜ್ಞೆಯಲ್ಲಿದ್ದ ಜಾನಕಿಯ ಮುಖದ ಮೇಲೆ ಒಂದು ಬಗೆಯ ವಿಡಂಬನೆಯ ಹೊಳಹು ಮಿಂಚಿ ಹೋಯಿತು. ವಾರ್ಡಿನ ಹೊರಗೆ ಬಾಗಿಲು ಕಾಯುತ್ತ ಕುಳಿತ ಹೆಂಗಸರು ಮಾತಾಡಿಕೊಳ್ಳುತ್ತಿದ್ದರು.

''ಹೂವಿನಂಥ ಪೋರಿಗೆ ಹೀಂಗಾಗಬಾರದಿತ್ತು.''

''ಎಲ್ಲಾ ಹಣೆಬರದ ಆಟ ಅದ. ಏನ ಮಾಡ್ಲಾಕ ಆಗ್ತsದ.''

''ಪೋರಿ ಸದ್ಯ ಹೆಣಾ ನೋಡಲಿಲ್ಲ. ಭಲೋ ಆತು ನೋಡು. ಇಲ್ಲಾಂದ್ರ...''

''ಛೀಃ ನಿನ, ಅದೇನ ಹೆಣಾ ಅಂತೀ ಏನು? ಮಾಂಸದ ಮುದ್ದಿ...''

''ಯವ್ವಾ! ವಾಂಯಿಕ್ ವಾಂಯಿಕ್ ಅಂತಿತ್ತು.''

**ಎಚ್ಚರ!**

ಏನೆಲ್ಲವನ್ನೂ
'ಗುಳುಂ' ಮಾಡಬಲ್ಲ
ಮೊಸಳೆಗಳೆ, ಎಚ್ಚರ!
ನಿಮ್ಮನ್ನೂ ನುಂಗಿಹಾಕಬಲ್ಲವು
'ಅನಕೊಂಡ' ಹೆಬ್ಬಾವು!
(ಸದ್ಯ, ನಮ್ಮಲ್ಲಿಲ್ಲ.)

ಪಿ.ಪಿ.ಕೆ.
ಮೈಸೂರು

''ಯಾರೂ ಮಾರಿ ಸೈತ ನೋಡಲಿಲ್ಲ. ಹಾಂಗೇ ಸುಟ್ಟು ಬಿಟ್ರು.''

ಹೆಂಗಸರ ಮಾತುಗಳು ಇದೇ ಜಾಡಿನಲ್ಲಿ ಮುಂದುವರಿದಿದ್ದವು. ಯಾರೋ ಗದರಿಸಿದರು, ''ಏ! ಏಳ್ರೀ ಇಲ್ಲಿಂದ ಗಾವಳಿ ಮಾಡಬ್ಯಾಡ್ರಿ.''

ಹಾಗಾದರೆ ತನ್ನ ಗಂಡನ ಹೆಣದ ಮುಖ ಯಾರೂ ನೋಡಲೇ ಇಲ್ಲವೆ? ಸುಟ್ಟು ಬೂದಿಯಾಗುವುದಕ್ಕೆ ಮುಂಚೆ ಕೊನೆಯ ಸಲ ಗಂಡನ ಮುಖ ದರ್ಶನವಾಗಲಿಲ್ಲವಲ್ಲ ಎಂದು ಆಕೆ ಬಹಳ ನೊಂದುಕೊಂಡಿದ್ದಳು. ಯಾರೂ ನೋಡಲಿಲ್ಲವಂತೆ.

''ವೀರ ಜವಾನ ರಾಮಚಂದ್ರ ಜಾಧವ, ಅಮರ ರಹೇ,'' ಎಂಬ ಘೋಷಣೆಗಳು ಕೇಳಿಬರುತ್ತಿದ್ದವು. ಜನರ ಕೋಲಾಹಲವೂ ಕೇಳಿಸುತ್ತಿತ್ತು. ಹಿನ್ನೆಲೆಯಲ್ಲಿ, ''ಐ ಮೇರೇ ವತನ ಕೇ ಲೋಗೋ, ಜರಾ ಯಾದ ಕರೋ ಕುರಬಾನೀ...'' ಎಂಬ ಕವಿ ಪ್ರದೀಪರ ಹಿಂದೀ ಹಾಡು ಲತಾ ಮಂಗೇಶ್ಕರರ ದನಿಯಲ್ಲಿ ಮೂಡಿಬರುತ್ತಿತ್ತು. ಬೆಳಗಾಗುವುದರಲ್ಲಿ ತನ್ನ ಗಂಡ ಇಷ್ಟು ದೊಡ್ಡ ಮನುಷ್ಯನಾದನೆ, ಎಂದು ಜಾನಕಿಯ ಮನಸ್ಸು ವೇದನೆಯಿಂದ ನುಡಿಯಿತು. ಗಂಡನು ಕುರಬಾನೀ ಕೊಟ್ಟು ದೊಡ್ಡ ಮನುಷ್ಯನಾದ, ಹುತಾತ್ಮನಾದ. ತಾನು? ಬದುಕಿದ್ದೂ ಕುರಬಾನಿಯಾಗಬೇಕು. ಹೀಗೆ ಬದುಕಿಟ್ಟು ಕ್ಷಣಕ್ಷಣಕ್ಕೂ ಕೊಲ್ಲುವುದಕ್ಕಿಂತ ಅವನ ಹಾಗೆ ತಾನೂ ಏಕೆ ಸಾಯಲಿಲ್ಲ. ಅವನ ಸಾವಿನ ಸುದ್ದಿ ಕೇಳಿಯೂ ತಾನು ಹೇಗೆ ಇನ್ನೂವರೆಗೆ ಬದುಕಿದ್ದೇನೆ? ಅವಳಿಗೇನೇ ಆಶ್ಚರ್ಯವಾಯಿತು.

''ವೀರ ಜವಾನ ರಾಮಚಂದ್ರ ಜಾಧವ, ಅಮರ ರಹೇ,'' ಎಂಬ ಘೋಷಣಾ ಪತ್ರಗಳು ರಾಸೂರಿನ ಬೀದಿ ಬೀದಿಗಳಲ್ಲಿ ಕಂಗೊಳಿಸಹತ್ತಿದವು. ರಾಸೂರು ರಾಷ್ಟ್ರೀಯ ಹೆದ್ದಾರಿಯ ಮೇಲೆ ಇದ್ದುದರಿಂದ ಈಗ ಅದಕ್ಕೊಂದು ವಿಶೇಷ ಮಹತ್ತ್ವ ಒದಗಿಬಂದಿತ್ತು. ಆ ಕಡೆ ಮುಂಬಯಿಗೆ ಈ ಕಡೆ ಹೈದರಾಬಾದಿಗೆ ಹೋಗುವ ಪ್ರವಾಸಿಗರಿಗೆ ರಾಸೂರು ಒಂದು ಆಕರ್ಷಣೆಯ ಕೇಂದ್ರವಾಯಿತು. ರಾಮಚಂದ್ರನ ಒಂದು ದೊಡ್ಡ ಭಾವಚಿತ್ರವನ್ನು ತರಾತುರಿಯಲ್ಲಿ ಶಿವಾನಂದ ಡ್ರಾಯಿಂಗ ಮಾಸ್ತರರು ತಯಾರಿಸಿಕೊಟ್ಟಿದ್ದರು, ಅದನ್ನು ರಾಷ್ಟ್ರೀಯ ಹೆದ್ದಾರಿಯ ಮೇಲಿರುವ ಬಸ್ ನಿಲ್ದಾಣದ ಚೌಕಿನಲ್ಲಿ ಒಂದು ವೇದಿಕೆ ರಚಿಸಿ ಅದರ ಮೇಲೆ ಅಲಂಕರಿಸಿ ಇಟ್ಟಿದ್ದರು. ಹೋಗಿಬರುವ ಪ್ರವಾಸಿಗರು ಕ್ಷಣ ಹೊತ್ತು ಅಲ್ಲಿ ನಿಂತು, ವೇದಿಕೆಯ ಎದುರಿಗೆ ಗುಡ್ಡೆಯಾಗಿ ಇಟ್ಟಿದ್ದ ಹೂಗಳನ್ನು ತಮ್ಮ ಬೊಗಸೆಯಲ್ಲಿ ತುಂಬಿಕೊಂಡು ಭಾವಚಿತ್ರಕ್ಕೆ ಅರ್ಪಿಸಿ ಕ್ಷಣ ಹೊತ್ತು ಮೌನ ಗೌರವ ಸಲ್ಲಿಸಿ ಮುಂದೆ ಸಾಗುತ್ತಿದ್ದರು.

ಗುಂಡಿಗೆಯಲ್ಲಿ ಜೀವ ಹಿಡಿದು ಅನ್ನ ನೀರಿಗಾಗಿ ವಿಲವಿಲನೇ ಒದ್ದಾಡುತ್ತ ಬಿದ್ದಿದ್ದರೂ ಆ ಕಡೆಗೆ ಯಾರೂ ಹೊರಳಿ ಕೂಡ ನೋಡಲಾರರು. ಇದೇ ರಾಮಚಂದ್ರ ಮಿಲ್ಟ್ರಿಗೆ ಸೇರುವುದಕ್ಕೆ ಮುಂಚೆ ಊರಲ್ಲಿ ಚಿಲ್ಲರೆ ಕೆಲಸಗಳನ್ನು ಮಾಡಿಕೊಂಡು ಓಡಾಡುತ್ತಿದ್ದಾಗ ಅವನಿಗೆ ಕೇಳುವವರು ಯಾರೂ ಇರಲಿಲ್ಲ. ಬಿಸಿರಕ್ತದ ಹರೆಯದ ಪ್ವಾರ ಊರಲ್ಲಿ ಓಡಾಡುತ್ತಿದ್ದರೆ 'ಆವಾರಾ' ಹುಡುಗ ಎಂದು ಇದೇ ಊರಿನ ಜನರು ಆತನಿಗೆ ಪಟ್ಟ ಕಟ್ಟಿದ್ದರು. ಆದರೆ ಅದೇ ಪ್ರಾಣಿ ಈಗ ಮಿಲ್ಟ್ರಿಗೆ ಸೇರಿ ಘನಂದಾರಿ ಕೆಲಸ ಮಾಡಿ ಅಪರೂಪದಿಂದ ಅಕಾಲಿಕವಾಗಿ ಅಸ್ವಾಭಾವಿಕವಾಗಿ ಸತ್ತರೆ ಅದೊಂದು ಸುದ್ದಿಯಾಗುತ್ತದೆ. ಹೊಟ್ಟೆಬಟ್ಟೆಗೂ ಗತಿ ಇಲ್ಲದೆ ಗ್ಯಾನಬಾ ಅಲ್ಲಿ-ಇಲ್ಲಿ ಕೂಲಿನಾಲಿ ಮಾಡಿಕೊಂಡು ಹೇಗೋ ಬದುಕು ಸಾಗಿಸುತ್ತಿದ್ದಾಗ ಯಾರೊಬ್ಬರೂ 'ಕ್ಯಾರೇ' ಎಂದವರಿಲ್ಲ. ಹಿರಿಯ ಮಗ ರಾಮಚಂದ್ರ ಹರೆಯದ ಹುಮ್ಮಸ್ಸಿನಲ್ಲಿ ಈ ಬಡತನಕ್ಕೆ ರೋಸಿಹೋಗಿ ಒಂದು ದಿನ ಮನೆಬಿಟ್ಟು ಎಲ್ಲಿಗೋ ಹೊರಟುಹೋದ. ತಂದೆ-ತಾಯಿಯರು ನಾಲ್ಕಾರು ದಿನ ಮಗ ಎಲ್ಲಿಗೆ ಹೋಗಿರಬಹುದೆಂದು ಹುಡುಕಾಡಿದರು. ಆಮೇಲೆ ''ಹೋದರೆ ಹೋಗಲಿ. ಗಂಡಸು ಮಗ, ಎಲ್ಲಾದರೂ ಬದುಕಿಕೊಳ್ಳುತ್ತಾನೆ. ಇಲ್ಲಿ ಇದ್ದಾದರೂ ಏನು ಮಾಡುತ್ತಿದ್ದ!'' ಎಂದು ಸಮಾಧಾನ ಮಾಡಿಕೊಳ್ಳಲು ಪ್ರಯತ್ನಿಸಿದರು. ಆದರೂ ಹಿರಿಯ ಮಗ ಮುಪ್ಪಿನಲ್ಲಿ ಒಂದಿಷ್ಟು ಆಸರೆಯಾಗಬಹುದಿತ್ತು ಎಂಬ ಕೊರಗು ಮನಸ್ಸಿನಲ್ಲಿ ಇದ್ದೇ ಇತ್ತು. ಮನಸ್ಸಿಗೆ ಏನೋ ಒಂದು ಸಮಾಧಾನ ಹೇಳಿಕೊಂಡು ಅವನಿಗಾಗಿ ಹುಡುಕುವದನ್ನು ಬಿಟ್ಟುಬಿಟ್ಟಿದ್ದರು.

ಮುಂದೆ ಒಂದು ದಿನ ಮಿಲ್ಟ್ರಿ ಕ್ಯಾಂಪಿನಿಂದ ಒಂದು ಪತ್ರ ಬಂತು. ಗ್ಯಾನಬಾನ ಮನೆಗೆ ಪತ್ರ ಬರುವುದೇ ಅಪರೂಪ. ಅದು ಮಿಲ್ಟ್ರಿ ಕ್ಯಾಂಪಿನಿಂದ ಬಂದಿದೆ ಎಂದ ಮೇಲೆ ತುಸು ಗಾಬರಿಯೇ ಆಯಿತು. ಕವರ್ ಬಿಚ್ಚಿ ನೋಡಲೇ ಇಲ್ಲ. ಮೊನ್ನೆ ಮೊನ್ನೆ ಅಂದರೆ ಒಂದು ವರ್ಷದ ಹಿಂದೆ ಮಿಲ್ಟ್ರಿಯಿಂದ ರಿಟೈರಾಗಿ ಸೀಗಿ ಗುಂಡಪ್ಪಾ ಬಂದು ಊರಲ್ಲೆ ನೆಲೆಸಿದ್ದ. ಈಗ ಸೀಗಿ ಗುಂಡಪ್ಪ ಹೋಗಿ ಮಿಲ್ಟ್ರಿ ಗುಂಡಪ್ಪನಾಗಿಯೇ ಗುರುತಿಸಿಕೊಳ್ಳುತ್ತಿದ್ದ. ತುಳಸೀರಾಮನ ಕೈಯಲ್ಲಿ ಪತ್ರ ಕೊಟ್ಟು ಮಿಲ್ಟ್ರಿ ಗುಂಡಪ್ಪನ ಮನೆಗೆ ಓಡಿಸಿದರು. ಒಂದು ಗಂಟೆ ಬಿಟ್ಟುಕೊಂಡು ತುಳಸೀರಾಮನು ಪತ್ರದ ವಿಚಾರ ತಿಳಿದುಕೊಂಡು ಬಂದ. ಆ ಪತ್ರ ರಾಮಚಂದ್ರನದಾಗಿತ್ತು. ಆತ ಮಿಲ್ಟ್ರಿ ಸೇರಿಕೊಂಡಿದ್ದಾನೆಂದು ಮನೆಗೆ ಪತ್ರ ಬರೆದಿದ್ದ. ಮಗ ಅಂತೂ ಬದುಕಿದ್ದಾನೆ ಎಂಬ ಖುಷಿ ತಂದೆತಾಯಿಗೆ ಆಯಿತು. ಆಗಲೂ ಇದೇ ಜನ ಎಂಥ ಕಟಕಿಯ ಮಾತುಗಳನ್ನಾಡಿದ್ದರು! ''ಮಗನಿಗೆ ಸಾಕೋ ತ್ರಾಣ ಇಲ್ದೆ ಹಡೆದರು, ಹಡೆಯುವಾಗ ಗೊತ್ತಾಗಲಿಲ್ಲ, ಮುಂದ ಮಕ್ಕಳಿಗೆ ಸಾಕಿ ಸಲವಬೇಕಾಗ್ತದೆ ಅಂತ. ಇಲ್ಲಿ ಉಪಾಸ-ವನವಾಸ ಬಿದ್ದು ಯಾಕ ಸಾಯಬೇಕು ಅಂತ ಅಲ್ಲಿ ಹಕನಾಕ ಸಾಯಲಾಕ ಹೋಗ್ಯಾದ ಪ್ವಾರ. ಇಂಥಾ ಅವ್ವಾ ಅಪ್ಪಾನೂ ಇರ್ತಾರೇನು ದುನಿಯಾದಾಗ?'' ಎಂದು ಇದೇ ಊರಿನ ಜನರು ಎದುರಾಎದುರಿಗೆ ಮಾತಾಡುತ್ತಿದ್ದರು. ಅವರು ಹಾಗೆ ಮಾತಾಡಲು ಕಾರಣವೂ ಇತ್ತು. ಮಿಲ್ಟ್ರಿ ಗುಂಡಪ್ಪ ಊರಿಗೆ ಬಂದಮೇಲೆ ಮಿಲ್ಟ್ರಿ ಸೇವೆ ಎಷ್ಟು ಖಡತರ ಇರ್ತದೆ, ಅಲ್ಲಿ ಹ್ಯಾಗೆ ದುಡಿಸಿಕೊಳ್ಳುತ್ತಾರೆ, ಯುದ್ಧದ ಕಾಲದಲ್ಲಿ ಹೇಗೆ ಹುಲಿಯ ಪಂಜರದಲ್ಲಿ ಹುಲ್ಲೆಯನ್ನು ನೂಕಿಹಾಕಿದಂತೆ ಜವಾನರನ್ನು ಕುತ್ತಿಗೆ ಹಿಡಿದು ತಳ್ಳುತ್ತಾರೆ ಎಂದು ಏನೇನೋ ಕತೆ ಕಟ್ಟಿ, ಅದಕ್ಕೆ ಉಪ್ಪು ಖಾರ ಹಚ್ಚಿ ಊರಲ್ಲಿ ಪ್ರಚಾರ ಮಾಡಿದ್ದ. ಅದೆಲ್ಲ ತನ್ನ ಅನುಭವದ ಮಾತುಗಳೆ ಎಂದು ಜನರು ನಂಬುವಂತೆ ಹೇಳಿದ್ದ. ಆತ ಎಂದೂ ಯುದ್ಧಭೂಮಿಗೆ ಹೋಗಿಯೇ ಇಲ್ಲ, ಮಿಲ್ಟ್ರಿಯ ಮೆಸ್‌ನಲ್ಲಿ ಕೆಲಸಮಾಡಿಕೊಂಡಿದ್ದ ಎಂಬ ವಿಚಾರ ಊರವರಿಗೆ ಹ್ಯಾಗೆ ಗೊತ್ತಾಗಬೇಕು. ಆತ ಹೇಳಿದ್ದೇ ಸತ್ಯ ಎಂದು ತಿಳಿದ ಜನರು ರಾಮಚಂದ್ರನ ಬಗ್ಗೆಯೂ ಅದೇ ರೀತಿಯಾಗಿ ಕಲ್ಪಿಸಿಕೊಂಡು ಗ್ಯಾನಬಾ ಬಗ್ಗೆ ಒಂದು ನಮೂನೆಯಾಗಿ ಮಾತಾಡಿದ್ದರು. ಆದರೆ ಇಂದು? ಆ ಜನರ ಹರಕೆಯ ಮಾತಿನಂತೆಯೋ ಎಂಬಂತೆ ಪಾಪ, ಯುದ್ಧದೊಳಗ ಸತ್ತು ಸ್ವರ್ಗ ಸೇರಿದ್ದಾನೆ. ಇವೊತ್ತು ಅವನ ಬಗ್ಗೆ ಇರುವ ದೃಷ್ಟಿಕೋನವೇ ಬೇರೆಯಾಗಿದೆ. ಅವನೊಬ್ಬ ಅಮರ ಜವಾನ ಆಗಿಬಿಟ್ಟಿದ್ದಾನೆ. ಗ್ಯಾನಬಾ ಮತ್ತು ಸೋನುಬಾಯಿ ವೀರ ಜವಾನನಿಗೆ ಜನ್ಮ ನೀಡಿದ ಮಹಾಪುರುಷರಾಗಿದ್ದಾರೆ. ಮದುವೆಯಾಗಿ ಕಳೆದ ಒಂದು ವರ್ಷದಲ್ಲಿ ಹೆಚ್ಚೆಂದರೆ ಮೂರು ನಾಲ್ಕು ತಿಂಗಳು ದಾಂಪತ್ಯ ಸುಖವನ್ನುಂಡ ಜಾನಕಿ ಬೆಳಗಾಗುವುದರಲ್ಲಿ 'ವೀರ ನಾರಿ'ಯಾಗಿದ್ದಾಳೆ.

ಅದೇನು ಸಭೆ ಸಮಾರಂಭಗಳು! ಅದೇನು ಹಾರ ತುರಾಯಿಗಳು! ಹೋದ ಕಡೆಗೆಲ್ಲ ಹೊಗಳಿಕೆಯ ಮಾತುಗಳು. ಯಾವುದೋ ವಿಚಿತ್ರ ಲೋಕದ ಪ್ರಾಣಿಯನ್ನು ತಮ್ಮೆದುರಿಗೆ ತಂದು ನಿಲ್ಲಿಸಿದಂತೆ ಎಲ್ಲರೂ ಜಾನಕಿಯನ್ನು ಕುತೂಹಲದಿಂದ ನೋಡುವವರೆ. 'ಅಮರ ಜವಾನ'ನ ಹೆಂಡತಿಯಾಗುವ ಭಾಗ್ಯ ಯಾರಿಗುಂಟು ಯಾರಿಗಿಲ್ಲ! ದೇಶದಲ್ಲಿ ಚುನಾವಣೆಗಳೂ ತಲೆಯ ಮೇಲಿರುವುದರಿಂದ ರಾಜಕೀಯ ಪುಢಾರಿಗಳು ಈ ಒಂದು ಸಂದರ್ಭದ ಲಾಭ ಪಡೆಯಲು ಹವಣಿಸುತ್ತಿದ್ದರು. ಒಂದೊಂದು ಪಕ್ಷವೂ ತನ್ನದೇ ಆದ ರೀತಿಯಲ್ಲಿ ಜಾನಕಿಯ ಸನ್ಮಾನ ಸಭೆಗಳನ್ನು ಏರ್ಪಡಿಸುತ್ತಿತ್ತು. ಜನರ ಕಣ್ಣಲ್ಲಿ ಕಣ್ಣೀರು ಮಿಡಿಯುವಂಥ ಭಾಷಣಗಳನ್ನು ಮಾಡುತ್ತಿತ್ತು, ಹಾರ ತುರಾಯಿಗಳಲ್ಲಿ ಹೂತುಹೋಗುವಂತೆ ಜಾನಕಿಯನ್ನು ಸನ್ಮಾನಿಸುತ್ತಿತ್ತು. ಜನರ ಭಾವನೆಗಳನ್ನು ಕೆರಳಿಸಿ ವೀರ ನಾರಿಯ ಪರಿಹಾರ ನಿಧಿಯ ಹೆಸರಿನಲ್ಲಿ ಸಭಿಕರಿಂದ ನಗದು ರೂಪದಲ್ಲಿ ಧನ-ಕನಕಗಳನ್ನು ಸಂಗ್ರಹಿಸುತ್ತಿತ್ತು. ಸಂಗ್ರಹವಾದ ಹಣ ಎಷ್ಟೆಷ್ಟು ಯಾವ ಯಾವ ಲೆಕ್ಕಕ್ಕೆ ಸೇರುತ್ತಿತ್ತೆಂದು ಕೇಳುವವರು ಹೇಳುವವರು ಯಾರು? ಆ ಕಡೆ ಸರಕಾರವೂ ಕೂಡ ವೀರ ಸೇನಾನಿಯ ಕುಟುಂಬಕ್ಕೆ ಪರಿಹಾರವನ್ನು ಘೋಷಿಸಿತು.

ವಿರೋಧ ಪಕ್ಷಗಳು ಜಾನಕಿಯನ್ನು ಮುಂದೆಮಾಡಿಕೊಂಡು, ''ಇಂಥ ಹೊಸ ಹರೆಯದ ಹೆಣ್ಣಿನ ಕುಂಕುಮ ಭಾಗ್ಯ ಕಿತ್ತಿಕೊಳ್ಳಲು ಯಾರು ಕಾರಣ? ಆಳುವ ಪಕ್ಷದ ಬೇಜವಾಬ್ದಾರಿತನವೇ ಇದಕ್ಕೆಲ್ಲ ಕಾರಣ. ಸಕಾಲಕ್ಕೆ ಸರಕಾರ ಎಚ್ಚೆತ್ತುಕೊಂಡಿದ್ದರೆ ಗಡಿಪ್ರದೇಶದಲ್ಲಿ ವೈರಿಗಳು ದಾಳಿಮಾಡಲು ಹೇಗೆ ಸಾಧ್ಯವಿತ್ತು? ಇವರಿಗೆ ರಾಜಕೀಯ ಬೇಕು. ಆ ವೈರಿಗಳ ಜೊತೆಗೆ ಒಳಗೊಳಗೆ ಶಾಮೀಲಾಗಿ ಆಳುವ ಪಕ್ಷ ತನ್ನ ಬೇಳೆ ಬೇಯಿಸಿಕೊಳ್ಳುತ್ತಿದೆ. ಇದರ ಪುರಾವೆಗಳು ನಮ್ಮಲ್ಲಿ ಇವೆ. ನಾಳೆ ಚುನಾವಣೆಯ ಕಾಲಕ್ಕೆ ಆ ಎಲ್ಲಾ ಪುರಾವೆಗಳನ್ನು ತೆಗೆದುಕೊಂಡು ಜನರ ಹತ್ತಿರ ಹೋಗುತ್ತೇವೆ. ಆಗ ಇವರ ಬಣ್ಣ ಬಯಲಾಗುತ್ತದೆ. ಜನರೇ ನ್ಯಾಯ ಒದಗಿಸುತ್ತಾರೆ. ಹುತಾತ್ಮನಾದ ರಾಮಚಂದ್ರ ಜಾಧವನ ವೀರ ನಾರಿ ಜಾನಕೀ ಒಬ್ಬಳೇ ಅಲ್ಲ, ಇಂಥ ನೂರಾರು ಜನ, ಸಾವಿರಾರು ಜನ ಮುತ್ತೈದೆಯರ ಮಾಂಗಲ್ಯ ಹರಿಯಲು ಈ ಆಳುವ ಪಕ್ಷದ ಎಡಬಿಡಂಗಿತನದ ಆಡಳಿತವೇ ಕಾರಣವಾಗಿದೆ...'' ಎಂದೆಲ್ಲಾ ಮಾತನಾಡುತ್ತಿದ್ದವು.

ಅತ್ತ ಆಳುವ ಪಕ್ಷವು ತನ್ನ ಒರಸೆಯನ್ನು ಮಸೆಯುತ್ತ, ''ಜಾನಕಿಯಂಥ ಮುಗ್ಧೆಯನ್ನು ಈ ಸ್ಥಿತಿಗೆ ತಂದ ವೈರಿಗಳನ್ನು ನಾವು ಸುಮ್ಮನೆ ಬಿಡುವುದಿಲ್ಲ. ರಾಮಚಂದ್ರ ಜಾಧವ ಹುತಾತ್ಮನಾದದ್ದು ಇಡೀ ದೇಶಕ್ಕೆ, ಇಡೀ ಜಿಲ್ಲೆಗೆ ಗೌರವ ತರುವಂಥ ಸಂಗತಿಯಾಗಿದೆ. ಪಂ.ಶಿವಚಂದ್ರ, ಗಂಗಾರಾಮ, ವೇದಪ್ರಕಾಶ, ಬನ್ಸಿಲಾಲರನ್ನು ಜನ್ಮ ನೀಡಿದ ಈ ಜಿಲ್ಲೆ ಇವೊತ್ತು ರಾಮಚಂದ್ರ ಜಾಧವನಿಗೆ ಜನ್ಮ ನೀಡಿದೆ, ದೇಶಕ್ಕಾಗಿ ಜನ್ಮ ನೀಡಿದೆ, ದೇಶದ ಗೌರವ ರಕ್ಷಣೆಗಾಗಿ ಜನ್ಮ ನೀಡಿದೆ. ಶ್ರೀಮತಿ ಜಾನಕಿಬಾಯಿಯವರ ನೋವು ನಮಗೆ ಅರ್ಥವಾಗುತ್ತದೆ. ಅದು ಅವರ ನೋವಲ್ಲ, ಅದು ನಮ್ಮ ನೋವಾಗಿದೆ. ಅವರು ಕಳೆದುಕೊಂಡ ಐಶ್ವರ್ಯ ನಾವು ಕಳೆದುಕೊಂಡ ಐಶ್ವರ್ಯವಾಗಿದೆ. ಸರಕಾರ ಅವರಿಗೆ ಮನಮಿಡಿಯುವಂಥ ಹಾರ್ದಿಕ ಸಹಾನುಭೂತಿಯನ್ನು ನೀಡುತ್ತದೆ. ಈ ವರ್ಷದ ಗಣರಾಜ್ಯೋತ್ಸವದ ದಿನ ರಾಮಚಂದ್ರ ಜಾಧವ ಅವರಿಗೆ ಅಶೋಕ ಚಕ್ರ ನೀಡಿ ಸನ್ಮಾನಿಸಬೇಕೆಂದು ರಾಷ್ಟ್ರಪತಿಗಳಿಗೆ ಶಿಫಾರಸ್ಸು ಮಾಡುತ್ತೇವೆ. ಬೀದರದಂಥ ಹಿಂದುಳಿದ ಜಿಲ್ಲೆಗೆ ಅಶೋಕ ಚಕ್ರದಂಥ ಗೌರವ ತಂದುಕೊಡುವ ಹೆಮ್ಮೆ ರಾಮಚಂದ್ರ ಜಾಧವರಿಗೆ ಸಲ್ಲುತ್ತದೆ...'' ಎಂದು ಪ್ರಚಾರ ಮಾಡಹತ್ತಿದವು.

''ನನ್ನ ನೋವು ಅವರ ನೋವೆ? ನಾನು ಕಳೆದುಕೊಂಡ ಐಶ್ವರ್ಯ ಅವರ ಐಶ್ವರ್ಯ ಹೇಗಾಗಲು ಸಾಧ್ಯ? ಒಬ್ಬ ರಾಮಚಂದ್ರ ಹೋದರೇನಾಯಿತು, ಅವರಿಗೆ ಇನ್ನೊಬ್ಬ ರಾಮಚಂದ್ರ ಸಿಕ್ಕಾನು. ಅವರ ಕಳೆದುಹೋದ ಐಶ್ವರ್ಯವನ್ನು ಒಬ್ಬರಲ್ಲ ಇನ್ನೂ ನಾಲ್ಕಾರು ಜನ, ಹತ್ತಾರು ಜನ ತರುಣರು ತುಂಬಿಕೊಟ್ಟಾರು. ಆದರೆ ನನ್ನ ಹರಿದು ಹೋದ ಮಾಂಗಲ್ಯವನ್ನು ಯಾರಾದರೂ ಪೋಣಿಸಿಯಾರೆ? ಅಳಿಸಿಹೋದ ಕುಂಕುಮ ತಿಲಕವನ್ನು ಮತ್ತೆ ಯಾರಾದರೂ ಹಣೆಗೆ ಇಟ್ಟಾರೆಯೆ? ಎಲ್ಲಕ್ಕಿಂತ ಮಿಗಿಲಾಗಿ ನನ್ನ ಆ ಕಳೆದುಹೋದ ಕೌಮಾರ್ಯವನ್ನು ಎಲ್ಲಿ ಹುಡುಕಿ ಪಡೆಯಲಿ? ಅದನ್ನು ಯಾರು ತಿರುಗಿಸಿಕೊಟ್ಟಾರು? ಹೆಣ್ಣಿಗೆ ಇರುವುದು ಅದೊಂದೇ ಐಶ್ವರ್ಯ, ಅದೊಂದೇ ಸಂಪತ್ತು. ಹೆಣ್ಣು ಆ ಐಶ್ವರ್ಯವನ್ನು, ಆ ಸಂಪತ್ತನ್ನು ಒಂದು ಗಂಡಿಗೆ ಧಾರೆಯೆರೆಯುವುದ್ಯಾತಕ್ಕೆ? ತಾನು ಧಾರೆಯೆರೆದ ಆ ಐಶ್ವರ್ಯದ ಬದಲಿಗೆ ಆಕೆ ಬಯಸುವುದು ತಾಯ್ತನದ ಫಲಪ್ರಾಪ್ತಿ. ನಾನು ಬಲಿಕೊಟ್ಟ ಆ ಕೌಮಾರ್ಯದ ಬದಲಿಗೆ ನನಗೆ ತಾಯ್ತನ ಸಿಗಬೇಕಾಗಿತ್ತು. ಬದುಕಿನಲ್ಲಿ ಏನೇ ಸಿಗದಿದ್ದರೂ ಅದೊಂದು ಸಿಕ್ಕಿದ್ದರೆ ಸಾಕಾಗಿತ್ತು. ನನ್ನ ಹೆಣ್ತನದ ಬಯಕೆ ಪೂರ್ಣವಾಗುತ್ತಿತ್ತು. ಈ ಪ್ರಪಂಚದಲ್ಲಿ ನಾನು ಏನನ್ನೂ ಬಯಸುತ್ತಿರಲಿಲ್ಲ. ಈ ವೈಧವ್ಯವನ್ನೂ ಹೇಗೋ ಸಹಿಸಿಕೊಂಡು ಹೋಗಬಹುದಾಗಿತ್ತು. ಆದರೆ ಆ ತಾಯ್ತನದ ಭಾಗ್ಯವೂ ನನಗೆ ಸಿಗಲಿಲ್ಲ. ಅದನ್ನು ಈಗ ಯಾರು ಒದಗಿಸಿಕೊಟ್ಟಾರು? ನಾನೀಗ ಆ ಫಲವನ್ನು ಎಲ್ಲಿಂದ ಪಡೆಯಲಿ?'' ಎಂಬುದು ಜಾನಕಿಯ ಪ್ರಲಾಪ.

ಜಾನಕಿಯ ಕರುಳು ಕಿವಿಚಿದಂತಾಗುತ್ತಿತ್ತು. ಒಳಗೆ ಹೃದಯದಲ್ಲಿ ಕ್ಯಾನ್ಸರಿನ ಗ್ರಂಥಿಯನ್ನಿಟ್ಟುಕೊಂಡು ಮೇಲೆ ಎಷ್ಟೆಲ್ಲ ಅಲಂಕಾರ ಮಾಡಿಕೊಂಡರೂ ಏನು ಪ್ರಯೋಜನ? ಕ್ಯಾನ್ಸರಿನ ಆ ಗ್ರಂಥಿ ಒಳಗೊಳಗೇ ಕೀವು ತುಂಬಿ ಬಾಧಿಸುತ್ತಿದೆ. ಅದು ಒಡೆದು ಈ ಬಾಳಿಗೆ ಯಾವಾಗ ಕೊನೆಯನ್ನು ತಂದೀತೋ ಶಿವರಾಯಾ? ಈ ಹಾರ ತುರಾಯಿಗಳು, ಈ ಘೋಷಣೆಗಳು ಆಕೆಗೆ ನೆಮ್ಮದಿಯನ್ನು ನೀಡಲಾರವು.

ಈಗೀಗ ಜಾನಕಿಯನ್ನು ಕಾಣುವ ಅತ್ತೆಯ ದೃಷ್ಟಿಕೋನವೂ ಬದಲಾಗಿದೆ. ಶೈಶವದಲ್ಲೇ ಅಸುನೀಗಿದ ಆರು ಜನ ಮಕ್ಕಳ ನೋವಿಗಿಂತ ಸೋನುಬಾಯಿಗೆ ರಾಮಚಂದ್ರನ ಸಾವು ಭಿನ್ನವಾಗಿ ಕಂಡಿರಲಿಲ್ಲ. ಕುಡಿ ಮೀಸೆ ಹೊತ್ತು ಎದುರಿಗೆ ಓಡಾಡುತ್ತಿದ್ದ ಆ ಮಗನ ಚಿತ್ರ ಈಗ ಆಕೆಯ ಕಣ್ಣೆದುರಿಗೆ ಮಸಕು ಮಸಕಾಗುತ್ತಿದೆ. ಹುಟ್ಟಿದವರು ಯಾರೂ ಶಾಶ್ವತರಲ್ಲ. ಒಂದು ದಿನ ಸಾಯಲೇಬೇಕು. ಅವರವರು ಕಟ್ಟಿಕೊಂಡು ಬಂದ ಬುತ್ತಿ ಮುಗಿದ ಮೇಲೆ ಎಲ್ಲರೂ ಹೊರಟುಹೋಗುವವರೆ! ರಾಮಚಂದ್ರನೂ ಹೊರಟುಹೋದ. ಈ ವೇದಾಂತದ ಮಾತುಗಳು ಈಗ ಸೋನುಬಾಯಿಯ ಬಾಯಲ್ಲಿ ಹಗಲಿಲ್ಲ ಓಡಾಡಹತ್ತಿದವು. ಇಂಥ ಜ್ಞಾನೋದಯ ಯಾವಾಗಾಯಿತು? ಹೇಗಾಯಿತು? ಮಗ ಮನೆಬಿಟ್ಟು ಹೋದಾಗಲೂ ಈ ಮಾತು ತಂದೆತಾಯಿಯ ಬಾಯಲ್ಲಿ ಬಂದಿರಲಿಲ್ಲ. ಆದರೆ ಈಗೇಕೆ? ಯಾಕೆಂದರೆ ಹೋದವನು ಹಾಗೇ ಹೋಗಲಿಲ್ಲ. ಹಿಂದೆ ಉಳಿದವರಿಗೆ ಬದುಕಲು ಒಂದು ದಾರಿ ಮಾಡಿಕೊಟ್ಟು ಹೋದ. ಈಗ ಅವನಿಲ್ಲ, ಅವನ ಹೆಸರು ಇದೆ.

ಹೆಸರಿಗೆ ಅಂಟಿಕೊಂಡಿರುವ 'ಹುತಾತ್ಮ' ಎಂಬ ಬಿರುದು ಇದೆ. ಬರೀ ಬಿರುದು ಅಷ್ಟೇಯಲ್ಲ, ಅದು ಈಗ ಹೇಗೆ ಬೇಕೋ ಹಾಗೆ ಚಲಾಯಿಸಬಹುದಾದ ನಾಣ್ಯವಾಗಿದೆ. ಸ್ವತಂತ್ರ ಭಾರತದಲ್ಲಿ ಇದನ್ನೇ ಆಸ್ತಿಯನ್ನಾಗಿ ಮಾಡಿಕೊಂಡವರು ಎಷ್ಟು ಜನರಿಲ್ಲ! 'ಮುಂಡೆಯ ಮದುವೆಯಲ್ಲಿ ಉಂಡವನೇ ಜಾಣ' ಎಂಬ ಗಾದೆಮಾತಿನಂತೆ ಈಗ ಗ್ಯಾನಬಾನ ಕುಟುಂಬ ಹಾಲಲ್ಲಿ ಮುಳುಗಿ ತುಪ್ಪದಲ್ಲಿ ತೇಲುತ್ತಿದೆ. ಜಾನಕಿ ಈಗ ಇಸ್ಪೇಟು ಆಟದ ಟ್ರಂಪ್ ಕಾರ್ಡನಂತಾಗಿದ್ದಾಳೆ. ಅವರ ಬದುಕಿನ ಆಟಕ್ಕೆ ಅವಳು ಬಲ ತುಂಬುತ್ತಿದ್ದಾಳೆ. ಅವಳು ತಮ್ಮ ಕೈಯಿಂದ ಕಳೆದುಹೋಗಬಾರದೆಂದು ಬಹಳ ಮುತುವರ್ಜಿ ವಹಿಸುತ್ತಿದ್ದಾರೆ. ಈಗ ಆಕೆಯನ್ನು ನೋಡುವ ದೃಷ್ಟಿಯೇ ಬದಲಾಗಿದೆ.

ಜಾನಕಿ, ಪಾಪ! ಹಸುಗೂಸು! ಅದೇನು ಮಾಡೀತು! ನಮ್ಮ ಮಗನ ವಿಧಿಲಿಖಿತ ಇದ್ದಷ್ಟು ದಿನ ಬಾಳಿ ಬದುಕಿದ. ಆ ಪೋರೀದೇನು ತಪ್ಪು! ಇವೊತ್ತು ಆಕೆ ಇರುವುದರಿಂದಲೇ ಎಷ್ಟೆಲ್ಲ ಮಾನ ಸನ್ಮಾನಗಳಾಗುತ್ತಿವೆ. ಮನೆಯ ಎದುರಿಗೆ ಪುಢಾರಿಗಳ ಎಷ್ಟೊಂದು ಕಾರುಗಳು ಓಡಾಡುತ್ತಿವೆ. ಹೋದಹೋದಲ್ಲೆಲ್ಲ ಹೂ ಹಾರಗಳು, ಸೀರೆ-ಖಣಗಳು, ತುಂಬಿದ ಬ್ಯಾಗುಗಳು. ಕೇಳಿದ ಕಡೆಗೆ ಮನೆ ಕಟ್ಟಿಕೊಳ್ಳಲು ಜಾಗ, ತುಳಸೀರಾಮನಿಗೆ ನೌಕರಿ... ಸೋನುಬಾಯಿಯ ಲೆಕ್ಕಾಚಾರವೇ ಬದಲಾಗಿಬಿಟ್ಟಿತ್ತು.



ಈಗೀಗ ಜಾನಕಿಗೂ ಈ ಸಭೆ ಸಮಾರಂಭಗಳು ರೂಢಿಯಾಗಿಬಿಟ್ಟಿವೆ. ಕಾಲಕ್ಕಿಂತ ದೊಡ್ಡ ಡಾಕ್ಟರರು ಬೇರೊಬ್ಬರಿಲ್ಲ. ದೇಹದ ಗಾಯ ಮಾಯಲು ಡಾಕ್ಟರರ ಔಷಧೋಪಚಾರ ಬೇಕು. ಆದರೆ ಮನಸ್ಸಿನ ಗಾಯವನ್ನು ಮಾಯಿಸುವುದಕ್ಕೆ ಯಾವ ಔಷಧಿಯೂ ಬೇಕಾಗಿಲ್ಲ. ಅದನ್ನು ಮಾಯಿಸುವ ಶಕ್ತಿ ಕಾಲಕ್ಕೆ ಮಾತ್ರ ಇರುವುದು. ಕಳೆದುಹೋದುದು ಇನ್ನು ಸಿಗುವುದಿಲ್ಲ ಎಂದು ಒಮ್ಮೆ ಖಾತ್ರಿಯಾದ ಮೇಲೆ ಮನುಷ್ಯನು ತನ್ನ ಪರಿಸ್ಥಿತಿಯೊಂದಿಗೆ ಅನಾಯಾಸವಾಗಿ ಒಂದು ರೀತಿಯ ಒಡಂಬಡಿಕೆ ಮಾಡಿಕೊಳ್ಳಲೇಬೇಕಾಗುತ್ತೆ. ಅದಕ್ಕೆ ವಸ್ತುಸ್ಥಿತಿಯಾದರೂ ಅನ್ನಿ, ಕರ್ಮಫಲವಾದರೂ ಅನ್ನಿ ಅಥವಾ ದೈವ ಲಿಖಿತ ಎಂಬ ಹೆಸರನ್ನಾದರೂ ಕೊಡಿ. ಏನೂ ವ್ಯತ್ಯಾಸವಾಗುವುದಿಲ್ಲ. ಯಾಕೆಂದರೆ ಮನುಷ್ಯನ ಜಿಜೀವಿಷೆ ಅಂದರೆ ತಾನು ಬದುಕಬೇಕು ಎಂಬ ತೀವ್ರತರವಾದಂಥ ಆಸೆ ಎಲ್ಲಕ್ಕಿಂತ ಬಲವತ್ತರವಾಗಿರುತ್ತದೆ.

ಯಾರೇ ಕರೆದರೂ ಈಗ ಜಾನಕಿ ಸಭೆಗಳಿಗೆ ಹೋಗುತ್ತಾಳೆ, ಹಾರ ತುರಾಯಿಗಳನ್ನು ಸ್ವೀಕರಿಸುತ್ತಾಳೆ. ತಡವರಿಸುತ್ತ ನಾಲ್ಕಾರು ಮಾತಾಡುತ್ತಾಳೆ. ಜನ ಚಪ್ಪಾಳೆ ತಟ್ಟುತ್ತಾರೆ. ಘೋಷಣೆ ಕೂಗುತ್ತಾರೆ. ಒಂದು ನಿಟ್ಟುಸಿರು ಬಿಟ್ಟು ಆಕೆ ವ್ಯವಸ್ಥಾಪಕರ ಗಾಡಿ ಹತ್ತಿ ಮನೆಗೆ ಬರುತ್ತಾಳೆ. ಹಾರ ತುರಾಯಿಯ ಕರಂಡಕದಲ್ಲಿ ಒಂದು ಪಾಕೀಟು ಆಕೆಯ ಮನೆ ಸೇರುತ್ತದೆ. ಅತ್ತೆ-ಮಾವ ಆ ಕರಂಡದಲ್ಲಿ ಹುಡುಕುವುದು ಆ ಪಾಕೀಟನ್ನು ಮಾತ್ರ. ಅದನ್ನು ಬಿಚ್ಚಿನೋಡಿ ಅವರು ಖುಷಿಪಡುತ್ತಾರೆ. ಅಲ್ಲಿಗೆ ಒಂದು ಅಧ್ಯಾಯ ಮುಗಿಯುತ್ತದೆ.

ಆ ದಿನ ಬೀದರಿನ ನೆಹರು ಕ್ರೀಡಾಂಗಣದಲ್ಲಿ ಜಾನಕಿಗಾಗಿ ಅದ್ದೂರಿ ಸಭೆ. ಇಡೀ ಬೀದರ ಪಟ್ಟಣವನ್ನು ನಡುಗಿಸುವಂಥ ಮೈಕಾಸುರನ ಆರ್ಭಟ. ಹೆಜ್ಜೆಹೆಜ್ಜೆಗೂ ಬ್ಯಾನರಗಳು, ಶಾಲಾ ಮಕ್ಕಳ ಫೇರಿಗಳು, ಪುಢಾರಿಗಳ ಕಾರುಗಳು, ಜೀಪುಗಳು. ಎಲ್ಲ ಪಕ್ಷಗಳ ಸಂಯುಕ್ತ ಆಶ್ರಯದಲ್ಲಿ ಈ ದಿನ ಸನ್ಮಾನ. ಅದು ಹುತಾತ್ಮನಾದ ವೀರಯೋಧನ ಪುಣ್ಯಸ್ಮರಣೆಯ ದಿನ. ಅದಕ್ಕೂ ಮುಖ್ಯವಾಗಿ ಚುನಾವಣೆಗಳು ತೀರ ಹತ್ತಿರದಲ್ಲೇ ಇವೆ. ರಾಮಚಂದ್ರನಂಥ ಜಿಲ್ಲೆಯ ವೀರಯೋಧನನ್ನು ಗುರುತಿಸದೆಹೋದರೆ ತಮ್ಮ ಅಂತರಾತ್ಮಕ್ಕೆ ನೆಮ್ಮದಿ ಸಿಕ್ಕೀತೆ ಎಂದು ರಾಜಕೀಯ ಪುಢಾರಿಗಳ ವ್ಯಾಖ್ಯಾನ. ಯಾರು ಯಾರೋ ಹಿರಿಯ ಪುಢಾರಿಗಳು ಬರುತ್ತಾರಂತೆ. ಬರಲಿರುವ ಪುಢಾರಿಗಳ ಚಿತ್ರಗಳನ್ನು ಹೊತ್ತ ಭಿತ್ತಿಪತ್ರಗಳು.

ಹುತಾತ್ಮನ ಹೆಂಡತಿಗೆ ಇಂದು ಅದ್ದೂರಿಯಾದ ಸನ್ಮಾನ. ಮುಂದೆ ಎರಡು, ಹಿಂದೆ ಎರಡು ಕಾರುಗಳು. ನಡುವಿನ ಕಾರಿನಲ್ಲಿ 'ವೀರವನಿತೆ' ಜಾನಕೀಬಾಯಿ ರಾಮಚಂದ್ರ ಜಾಧವ. ರಾಸೂರಿಂದ ಹೊರಟ ಕಾರು ನೇರವಾಗಿ ಬೀದರಿನ ಹಬ್ಸಿಕೋಟೆ ಅತಿಥಿಗೃಹಕ್ಕೆ ಹೋಗಿ ಜಾನಕಿಯನ್ನು ಇಳಿಸಿತು. ಜಿಲ್ಲಾಧಿಕಾರಿಗಳು ಆಕೆಯನ್ನು ಸ್ವಾಗತಿಸಿ ಆಕೆಗಾಗಿ ಕಾದಿರಿಸಿದ 'ಸೂಟ್'ಗೆ ಕರೆದೊಯ್ದರು. ಸ್ವಲ್ಪ ಹೊತ್ತು ವಿಶ್ರಮಿಸಿ, ಬಟ್ಟೆ ಬದಲಿಸುವಷ್ಟರಲ್ಲಿ ಕಾರ್ಯಕ್ರಮಕ್ಕೆ ಹೊರಡಲು ಕರೆ ಬಂತು.

ಭಿತ್ತಿಪತ್ರಗಳಲ್ಲಿ ಕಾಣಿಸಿದ ಯಾವ ದೊಡ್ಡ ಪುಢಾರಿಗಳೂ ಬರಲಿಲ್ಲ. ಚುನಾವಣಾ ಸಂಹಿತೆ ಅವರಿಗೆ ಅಡ್ಡಿಯಾಗಿತ್ತಂತೆ. ಸ್ಥಳೀಯ ಸಂಯೋಜಕರಿಗೆ ಇರಸುಮುರಸಾಯಿತು. ಆದರೂ ಶಾಲಾ ಮಕ್ಕಳಿಂದ ಹಿಡಿದು ಮರಿ ಪುಢಾರಿಗಳವರೆಗೆ ಎಲ್ಲರೂ ಭಾಷಣ ಕುಟ್ಟಿದರು. ಸಮಯಪ್ರಜ್ಞೆ ಇಲ್ಲದೇ ಭಾಷಣ ಕುಟ್ಟಿದರು. ಸಭೆ ಮುಗಿದಾಗ ರಾತ್ರಿಯ ಗಂಟೆ ಎಷ್ಟಾಗಿತ್ತೆಂಬುದು ಜಾನಕಿಗೆ ತಿಳಿಯಲಿಲ್ಲ. ಸಭೆ ಮುಗಿಸಿಕೊಂಡು ಆಕೆ ಹಾಗೆ ಕಾರು ಹತ್ತಿ ರಾಸೂರಿಗೆ ಹೊರಡೋಣ ಎಂದು ಹೇಳಿದಳು. ಆದರೆ ಸಂಯೋಜಕರು, ಹಬ್ಸಿಕೋಟೆ ಅತಿಥಿಗೃಹಕ್ಕೆ ಹೋಗಿ ಒಂದಿಷ್ಟು ಫಲಹಾರ ಮಾಡಿ ಹೋಗುವಿರಂತೆ, ಬಹಳ ಆಯಾಸವಾಗಿದೆ ಎಂದು ರಮಿಸಿ ಹೇಳಿದರು. ಆಕೆಗೂ ಒಂದಿಷ್ಟು ವಿಶ್ರಾಂತಿ ಬೇಕೆನಿಸಿತ್ತು. ಆ ವಿಶ್ರಾಂತಿ ಮನೆಯಲ್ಲಾದರೇನು, ಅತಿಥಿಗೃಹದಲ್ಲಾದರೇನು ? ಮನೆಯಲ್ಲಿ ತನಗಾಗಿ ಕಾಯುವವರು ಈಗ ಯಾರಿದ್ದಾರೆ ? ಈಗ ಹೋದರೂ ಅಷ್ಟೆ, ಬೆಳಗು ಮುಂಜಾನೆ ಹೋದರೂ ಅಷ್ಟೆ, ಏನೂ ವ್ಯತ್ಯಾಸವಾಗುವುದಿಲ್ಲ ಎಂದು ಆಕೆಗೆ ಅನಿಸಿತು. ಸಂಯೋಜಕರ ಮಾತಿಗೆ ತಲೆದೂಗಿ ಒಪ್ಪಿಗೆ ಕೊಟ್ಟಳು.

ಹಬ್ಸಿಕೋಟೆ ಅತಿಥಿಗೃಹಕ್ಕೆ ಬಂದು ಸುಸ್ತಾಗಿ ಸೋಫಾದಲ್ಲಿ ಕುಸಿದುಬಿದ್ದಳು. ತಾನೀಗ ಊರಿಗೆ ಹೊರಡಬೇಕು ಎಂದು ಯೋಚಿಸುವಷ್ಟು ಕೂಡ ಮನಸ್ಸಿಗೆ ವ್ಯವಧಾನ ಇರಲಿಲ್ಲ. ಒಂದು ಹತ್ತು ನಿಮಿಷ ಹಾಗೇ ಬಿದ್ದುಕೊಳ್ಳಲು ಆಕೆಯ ಚೈತನ್ಯ ಒತ್ತಾಯಿಸುತ್ತಿತ್ತು. ಸೋಫಾದ ಮೇಲೆ ಹಿಂದೆ ಬೆನ್ನು ಆನಿಸಿ ಕೆಳಗೆ ಕಾಲುಚಾಚಿ ಹಾಗೆ ವಿರಮಿಸಿದಳು. ಆ ಆಯಾಸದಲ್ಲಿ ಕ್ಷಣ ಹೊತ್ತು ಯಾವಾಗ ಮಂಪರು ಆವರಿಸಿತ್ತೋ ಗೊತ್ತಾಗಲಿಲ್ಲ. ಯಾವ ಕನಸಿಗೂ, ಯಾವ ಕಲ್ಪನೆಗೂ ಅವಕಾಶವಿಲ್ಲದಂಥ ಆಳವಾದ ಮಂಪರು. ಯಾರೋ ತನಗೆ ಅರಿವಳಿಕೆಯ ಇಂಜೆಕ್ಶನ್ ಕೊಟ್ಟಿದ್ದಾರೋ ಎಂಬಂಥ ಮಂಪರು. ತಾನು ಎಲ್ಲಿದ್ದೇನೆ ಎಂಬ ಅರಿವೂ ಇಲ್ಲದಂಥ ಮಂಪರು. ಇಂಥ ಏಕಾಂತದಲ್ಲಿ ಯಾರಾದರೂ ಬಂದರೆ ಎಂಬ ಭಯವೂ ಇಲ್ಲದಂಥ ಮಂಪರು. ಅಂಥ ಮಂಪರಿನಲ್ಲಿಯೂ ಎಂಥದ್ದೋ ಒಂದು ಅನುಭವ. ಕನಸೋ ನನಸೋ ಗೊತ್ತಿಲ್ಲ. ಒಮ್ಮೆಲೇ ಏನೋ ಸಿಡಿಲು, ಮಿಂಚು, ಬಿರುಗಾಳಿ, ಸುಂಟರಗಾಳಿ. ಆಕಾಶದಿಂದ ಏನೋ ಹಾರಿಬರುತ್ತಿದೆ. ರೆಕ್ಕೆ ಬಿಚ್ಚಿಕೊಂಡಿದೆ. ಅಬ್ಬಾ! ಅದೆಂಥ ರೆಕ್ಕೆ! ಅದು ರಣಹದ್ದೇ ಇರಬೇಕು. ಇಲ್ಲ ಮೇಲೆ ಎರಗಿಬೀಳುತ್ತಿರುವ ರೆಕ್ಕೆ ಹೊತ್ತ ಆಕಾಶ ಕಾಯ, ಕಣ್ಣು ಮೂಗು ಬಾಯಿ ಒಂದೂ ಇಲ್ಲ. ಒಟ್ಟಾರೆ ಮುಖ ಎಂಬುದೇ ಇಲ್ಲ. ಬರೀ ದೇಹ ಮಾತ್ರ, ದೇಹದೊಳಗಿನ ದೈತ್ಯ ಶಕ್ತಿ ಮಾತ್ರ. ಬೇಟೆಯ ಪ್ರಾಣಿಯನ್ನು ತನ್ನ ಪಂಜೆಯಲ್ಲಿ ಹಿಡಿದುಕೊಂಡು ಹಾರಿಹೋಗುವಂಥ ರಣಹದ್ದು.

ಜಾನಕಿಯ ಮೈ ಝಲ್ಲೆಂದಿತು. ಥರ ಥರ ಮೈ ನಡುಗಹತ್ತಿತು. ಭಯದಿಂದ ಮೈಮೇಲೆ ಮುಳ್ಳು ಎದ್ದವು. ಆ ಮಂಪರಿನಲ್ಲಿಯೇ ಆಕೆ ಆ ರಣಹದ್ದನ್ನು ಓಡಿಸಲು ಕೈ ಬೀಸಹತ್ತಿದಳು. ಪ್ರಯೋಜನವಾಗಲಿಲ್ಲ. ಅದು ಬಂದದ್ದೇ ಬಲವಾಗಿ ತನ್ನ ಪಂಜಾದಲ್ಲಿ ಹಿಡಿದು ಕೊಕ್ಕಿನಿಂದ ಕುಕ್ಕುತ್ತಿತ್ತು. ಆಕೆಗೆ ಒಂದಿಷ್ಟು ಮಂಪರು ಹರಿದಂತಾಯಿತು. ಅ ಗುಂಗಿನಲ್ಲಿಯೇ ಆಕೆ ಕಣ್ಣು ಹೊಸೆಯುತ್ತ ನೋಡಿದಳು. ಅತಿಥಿಗೃಹದ ಮಂದ ಬೆಳಕಿನಲ್ಲಿ

ದೂಡವನೋ! ಆಕೆಯ ಮೇಲೆರಗಿದ್ದ. ಗಂಡನ ಮೀಸಲಿಗೆ ಕೈ ಹಾಕಿದ್ದ. ಆ ಕಟುಹಿಡಿತದಲ್ಲಿ ಜಾನಕಿ ವಿಲವಿಲನೇ ಒದ್ದಾಡಹತ್ತಿದಳು. ಆ ರಾಕ್ಷಸ ಬಿಡಬೇಕಲ್ಲ! ಆಕೆಯನ್ನು ಅನಾಮತ್ತಾಗಿ ಎತ್ತಿ ಮಂಚದ ಮೇಲೆ ಹಾಕಿದ. ಎರಡೂ ಕೈಗಳನ್ನು ಒತ್ತಿ ಹಿಡಿದು ಆಕೆಯ ಮುಖಕ್ಕೆ ಮುಖ ಇಟ್ಟ. ಗಬ್ಬು ವಾಸನೆ. ಅಲಗಿನಂಥ ಮೀಸೆಯ ತಿವಿತ. ಆತ ಧರಿಸಿದ್ದ ವಾಸಕೋಟು ಇನ್ನೂ ಬಿಚ್ಚಿರಲಿಲ್ಲ. ಅದರಿಂದ ಆತ ಯಾರು ಎಂಬುದು ಗುರುತಿಸಲು ಜಾನಕಿಗೆ ಕಷ್ಟವಾಗಲಿಲ್ಲ. ತನ್ನ ಈ ಸನ್ಮಾನಕ್ಕಾಗಿ ಹಗಲಿರುಳು ಓಡಾಡಿ ಇಷ್ಟೆಲ್ಲ ವ್ಯವಸ್ಥೆ ಮಾಡಿದ್ದ ಮರಿ ಪುಢಾರಿಯಾತ. ಆಗಾಗ ಮನೆಗೆ ಬಂದು ತನ್ನ ಅತ್ತೆ-ಮಾವಂದಿರಿಗೆ ಆಶಾಗೋಪುರ ತೋರಿಸಿ ಕನಸಿನ ಲೋಕದಲ್ಲಿ ತೇಲಿಸಿಕೊಂಡು ಹೋಗುತ್ತಿದ್ದ. ಸರಕಾರದಿಂದ ಜಾನಕಿಯ ಹೆಸರಿಗೆ ಏನೇನೋ ಮಾಡಿಸಿಕೊಡುವುದಾಗಿ ಆಮಿಷ ಒಡ್ಡಿ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಂಡು ಜಾನಕಿಯ ಮೇಲೆ ಕೈಯಾಡಿಸುವ ಅವಕಾಶಕ್ಕಾಗಿ ಕಾದುಕೊಂಡಿದ್ದ. ಈ ಸಮಾರಂಭವನ್ನು ಏರ್ಪಡಿಸುವಲ್ಲಿ ಅವನೇ ಸೂತ್ರಧಾರನಾಗಿದ್ದ. ಎಷ್ಟೋ ದಿನಗಳಿಂದ ಕಾದುಕೊಂಡಿದ್ದ ಅವಕಾಶ ಆತನಿಗೆ ಈಗ ಲಭಿಸಿತ್ತು. ಇಂಥ ಅವಕಾಶವನ್ನು ಆತ ಕಳೆದುಕೊಂಡಾನೆಯೆ?

ತನ್ನ ಬಾಹುಗಳಲ್ಲಿ ಜಾನಕಿಯನ್ನು ಒತ್ತಿ ಹಿಡಿದು ಆಕೆಯ ಸೆರಗೆಳೆದು ಎದೆಯ ಮೇಲೆ ಕೈಯಾಡಿಸುತ್ತಿದ್ದ. ತೊಡೆಸಂದಿಗೆ ತನ್ನ ಕಾಲು ತೂರಿ ಹಿಂಸಿಸಹತ್ತಿದ. ಆಕೆಯ ಜಡೆ ಹಿಡಿದು ಜಗ್ಗಿ ಮುಖ ತನ್ನ ಕಡೆಗೆ ಮಾಡಿಕೊಂಡು ಕಚ್ಚಲು ಬಾಯಿಹಾಕಿದ. ಬೆಕ್ಕಿನ ಪಂಜಾದಲ್ಲಿ ಸಿಲುಕಿದ ಇಲಿಯಂತಾಗಿತ್ತು ಆಕೆಯ ಸ್ಥಿತಿ. ಸಹಾಯಕ್ಕಾಗಿ ಒದರ್‍ಯಾಡಿದಳು, ಚೀರ್‍ಯಾಡಿದಳು. ಭೂತಬಂಗಲೆಯಂಥ ಆ ಸೂಟಿನ ಬಾಗಿಲು ತೂರಿಕೊಂಡು ಆಕೆಯ ಕೂಗು ಹೊರಗೆ ಹೋಗಲಿಲ್ಲ. ವಿಲವಿಲನೇ ಒದ್ದಾಡಿದಳು. ದ್ರೌಪದಿಯನ್ನು ಕಾಪಾಡಿದಂಥ ಯಾವ ಭಗವಂತನೂ ಆಕೆಯ ನೆರವಿಗೆ ಬರಲಿಲ್ಲ. ಇನ್ನೇನು! ಹುಲಿಯ ಬಾಯಿಗೆ ಸಿಕ್ಕ ಹುಲ್ಲೆಯಂತೆ ಸೋಲುವುದರಲ್ಲಿದ್ದಳು. ಆದರೆ...

ಅದು ಯಾವ ಮಾಯದಲ್ಲಿಯೋ ಗೊತ್ತಿಲ್ಲ. ಜಾನಕಿ ಕಿಟಾರನೆ ಕಿರುಚಿಕೊಂಡಳು. ಆಕೆಯಲ್ಲಿ ಅದೆಲ್ಲಿಂದ ಶಕ್ತಿ ಬಂದಿತೋ, ಒಮ್ಮೆಲೆ ಮೊಣಕಾಲು ಮೇಲೆತ್ತಿ ಆತನ ಕಿಬ್ಬೊಟ್ಟೆಗೆ ಬಲವಾಗಿ ಒದ್ದಳು. ಅದರಿಂದ ಆತನ ಮರ್ಮಾಂಗಕ್ಕೆ ಪೆಟ್ಟು ಬಿದ್ದಿತೆಂದು ಕಾಣುತ್ತದೆ. ಆತನ ಜೀವಾಳವೆಲ್ಲ ಹಿಂಡಿದಂತಾಗಿ, ''ಯಪ್ಪೋ! ರಂಡಿ! ಛಿನಾಲೀ! ಭೋಸುಡಿ!'' ಎಂದು ಆರ್ತನಾದದಿಂತ ಕಿರುಚಿದ. ಆತನ ಹಿಡಿತ ಸಡಿಲಾಯಿತು. ಮರುಕ್ಷಣವೇ ಆಕೆ ಆತನ ಬಾಹುಪಾಶದಿಂದ ಬಿಡಿಸಿಕೊಂಡು ದೂರ ಸರಿದಳು. ರೋಷಗೊಂಡ ಸಿಂಹಿಣಿಯಂತೆ ಭುಸುಗುಡುತ್ತ ಆತನನ್ನು ತಿಂದುಹಾಕುವಂತೆ ನೋಡಹತ್ತಿದಳು. ಆಕೆಯ ಕಣ್ಣಿಂದ ಬೆಂಕಿ ಕಿಡಿಗಳು ಚಿಮ್ಮುತ್ತಿದ್ದವು. ಬಿಚ್ಚಿಹೋದ ಸೀರೆಯ ನೆರಿಗೆಗಳನ್ನು ಮುದ್ದೆಮಾಡಿ ಸಿಗಿಸಿಕೊಂಡಳು. ಬಿಚ್ಚಿದ ಕೂದಲನ್ನು ಹಾಗೇ ಹಿಂದಕ್ಕೆ ಹಾಕಿಕೊಂಡಳು. ''ಏ ಹಾಟ್ಯಾ! ನನಗ ಏನಂತ ತಿಳಿದಿದ್ದೀ? ನೀ ಎಂಥಾ ಖೈಂ ಬೀಜದಾಂವ ಅಂತ ನನಗೆ ಎಂದೋ ತಿಳಿದಿತ್ತು. ಆದರ ಇಷ್ಟರತನಕ ಬರ್ತಿ ಅಂತ ಅನ್ನಿಸಿದಿಲ್ಲ. ಇದಕ್ಕೇ ಕಾಯ್ಕೊಂಡಿದ್ದೇನೆಲೆ ಪಾಂಚಾಟ?'' ಎಂದು ಸುಧಾರಿಸಿಕೊಂಡು ಬಾಗಿಲಿನ ಕಡೆಗೆ ದಾಪುಗಾಲು ಇಟ್ಟಳು. ಅಷ್ಟೊತ್ತಿಗೆ ಆ ರಾವಣ ಸ್ವಲ್ಪ ಸುಧಾರಿಸಿಕೊಂಡು ಮತ್ತೆ ಅವಳ ಮೇಲೆ ಎರಗಲು ಮುಂದಾದ. ಹಾವನ್ನು ಕೆಣಕಿ ಬಿಡಬಾರದು. ಬಿಟ್ಟರೆ ಮುಂದೆ ಅಪಾಯ ತಪ್ಪದು ಎಂದು ನಂಬಿದವನು ಆತ. ಏನಾದರಾಗಲಿ, ಈ ದಿನ ಈ ಛಿನಾಲೀನ ಹಾಗೇ ಬಿಡಬಾರದು ಎಂದು ನಿರ್ಧರಿಸಿರುವವನಂತೆ ಆತ ಆಕೆಯ ಕಡೆಗೆ ಹೆಜ್ಜೆ ಹಾಕಿದ. ಅಷ್ಟರಲ್ಲಿ ಬಾಗಿಲು ಬಡಿದ ಸದ್ದಾಯಿತು.

ಸದ್ದು ಜೋರಾಯಿತು. ಧಡಧಡನೆ ಯಾರೋ ಬಾಗಿಲು ಬಡಿಯುತ್ತಿದ್ದರು.

''ಬಾಗಿಲ ತೆಗಿರಿ... ಬಾಗಿಲ ತೆಗಿರಿ...''

ಎರಗಿ ಬಂದ ರಾವಣನ ಕೈಗೆ ಸಿಗದೇ ಜಾನಕಿ ಚಂಗನೇ ಬಾಗಿಲ ಹತ್ತಿರಕ್ಕೆ ಹಾರಿದಳು. ಕೈಗೆ ಎಟುಕದ ಬಾಗಿಲಿನ ಟಾವರ್ ಬೋಲ್ಟನ್ನು ಯಾವ ಮಾಯೆಯಲ್ಲಿ ತೆಗೆದಳೋ ಗೊತ್ತಿಲ್ಲ.

ಬಾಗಿಲು ತೆಗೆಯಿತು.

ಜಾನಕಿ ಗರ ಬಡಿದವಳಂತೆ ತಬ್ಬಿಬ್ಬಾಗಿ ನಿಂತಳು. ಆಕೆಯ ಬಾಯಿಯಿಂದ ಮಾತೇ ಹೊರಡಲಿಲ್ಲ. ಮನಸ್ಸಿನ ಸ್ಥಿರತೆಯನ್ನು ಕಳೆದುಕೊಂಡಿದ್ದ ಆಕೆಗೆ ಭ್ರಮೆ ಆವರಿಸಿತು. ಆ ಭ್ರಮೆಯಲ್ಲಿ ಆಕೆ ಕುಸಿದುಬೀಳುವುದರಲ್ಲಿದ್ದಳು. ಬಾಗಿಲಲ್ಲಿ ಬಂದು ನಿಂತಿದ್ದ ತುಳಸೀರಾಮ ಇದನ್ನೆಲ್ಲ ನೋಡಿದ.

ಆತ ಮುಂದೆ ಬಂದು ಜಾರಿಬೀಳುತ್ತಿದ್ದ ಆಕೆಯನ್ನು ಕೈ ಹಿಡಿದು ಎತ್ತಿಕೊಂಡ. ಗಂಡ ರಾಮಚಂದ್ರನ ನಿಡಿದಾದ ತೋಳುಗಳೇ ತನ್ನನ್ನು ಎತ್ತಿಕೊಳ್ಳುತ್ತಿವೆ ಎಂಬ ಭಾವನೆ ಜಾನಕಿಯಲ್ಲಿ ಉಂಟಾಯಿತು.

''ವೈನಿ... ಅಲ್ಲ!... ಅಲ್ಲ! ಜಾನಕಿ; ಅಣ್ಣ ಸತ್ತಿಲ್ಲ ಅಂತ ತಿಳ್ಕೊ. ಅಂವನ ಜಾಗದಾಗ ನಾ ಇದ್ದೀನಿ'' ಎಂದು ಹೇಳಿ ತುಳಸೀರಾಮನು ಜಾನಕಿಯನ್ನು ಎದೆಗೆ ಅಪ್ಪಿಕೊಂಡ. ಜಾನಕಿಯ ನರನಾಡಿಗಳೆಲ್ಲ ಶಿಥಿಲಗೊಂಡವು. ರಾವಣನ ಕೈಯಿಂದ ಪಾರಾದ ನೆಮ್ಮದಿಯಿಂದಲೋ ಅಥವಾ ಗಂಡನು ರಣರಂಗಕ್ಕೆ ಹೋದಾಗಿನಿಂದ ಇಂಥ ಸಮರ್ಪಣೆಯ ಕ್ಷಣ ಆಕೆಯ ಬದುಕಿನಲ್ಲಿ ಬಂದಿರಲಿಲ್ಲವಾದ್ದರಿಂದಲೋ ಆಕೆ ತನ್ನನ್ನು ತಾನು ತುಳಸೀರಾಮನ ಆ ಬಿಗುವಾದ ಅಪ್ಪುಗೆಗೆ ಸಮರ್ಪಿಸಿಕೊಂಡಳು. ಆತನ ಎದೆಗೆ ಆಕೆಯ ಎದೆ ಬೆಸೆದುಕೊಂಡಿತ್ತು. ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯುತ್ತಿತ್ತು. ''ತುಳಸೀ... ತುಳಸೀ...'' ಎಂದಷ್ಟೇ ಉಸಿರು ನುಡಿಯುತ್ತಿತ್ತು. ಯಾಕೆಂದರೆ ಮಾತು ಮೂಕಾಗಿತ್ತು. ಅದೇನು ತನ್ನ ಕನಸೋ ನನಸೋ ಎಂಬುದು ಆಕೆಯ ಅರಿವಿಗೆ ಬರಲಿಲ್ಲ. ಮೈಮರೆತು ಕುಸಿದುಬೀಳುವುದರಲ್ಲಿದ್ದಳು. ತುಳಸೀರಾಮ ಆಕೆಯನ್ನು ಎತ್ತಿ ಹಿಡಿದ.

ಜಾನಕಿಯ ಮೇಲೆ ಎರಗಲು ಬಂದಿದ್ದ ಆ ಹದ್ದು ಯಾವಾಗ ಕಾಲು ಕಿತ್ತಿತೋ ಗೊತ್ತಾಗಲಿಲ್ಲ.

**ಪ್ರೊ|| ಭಾಲಚಂದ್ರ ಜಯಶೆಟ್ಟಿ**
೧ಸಿ-೩೦೨, ಎಕೆಎಂಇ ಹಾರ್ಮೊನಿ, ಔಟರ್‌ರಿಂಗ್‌ರೋಡ್
ಬೆಳ್ಳಂದೂರು, ಬೆಂಗಳೂರು - ೫೬೦೧೦೩

ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಡಾ|| ಡಿ. ಎಂ. ನಂಜುಂಡಪ್ಪ ವರದಿಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಬೇಕು. ಹಿರೇಹಳ್ಳ, ಬೆಣ್ಣೆತೋರಾ, ಕಾರಂಜ ನೀರಾವರಿ ಯೋಜನೆಗಳನ್ನು ಶಕ್ತಿಯುತಗೊಳಿಸಬೇಕು. ಮುನಿರಾಬಾದ್ ಬಳಿಯ ತುಂಗಭದ್ರಾ ಜಲಾಶಯದಲ್ಲಿ ಸಂಗ್ರಹವಾಗಿರುವ ಸುಮಾರು ೩೦ ಟಿ.ಎಂ.ಸಿ. ಪ್ರಮಾಣದ ಹೂಳು ತೆಗೆಸಬೇಕು ಇಲ್ಲವೇ, ಮಳೆಗಾಲದಲ್ಲಿ ನದಿ ಮೂಲಕ ಆಂಧ್ರಕ್ಕೆ ವ್ಯರ್ಥವಾಗಿ ಹರಿದುಹೋಗುವ ನೀರನ್ನು ಹಿಡಿದಿಡಲು ಬಚಾವತ್ ಆಯೋಗದ ತೀರ್ಪಿನಂತೆ ಸಮಾನಾಂತರ ಜಲಾಶಯಗಳನ್ನು ನಿರ್ಮಿಸಬೇಕು.

**ಮಂಜುನಾಥ ಡಿ. ಡೊಳ್ಳಿನ**

# ಪ್ರತ್ಯೇಕತೆಯ ಕೂಗಿಗೆ ಪರಿಹಾರವೇನು ?

**ನಾ**ಡಿನ ಅಭಿವೃದ್ಧಿಯ ವಿಷಯದಲ್ಲಿ ತಾರತಮ್ಯವಾಗುತ್ತಿದೆ ಎಂಬ ಆರೋಪ ಇಂದು, ನಿನ್ನೆಯದಲ್ಲ. ಪ್ರಾದೇಶಿಕ ಅಸಮತೋಲನಕ್ಕೆ ಹಲವಾರು ಚಾರಿತ್ರಿಕ ಕಾರಣಗಳಿವೆ. ರಾಜ್ಯದ ಉತ್ತರ ಭಾಗದಲ್ಲಿನ ಹೈದರಾಬಾದ್ ಕರ್ನಾಟಕ ಹಾಗೂ ಮುಂಬಯಿ ಕರ್ನಾಟಕ ಪ್ರದೇಶಗಳಲ್ಲಿ ಆಗಾಗ್ಗೆ ಪ್ರತ್ಯೇಕ ರಾಜ್ಯದ ಕೂಗು ಕೇಳಿಬರುತ್ತಿರುವದಕ್ಕೆ ಅಧಿಕಾರದ ಕೇಂದ್ರಸ್ಥಾನ ಬೆಂಗಳೂರು ಭಾಗದಿಂದ ಸಮರ್ಪಕವಾಗಿ ನ್ಯಾಯ ದೊರೆಯುತ್ತಿಲ್ಲವೆಂಬ ಮನೋಭಾವ ಇಲ್ಲಿನ ಜನರಲ್ಲಿ ಉಂಟಾಗಿರುವದೇ ಪ್ರಮುಖ ಕಾರಣವಾಗಿದೆ. ನಿಜಾಮ್‌ಶಾಹಿ ಆಡಳಿತಕ್ಕೊಳಪಟ್ಟಿದ್ದ ಮೊಗಲಾಯಿ ನಾಡು ಭಾಗಗಳು ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯಿಂದ ಹೊರಬರಲು ಹೆಣಗಾಡಬೇಕಾಗಿದೆ. ಈ ಭಾಗ ಹಿಂದುಳಿಯಲು ಇರುವ ಕಾರಣಗಳು ಸ್ಪಷ್ಟವಾಗಿದ್ದರೂ, ಅಭಿವೃದ್ಧಿಯಲ್ಲಿನ ತಾರತಮ್ಯ ನಿವಾರಿಸಲು ಕೈಗೊಂಡ ಕಾರ್ಯಗಳು ನಿರೀಕ್ಷಿತ ಯಶಸ್ಸು ಕಾಣದಿರುವದಕ್ಕೆ ರಾಜಕೀಯ ಇಚ್ಛಾಶಕ್ತಿಯೇ ಪ್ರಮುಖ ಕೊರತೆ ಎನ್ನಬಹುದು.

ತಮ್ಮ ಪ್ರತಿಯೊಂದು ಬೇಡಿಕೆಗಳ ಈಡೇರಿಕೆಗೂ ಬೀದಿಗಿಳಿದು ಹೋರಾಡಲೇ ಬೇಕಾದ ಸ್ಥಿತಿಯು ಇಲ್ಲಿನ ಜನರಲ್ಲಿ ದಿನೇ ದಿನೇ ಹತಾಶಭಾವವನ್ನು ಬೆಳೆಸುತ್ತಿದೆ. ಪ್ರತಿಯೊಂದಕ್ಕೂ ಬೆಂಗಳೂರಿನತ್ತ ಮುಖಮಾಡಿ ಅಂಗಲಾಚಬೇಕಾದ ದೈನೇಸಿ ಸ್ಥಿತಿಯಿಂದ ಹೊರಬರಲು – ತಾವು ಅಖಂಡ ಕರ್ನಾಟಕದಿಂದ ಪ್ರತ್ಯೇಕಗೊಳ್ಳುವದೊಂದೇ ಪರಿಹಾರ ಎನ್ನುವ ಭಾವನೆ ಮೂಡುತ್ತಿದೆ. ಹೈದರಾಬಾದ್ ವಿಮೋಚನೆ, ಭಾಷಾವಾರು ಪ್ರಾಂತ್ಯ ರಚನೆ, ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ನೆಲದಿಂದಲೇ ಇಂದು ಕನ್ನಡ ನಾಡನ್ನು ಒಡೆಯುವ ಕೂಗು ಕೇಳಿಬರುತ್ತಿರುವದರ ಹಿಂದೆ ಇರುವ ಆ ಭಾಗದ ಜನರ ಹತ್ತು ಹಲವು ನೋವು-ಸಮಸ್ಯೆಗಳಿವೆ. ಇವುಗಳಿಗೆ ಪರಿಣಾಮಕಾರಿಯಾಗಿ ಸ್ಪಂದಿಸಿ ಹೈದರಾಬಾದ್ ಕರ್ನಾಟಕದ ಜನರೂ ಕನ್ನಡಮ್ಮನ ಮಕ್ಕಳೇ; ಅವರು ಮಲತಾಯಿ ಕುಡಿಗಳಲ್ಲ ಎನ್ನುವ ಭರವಸೆಯನ್ನು ತುಂಬಿದರೆ ಮಾತ್ರ ಪ್ರತ್ಯೇಕತೆಯ ಕೂಗನ್ನು ಕರಗಿಸಬಹುದು. ಇಲ್ಲವಾದಲ್ಲಿ ಅದು ಮತ್ತಷ್ಟು ಗಟ್ಟಿಗೊಳ್ಳುತ್ತ ಹೋಗುವ ಸಾಧ್ಯತೆಗಳನ್ನು ಅಲ್ಲಗಳೆಯಲಾಗದು.

ಭಾರತದೇಶಕ್ಕೆ ೧೯೪೭ರ ಆಗಸ್ಟ್ ೧೫ರಂದು ಸ್ವಾತಂತ್ರ್ಯ ದೊರಕಿತು. ಹೈದರಾಬಾದ್ ನಿಜಾಮ್‌ಶಾಹಿ ಆಡಳಿತಕ್ಕೊಳಪಟ್ಟಿದ್ದ ಪ್ರಾಂತ್ಯವು ಸ್ವಾತಂತ್ರ್ಯದ ಸಂಭ್ರಮ ಆಚರಿಸಲು ಮತ್ತೆ ಒಂದು ವರ್ಷ ಕಾಯಬೇಕಾಯಿತು. ಹೀಗೆ ಸ್ವಾತಂತ್ರ್ಯೋತ್ತರ ಕಾಲಘಟ್ಟದ ಮೊದಲ ಹೆಜ್ಜೆಯಲ್ಲಿಯೇ ಹಿಂದುಳಿದಿದ್ದ ಈ ಪ್ರದೇಶ, ೧೯೪೮ರ ಸೆಪ್ಟೆಂಬರ್ ೧೭ರಂದು ಹೈದರಾಬಾದ್ ನವಾಬರ ಆಡಳಿತದಿಂದ ವಿಮೋಚನೆಗೊಂಡು ಭಾರತದ ಒಕ್ಕೂಟದಲ್ಲಿ ವಿಲೀನವಾಯಿತು. ತ್ರಿವರ್ಣ ಧ್ವಜ ಹಾರಿಸುವ ಅವಕಾಶವನ್ನು ಈ ಭಾಗದ ಜನ ಒಂದು ವರ್ಷ ತಡವಾಗಿ ಪಡೆದರು.

ಕರ್ನಾಟಕದ ಈಶಾನ್ಯ ಭಾಗದಲ್ಲಿರುವ ಕೊಪ್ಪಳ, ರಾಯಚೂರು, ಬೀದರ್ ಹಾಗೂ ಗುಲ್ಬರ್ಗಾ ಜಿಲ್ಲೆಗಳು ಸೇರಿದಂತೆ ನೆರೆಯ ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರದ ಕೆಲವು ಭಾಗಗಳಿಂದ ಕೂಡಿದ ಹೈದರಾಬಾದ್ ಪ್ರಾಂತ್ಯವನ್ನು ಆಳುತ್ತಿದ್ದ ನಿಜಾಮರು, ಸ್ವಾತಂತ್ರ್ಯಾನಂತರ ಭಾರತ ಒಕ್ಕೂಟದಲ್ಲಿ ಸೇರಲು ಒಪ್ಪದೇ ಪ್ರತ್ಯೇಕವಾಗಿಯೇ ತಮ್ಮ ಸ್ವತಂತ್ರ, ನಿರಂಕುಶ ಆಡಳಿತ ಉಳಿಸಿಕೊಳ್ಳಲು ಹಠ ಹಿಡಿದರು.

ಅಲ್ಲಿಯವರೆಗೂ ಬ್ರಿಟಿಷರ ವಿರುದ್ಧ ಹೋರಾಡಿದ್ದ ಈ ಭಾಗದ ಸ್ವಾತಂತ್ರ್ಯ ಯೋಧರು. ''ದೇಶದೊಳಗೆ ಮತ್ತೊಂದು ಪ್ರತ್ಯೇಕ ದೇಶ''ವಾಗುವದನ್ನು ಸಹಿಸದೇ, ಸ್ವಾಮಿ ರಮಾನಂದ ತೀರ್ಥರು, ಮುರಡಿ ಭೀಮಜ್ಜ, ಅಬ್ಬಿಗೇರಿ ವಿರುಪಾಕ್ಷಪ್ಪ, ಆಳವಂಡಿ ಶಿವಮೂರ್ತಿಗಳು, ಶಿವಪ್ಪ ನೆಲ್ಲೂರ ಮತ್ತಿತರರ ನೇತೃತ್ವದಲ್ಲಿ ಸೇರಿದಂತೆ ಸಹಸ್ರಾರು ಜನರು ಹೈದರಾಬಾದ್ ವಿಮೋಚನೆಗೆ ಮತ್ತೆ ಹೋರಾಟಕ್ಕಿಳಿದರು.

ನಿಜಾಮರ ಸೇನಾಧಿಕಾರಿ ಕಾಸೀಮ್ ರಜ್ವಿಯ ನೇತೃತ್ವದಲ್ಲಿ ನಡೆದ ರಜಾಕಾರರ ಹಾವಳಿ ಇಲ್ಲಿನ ಜನರ ನೆಮ್ಮದಿಗೆ ಭಂಗ ತಂದಿತ್ತು. ಮಹಿಳೆಯರು, ಯುವಕರು, ವಿದ್ಯಾರ್ಥಿಗಳು ನಿಜಾಮ್ ರಾಜ್ಯದ ಗಡಿಭಾಗದಲ್ಲಿ ಅಂದರೆ, ಮೊಗಲಾಯಿ ನಾಡಿನ ಅಂಚಿಗೆ ಹೊಂದಿಕೊಂಡಿರುವ, ಮುಂಬೈ ಕರ್ನಾಟಕದ ಮುಂಡರಗಿ, ಡಂಬಳ, ಗಜೇಂದ್ರಗಡ ಮೊದಲಾದ ಕೇಂದ್ರಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿಕೊಂಡು ತಮ್ಮ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡಿದರು. ೧೯೪೮ರ ಸೆಪ್ಟೆಂಬರ್ ೧೭ರಂದು ಈ ಪ್ರದೇಶ, ಅಂದಿನ ಗೃಹಸಚಿವ ಸರ್ದಾರ್ ವಲ್ಲಭಭಾಯ್ ಪಟೇಲರ ಪ್ರಯತ್ನದಿಂದಾಗಿ ಹೈದರಾಬಾದ್ ನಿಜಾಮರ ಆಳ್ವಿಕೆಯಿಂದ ವಿಮೋಚನೆಗೊಂಡು ಕರ್ನಾಟಕಕ್ಕೂ, ಭಾರತಕ್ಕೂ ಸೇರ್ಪಡೆಯಾಯಿತು.

ಹಳೇ ಮೈಸೂರು ಪ್ರಾಂತ್ಯ, ಮುಂಬಯಿ ಕರ್ನಾಟಕ ಭಾಗಗಳಿಗೆ ಹೋಲಿಸಿ ನೋಡಿದಾಗ ಹೈದರಾಬಾದ್ ಕರ್ನಾಟಕ ಪ್ರದೇಶದ ಗುಲ್ಬರ್ಗಾ, ಬೀದರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿರುವ ಶೈಕ್ಷಣಿಕ ಸೌಲಭ್ಯಗಳು, ಆಸ್ಪತ್ರೆಗಳು, ನೀರಾವರಿ ಯೋಜನೆಗಳು, ವಿಶ್ವವಿದ್ಯಾಲಯಗಳು, ಮೆಡಿಕಲ್, ಇಂಜನಿಯರಿಂಗ್ ಕಾಲೇಜುಗಳು, ರಸ್ತೆ, ರೈಲ್ವೆ, ವಿಮಾನ ಸಂಪರ್ಕಗಳು, ಕೈಗಾರಿಕೆಗಳು ಇತ್ಯಾದಿಗಳ ಸೌಲಭ್ಯಗಳಿಂದ ಎಲ್ಲ ದೃಷ್ಟಿಯಿಂದಲೂ ಹೈದರಾಬಾದ್ ಕರ್ನಾಟಕ ಭಾಗಕ್ಕೆ



ನಿರಂತರವಾಗಿ ವಂಚನೆಯಾಗಿದೆ ಎಂಬುದು ಮೊದಲ ನೋಟಕ್ಕೇ ಸ್ಪಷ್ಟವಾಗುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಂತೆಯೇ ಹಿಂದುಳಿದಿರುವ ನೆರೆಯ ಆಂಧ್ರಪ್ರದೇಶದ ತೆಲಂಗಾಣ, ಮಹಾರಾಷ್ಟ್ರದ ವಿದರ್ಭ ಪ್ರದೇಶಗಳಿಗೆ ಈಗಾಗಲೇ ಸಂವಿಧಾನದ ೩೭೧ನೇ ವಿಧಿಯಡಿ ಶಿಕ್ಷಣ, ಉದ್ಯೋಗ ಮತ್ತಿತರ ವಿಶೇಷ ಸೌಕರ್ಯಗಳನ್ನು ಕಲ್ಪಿಸಲಾಗಿದೆ. ಆದರೆ ನಮ್ಮವರ ಇದೇ ಬೇಡಿಕೆಯನ್ನು ಕೇಂದ್ರ ಸರ್ಕಾರದ ಮುಂದೆ, ನ್ಯಾಯಾಂಗದ ಮುಂದೆ ಸಮರ್ಥವಾಗಿ ಪ್ರತಿಪಾದಿಸುವ ಇಚ್ಛಾಶಕ್ತಿಯ ಅಭಾವದಿಂದ ಸಂವಿಧಾನದ ೩೭೧ನೇ ವಿಧಿಗೆ ತಿದ್ದುಪಡಿ ತಂದು ತಮ್ಮ ಪ್ರದೇಶವನ್ನು ಅದರ ವ್ಯಾಪ್ತಿಗೆ ಸೇರಿಸಬೇಕೆಂಬ ಹೈ.ಕ. ಜನರ ಬೇಡಿಕೆ ಅರಣ್ಯರೋದನವಾಗುತ್ತಿದೆ.

ಸಂವಿಧಾನದ ೩೭೧ನೇ ವಿಧಿಗೆ ತಿದ್ದುಪಡಿ ತಂದ ಹೊರತು ಹೈದರಾಬಾದ್ ಕರ್ನಾಟಕ ಭಾಗದ ಉದ್ಯೋಗಾವಕಾಶಗಳು ಅನ್ಯರ ಪಾಲಾಗುವದನ್ನು ತಪ್ಪಿಸಲು ಸಾಧ್ಯವಿಲ್ಲ.

ಈ ಪ್ರದೇಶದ ಅಭಿವೃದ್ಧಿಗೆ ವಿಶೇಷ ಆದ್ಯತೆ ನೀಡುವ ಸಲುವಾಗಿಯೇ ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯನ್ನು ಅಸ್ತಿತ್ವಕ್ಕೆ ತರಲಾಗಿದೆ. ಇಲ್ಲಿನ ಜನಪ್ರತಿನಿಧಿಗಳು ಸುಲಭವಾಗಿ ಕೈಗೆಟುಕುವ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಹೆಚ್.ಕೆ.ಡಿ.ಬಿ) ಅನುದಾನ ತರುವದಕ್ಕೆ ತಮ್ಮ ಕಾರ್ಯವನ್ನು ಸೀಮಿತಗೊಳಿಸಿಕೊಳ್ಳುತ್ತಿರುವದರಿಂದ ವಿವಿಧ ಯೋಜನೆಗಳಡಿಯಲ್ಲಿ ದೊರೆಯಬಹುದಾದ ಮಹತ್ವದ ಸೌಕರ್ಯಗಳತ್ತ ಗಮನ ಹರಿಸುತ್ತಿಲ್ಲ ಎಂಬ ಆರೋಪ ಕೇಳಿ ಬರುತ್ತಿದೆ.

ಉರ್ದು ಭಾಷೆಯ ದಟ್ಟ ಪ್ರಭಾವವಿರುವ ಈ ಭಾಗಕ್ಕೆ ಇಂಗ್ಲಿಷ್ ಶಿಕ್ಷಣ ಬಂದುದೇ ತಡವಾಗಿ. ಶಿಕ್ಷಣದಲ್ಲಿ ಹಿಂದುಳಿಯಲು ಇದೂ ಕೂಡ ಪ್ರಮುಖ ಕಾರಣಗಳಲ್ಲೊಂದು.

ಬಳ್ಳಾರಿ ಜಿಲ್ಲೆಯು ಚಾರಿತ್ರಿಕವಾಗಿ ಹೈದರಾಬಾದ್ ನಿಜಾಮ್ ಆಡಳಿತಕ್ಕೆ ಒಳಪಡದೆ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ್ದಾಗಿದ್ದರೂ ಕೂಡ ಅಭಿವೃದ್ಧಿಯ ದೃಷ್ಟಿಯಿಂದ, ಈ ಜಿಲ್ಲೆಯನ್ನು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ಸೇರಿಸಲಾಗಿದೆ.

ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ ಎರಡನ್ನೂ ಒಳಗೊಂಡ ಸಮಗ್ರ ಉತ್ತರ ಕರ್ನಾಟಕದಲ್ಲಿ ಸಾಂಪ್ರದಾಯಿಕ ಶಿಕ್ಷಣ ನೀಡುವ ಎರಡೇ ವಿಶ್ವವಿದ್ಯಾಲಯಗಳಿವೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಗುಲ್ಬರ್ಗಾದ ಗುಲ್ಬರ್ಗಾ ವಿಶ್ವವಿದ್ಯಾಲಯಗಳನ್ನು ಹೊರತುಪಡಿಸಿದರೆ, ಉಳಿದ ಐದು ವಿಶ್ವವಿದ್ಯಾಲಯಗಳು ರಾಜ್ಯದ ದಕ್ಷಿಣ ಭಾಗದಲ್ಲಿಯೇ ನೆಲೆಗೊಂಡಿವೆ.

ಗುಲ್ಬರ್ಗಾ ವಿಭಾಗೀಯ ಕೇಂದ್ರವು, ಕೊಪ್ಪಳ ಜಿಲ್ಲೆಯಿಂದ ಸುಮಾರು ೩೦೦ ಕಿ.ಮೀ.ಗೂ ಹೆಚ್ಚು ಅಂತರದಲ್ಲಿರುವದರಿಂದ ಇಂದಿಗೂ ಕೊಪ್ಪಳದವರಿಗೆ ಉನ್ನತ ಶಿಕ್ಷಣವೆಂಬುದು ಗಗನ ಕುಸುಮವೇ ಆಗಿದೆ. ಕೊಪ್ಪಳ ಜಿಲ್ಲೆ ರಚನೆಯಾಗಿ ಹನ್ನೊಂದು ವರ್ಷಗಳು ಗತಿಸಿದರೂ ಇಲ್ಲೊಂದು ಸ್ನಾತಕೋತ್ತರ ಕೇಂದ್ರ ತೆರೆಯಬೇಕೆಂಬ ಬೇಡಿಕೆಗೆ ಇನ್ನೂ ಉನ್ನತಮಟ್ಟದಲ್ಲಿ ಮನ್ನಣೆಯೇ ಸಿಕ್ಕಿಲ್ಲ. ಕೊಪ್ಪಳ, ಬಳ್ಳಾರಿ ಹಾಗೂ ಸುತ್ತಲಿನ ಜಿಲ್ಲೆಗಳ ಕಾಲೇಜುಗಳನ್ನು ಸೇರಿಸಿಕೊಂಡು ಕೊಪ್ಪಳ - ಹೊಸಪೇಟೆ ಮಧ್ಯೆ ಒಂದು ಹೊಸ ಪ್ರತ್ಯೇಕ ವಿಶ್ವವಿದ್ಯಾಲಯನ್ನು ಸ್ಥಾಪಿಸಿ ವಿಜಯನಗರ ವಿಶ್ವವಿದ್ಯಾಲಯ ಎಂದು ನಾಮಕರಣ ಮಾಡುವ ತುರ್ತು ಅವಶ್ಯಕತೆಯಿದೆ.

ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಡಾ|| ಡಿ. ಎಂ. ನಂಜುಂಡಪ್ಪ ವರದಿಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಬೇಕು. ಹಿರೇಹಳ್ಳ, ಬೆಣ್ಣೆತೋರಾ, ಕಾರಂಜ ನೀರಾವರಿ ಯೋಜನೆಗಳನ್ನು ಶಕ್ತಿಯುತಗೊಳಿಸಬೇಕು. ಮುನಿರಾಬಾದ್ ಬಳಿಯ ತುಂಗಭದ್ರಾ ಜಲಾಶಯದಲ್ಲಿ ಸಂಗ್ರಹವಾಗಿರುವ ಸುಮಾರು ೩೦ ಟಿ.ಎಂ.ಸಿ. ಪ್ರಮಾಣದ ಹೂಳು ತೆಗೆಸಬೇಕು ಇಲ್ಲವೇ, ಮಳೆಗಾಲದಲ್ಲಿ ನದಿ ಮೂಲಕ ಆಂಧ್ರಕ್ಕೆ ವ್ಯರ್ಥವಾಗಿ ಹರಿದುಹೋಗುವ ನೀರನ್ನು ಹಿಡಿದಿಡಲು ಬಚಾವತ್ ಆಯೋಗದ ತೀರ್ಪಿನಂತೆ ಸಮಾನಾಂತರ ಜಲಾಶಯಗಳನ್ನು ನಿರ್ಮಿಸಬೇಕು.

ನೀರಾವರಿ ತಜ್ಞ ಡಾ|| ಚಿನಿವಾಲರ ಸಮಿತಿ ವರದಿಯಂತೆ, ಏಷ್ಯಾದಲ್ಲಿಯೇ ಅತಿ ಹೆಚ್ಚು ಬಾರಿ ಒಡೆದಿರುವ ತುಂಗಭದ್ರಾ ಎಡದಂಡೆ ಕಾಲುವೆಯ ಶಾಶ್ವತ ದುರಸ್ತಿಗೆ ಪ್ಯಾಕೇಜ್ ನೀಡಬೇಕು.

ಕೃಷ್ಣಾ ಬಿ. ಸ್ಕೀಮ್‌ನಲ್ಲಿ ಬರಪೀಡಿತ ಕುಷ್ಟಗಿ, ಯಲಬುರ್ಗಾ, ಕನಕಗಿರಿ ಭಾಗಗಳಿಗೆ ನೀರೊದಗಿಸುವ ಪ್ರಯತ್ನಗಳು ಪ್ರಾಮಾಣಿಕವಾಗಿ ನಡೆಯಬೇಕು.

ಕೊಪ್ಪಳ-ಬಳ್ಳಾರಿ ಮಧ್ಯೆ ಸ್ಥಾಪನೆಯಾಗುತ್ತಿರುವ ನೂರಾರು ಬೃಹತ್ ಖಾಸಗಿ ಕಾರ್ಖಾನೆಗಳಲ್ಲಿ ಸ್ಥಳೀಯರಿಗೆ ಉದ್ಯೋಗ ಸಿಗುವಂತಾಗಲು ಡಾ|| ಸರೋಜಿನಿ ಮಹಿಷಿ ವರದಿಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು. ಕೈಗಾರಿಕೆಗಳಲ್ಲಿ ಉದ್ಯೋಗ ಮಾಡಲು ಬೇಕಾದ ಅಗತ್ಯ ಶಿಕ್ಷಣ ಇಲ್ಲಿನವರಿಗೆ ಸಿಗಬೇಕಾದರೆ ಅಂತಹ ತಾಂತ್ರಿಕ ಕೋರ್ಸುಗಳನ್ನು ಇಲ್ಲಿ ಆರಂಭಿಸಬೇಕು.

ತ್ಯಾಗ, ಬಲಿದಾನಗಳಿಂದ ಅಖಂಡ ಭಾರತದಲ್ಲಿ ವಿಲೀನವಾಗಲು, ಭಾಷಾವಾರು ಪ್ರಾಂತ್ಯ ರಚನೆಯಾಗಲು ಹೋರಾಡಿದ ನೆಲದಿಂದಲೇ ಇಂದು ಪ್ರತ್ಯೇಕ ರಾಜ್ಯದ ಕೂಗು ಕೇಳಿಬರುತ್ತಿರುವದನ್ನು ತಡೆಯಲು, ಅಭಿವೃದ್ಧಿಯ ಕೆಲಸಗಳನ್ನು ಸಮರೋಪಾದಿಯಲ್ಲಿ ಕೈಗೊಂಡು ಅನ್ಯಾಯ ಸರಿಪಡಿಸುವ ಅಗತ್ಯವಿದೆ.

''ಹಸಿದ ಕೂಸಿಗೆ ಅನ್ನ ನೀಡದೆ ಕೇವಲ ಕಣ್ಣೊರೆಸಿದರೆ ಅದರ ಹೊಟ್ಟೆ ತುಂಬಿದಂತಾಗುವುದಿಲ್ಲ'' ಎಂಬುದನ್ನು ಆಡಳಿತಾರೂಢರು ಅರ್ಥಮಾಡಿಕೊಂಡರೆ ಅಖಂಡ ಕರ್ನಾಟಕ ಉಳಿಯಲು ಸಾಧ್ಯ.

**ಮಂಜುನಾಥ ಡಿ. ಡೊಳ್ಳಿನ**
ಪ್ರಸಾರ ನಿರ್ವಾಹಕರು, ಆಕಾಶವಾಣಿ, ಭದ್ರಾವತಿ, ಶಿವಮೊಗ್ಗ ಜಿಲ್ಲೆ.

## ಸುದ್ದಿ ಚಿತ್ರ



ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ದಿನಾಂಕ ೧೧-೪-೨೦೦೯ರಂದು ನವಕರ್ನಾಟಕ ಪ್ರಕಟಿಸಿರುವ ಎಸ್. ಸೀತಾರಾಮು ಅವರ 'ಬ್ಯಾಂಕ್ ವಂಚನೆಗಳು' ಮತ್ತು ಆರ್. ಪಿ. ಹೆಗಡೆ ಅವರು ಹಿಂದಿಯಿಂದ ಅನುವಾದಿಸಿರುವ 'ಕೊನೆಯ ಜಿಗಿತ' (ಲೇ. ಶಿವಮೂರ್ತಿ) ಈ ಎರಡು ಕೃತಿಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಲೇಖಕ ಫಕೀರ್ ಮುಹಮ್ಮದ್ ಕಟ್ಪಾಡಿ ಅಧ್ಯಕ್ಷತೆ ವಹಿಸಿ, ಪುಸ್ತಕ ಅನಾವರಣ ಮಾಡಿದರು. ಮುಖ್ಯ ಅತಿಥಿಯಾಗಿ ಬಿ. ಎಸ್. ಚಂದ್ರಶೇಖರ್ ಭಾಗವಹಿಸಿದ್ದರು. ಚಿತ್ರದಲ್ಲಿರುವವರು (ಎಡದಿಂದ ಬಲಕ್ಕೆ) ಸರ್ವಶ್ರೀ ಆರ್. ಪಿ. ಹೆಗಡೆ, ಬಿ. ಎಸ್. ಚಂದ್ರಶೇಖರ್, ಫಕೀರ್ ಮುಹಮ್ಮದ್ ಕಟ್ಪಾಡಿ, ಎಸ್. ಸೀತಾರಾಮು ಮತ್ತು ಆರ್. ಎಸ್. ರಾಜಾರಾಮ್

# ಮೂರು ಬಣ್ಣಗಳ ವಿಶಿಷ್ಟ ಲೇಖಕಿ ಡಿ. ಬಿ. ರಜಿಯಾ

ಡಿ. ಬಿ. ರಜಿಯಾ ಅವರು ತಮ್ಮ ಕವಿತೆಗಳ ಮೂಲಕ ಪಾರಂಪರಿಕ ಚೌಕಟ್ಟುಗಳನ್ನು ಮುರಿಯುತ್ತ ತಮ್ಮದೇ ಆಶಯ ಮತ್ತು ಅಭಿವ್ಯಕ್ತಿಯನ್ನು ನೀಡುತ್ತಾ ಬಂದ ಅಪರೂಪದ ಕವಯಿತ್ರಿ. ತನ್ನೊಳಗೆ ಇಡೀ ಸ್ತ್ರೀಲೋಕವನ್ನು ಆವಾಹಿಸಿಕೊಳ್ಳಲು ತನ್ನ ಕೃತಿಗಳಲ್ಲಿ ಹೆಣಗಾಡುವುದು ಕಾಣುತ್ತದೆ. ಇವರ ರಚನೆಗಳು ಸ್ತ್ರೀ ಪರ ಎನ್ನುವಾಗಲೇ ಅಪ್ಪನನ್ನು ಗಂಡನನ್ನು ಭಿನ್ನ, ಭಿನ್ನವಾಗಿ ನೋಡುತ್ತ ಪುರುಷಲೋಕದ ಮಾನವೀಯತೆಯನ್ನು ಮೌಲ್ಯಮಾಪನ ಮಾಡುತ್ತಾರೆ. ಕುಟುಂಬದೊಳಹೊಕ್ಕು ನೋಡುತ್ತಿದ್ದಂತೆಯೇ ಆಕೆ ಅವನ್ನೂ ದಾಟಿ ದೇಶದ ಕೋಮುವಾದ, ಧರ್ಮ, ರಾಜಕಾರಣ, ಮೊದಲಾದ ಸಾಮಾಜಿಕ ಕಟು ವಾಸ್ತವಗಳ ಕಡೆ ನಡೆದುಬಿಡುತ್ತಾರೆ. ಧರ್ಮ ಎಂಬ ದಿಗ್ಬಂಧನಗಳನ್ನೂ ತೂರೆದು ತೆರೆಸಾನನ್ನು, ಯುಗಾದಿ ಹಬ್ಬವನ್ನು ತಮ್ಮ ಕವಿತೆಗೆ ವಸ್ತುವಾಗಿಸಿಕೊಳ್ಳುತ್ತಾರೆ. ಹಾಗಾಗಿ, ಇವರ ರಚನೆಗಳನ್ನು ಕೇವಲ ಸ್ತ್ರೀವಾದಿ ಎಂದು ಗಮನಿಸದೆ ಎಲ್ಲರನ್ನು ಒಳಗೊಂಡ ಸಾಮಾಜಿಕ ನೆಲೆಯಲ್ಲಿ ಅರ್ಥೈಸಬೇಕು.

ಇವರದು ಕೇವಲ ಶುದ್ಧಾಂಗ ಕಾವ್ಯ ಮಾತ್ರವಲ್ಲ, ಜೊತೆ ಜೊತೆಗೆ ಸಾಹಿತ್ಯದಾಚೆಗಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಮನಶ್ಶಾಸ್ತ್ರೀಯ ದೃಷ್ಟಿಕೋನಗಳನ್ನೂ ಕಾಣಬಹುದಾಗಿದೆ.

''ಸೂಕ್ಷ್ಮ ಸಂವೇದನೆ ಮರಕ್ಕೆ ಎಲೆ ಚಿಗುರಿದಂತೆ ಯಾವುದೋ ವಿಷಯ ಮನದಾಳದಲ್ಲಿ ಹುದುಗಿದ ಬೀಜದಂತೆ'' ಎಂದು ತನ್ನ ಬರಹದ ಬಗ್ಗೆ ಹೇಳಿಕೊಳ್ಳುವ ಡಿ. ಬಿ. ರಜಿಯಾರವರ ಕವಿತೆಗಳಲ್ಲಿ ಎರಡು ಸ್ಪಷ್ಟ ನೋಟಗಳು ದಕ್ಕುತ್ತವೆ.

*ಮುಳ್ಳು ಬೇಲಿಯಲ್ಲಿ ಮೈತೂರಿಸಿದಂತೆ*
*ನೋಯಿಸುತ್ತವೆ*
*ಕೆಲ ನೆನಪುಗಳು*
*ಮಲ್ಲಿಗೆ ವನದಲ್ಲಿ*
*ಅಡ್ಡಾಡುವಾಗ ತೂರಿಬರುವ*
*ಘಮಘಮ ವಾಸನೆಯಂತೆ*
*ಮನದಲ್ಲಿ ಹುಲುಸಾಗಿ*
*ನವಿರೇಳಿಸುತ್ತವೆ*
*ಮತ್ತೆ ಕೆಲ ನೆನಪುಗಳು*

(ಕಣಜ, ಪು. ೪೩, ಕಳೆದುಹೋಗುತ್ತೇವೆ)

– ಹೀಗೆ ನೋವು ಮತ್ತು ಉಲ್ಲಾಸದ ನವಿರಿನ ಮೂಲಕ ಲೇಖಕಿ ತನ್ನ ಅಸ್ತಿತ್ವವನ್ನು ಮತ್ತು ಅನನ್ಯತೆಯ ಶೋಧವನ್ನು ಉದ್ದಕ್ಕೂ ನಡೆಸಿದ್ದಾರೆ. 'ಛಾಯೆ', 'ಕಳೆದುಹೋಗುತ್ತೇವೆ', 'ಋತು', 'ಮಡಿಚಿಟ್ಟ ಕೌದಿ' ಈ ರಚನೆಗಳನ್ನು ಗಮನಿಸಬಹುದು. ಈ ಕೇಂದ್ರಗಳಿಂದಲೇ ಅವರು ಕುಟುಂಬ ಮತ್ತು ಪುರುಷಪ್ರಧಾನ ಲೋಕ ಕುರಿತ ತಮ್ಮ ಸಂವೇದನೆಯನ್ನು ವಿಸ್ತರಿಸಿಕೊಂಡಿದ್ದಾರೆ.

ಕುಟುಂಬಕ್ಕೆ ಬಂದಾಗ ಲೇಖಕಿ ಅಂತರ್ಮುಖಿಯಾಗಿಯೂ ಪುರುಷಲೋಕದ ಸಮಾಜಕ್ಕೆ ತಿರುಗಿದಾಗ ಬಹಿರಂಗವಾಗಿಯೂ ವ್ಯಕ್ತಪಡಿಸುತ್ತಾರೆ. ಹಾಗಾಗಿ ಅವರ ಕುಟುಂಬ ಪ್ರಧಾನ ಕವಿತೆಗಳಲ್ಲಿ ರೂಪಕಗಳು ಮಾತಾಡುತ್ತವೆ. ಪುರುಷಲೋಕಕ್ಕೆ ಬಂದಾಗ ನವಿರು ಬಂಡಾಯದ ಬರಹ ಬೆರಗು ಹುಟ್ಟಿಸುತ್ತದೆ.

ಒಲವು ಮತ್ತು ದಾಂಪತ್ಯದ ನಡುವಿನ ಸರಸ ವಿರಸಗಳನ್ನು, ಸಂಕಟ ಮತ್ತು ಸಂಕೀರ್ಣತೆಗಳನ್ನು, ಒರೆಗೆ ಹಚ್ಚುತ್ತಲೇ ಅವು ಹೇಗೆ ಪುರುಷಪ್ರಧಾನ ಸಮಾಜ ಮತ್ತು ಪುರುಷ ಪಕ್ಷಪಾತಿ ಧರ್ಮದ ಅನನ್ಯತೆಯನ್ನೇ ಹೊತ್ತಿವೆ ಎಂಬುದನ್ನೇ ಬಹುಸೂಕ್ಷ್ಮವಾಗಿ ಹೆಣೆಯುತ್ತಾರೆ ಈ ಕವಯಿತ್ರಿ.

*ಹೇಗೆ ಬರಲಿ*
*ಇನಿಯಾ*
*ನಿನ್ನ ಬಳಿಗೆ ?*
*ರೆಕ್ಕೆ ಪುಕ್ಕಗಳ*
*ಕಟ್ಟಿಕೊಂಡು*
*ಹಕ್ಕಿಯಾಗಿ ಹಾರಿ ಬರಲೇ ?*

(ನಿರೀಕ್ಷೆ, ಪು. ೪, ಕಳೆದುಹೋಗುತ್ತೇವೆ)

– ಎಂದು ಹಕ್ಕಿಯ ರೂಪಕದ ಮೂಲಕ ಸ್ವತಂತ್ರ ಮನಸ್ಸನ್ನು ತೋರ ಬಯಸುವ ಇಲ್ಲಿನ ಒಲವು ಅಂತಿಮವಾಗುವುದು ಹೀಗೆ –

*ಬದುಕುತ್ತೇವೆ*
*ಬಯಕೆಗಳ ಸಮಾಧಿಯ ಮೇಲೆ*
*ತೃಪ್ತಿಯ ಮುಖವಾಡ ತೊಟ್ಟು*

(ಮುಖವಾಡ, ಪು. ೧೫, ನಿರೀಕ್ಷೆ)

– ಮದುವೆಯ ನಂತರ ಹೆಣ್ಣು ತನ್ನ ಮೊದಲಿನ ಸ್ವಾತಂತ್ರ್ಯವನ್ನು ಕಳೆದುಕೊಂಡು ''ಹಣ್ಣಾಗಿ, ಮಣ್ಣಾಗಿ, ಕೊನೆಗೂ ನಾನು ನಾನಾಗದೆ'' ಉಳಿವ ಸ್ಥಿತಿಗೆ ಬರುತ್ತಾಳೆ. ಪ್ರೀತಿ ಎಂದರೆ ಆಕರ್ಷಣೆ ಎಂದೂ ಆಪತ್ತೆಂದೂ ಬಗೆವ ಪುರುಷನ ಅಭಿವ್ಯಕ್ತಿಗೆ ಎದುರಾಗಿ ಆಕೆ –

*ಅನುರಾಗದ ಘನರಾಗದ*
*ಶ್ರುತಿ ತಪ್ಪದೆ ಹಾಡಿ*
*ಪ್ರೀತಿಯಲ್ಲಿ ತೊಡಿಸುವರು*
*ನಮ್ಮ ಕೈಗೆ ಬೇಡಿ* – ಎನ್ನುತ್ತಾರೆ.

(ಇವರು ನಮ್ಮವರು, ಪು. ೩, ಛಾಯೆ)

ದಾಂಪತ್ಯ ಪ್ರೇಮವನ್ನು ಆದರ್ಶ ಮತ್ತು ಕಾಲ್ಪನಿಕ ಶ್ರೇಷ್ಠತೆಯಾಗಿ ಮೆರೆವ ಪುರುಷನ ಬರಹಗಳ ನೆಲೆಯಲ್ಲಿ ರಜಿಯಾ ವಾಸ್ತವ ಸೂಕ್ಷ್ಮಗಳನ್ನು ಒರೆಗೆ ಹಚ್ಚುತ್ತಾರೆ. ಇಲ್ಲಿನ ಮತ್ತು ಅಲ್ಲಿನ ನೋಟವೇ ಭಿನ್ನ –

*ಕಡಲ ಆಚೆ ದಂಡೆಯಲ್ಲಿ*
*ಮುಗಿಲು ನೆಲವು ಒಂದಾದಂತೆ*
*ಭ್ರಮೆಗೊಳಿಸುವ ನೋಟ !*
*ದಾಂಪತ್ಯದ ಹೆಸರಿನಲ್ಲಿ*
*ಎಷ್ಟೊ ಮೈಕೂಟ*
*ಸಿಡಿದು ನಿಂತ ಮನಸುಗಳು*
*ಕಡಲಾಚೆಯ ನೋಟ*

(ಅಂತರ, ಪು. ೮, ಛಾಯೆ)

ಕುಟುಂಬದೊಳಗೆ ಮಹಿಳಾ ಬದುಕು ಎನ್ನುವುದೇ ಪುರುಷರ ಕಣ್ಣಲ್ಲಿ ಒಂದು ಹಳೆಯ 'ಮಡಿಚಿಟ್ಟ ಕೌದಿ' ಎಂದು ಸಶಕ್ತವಾದ ರೂಪಕದ ಮೂಲಕ ಲೇಖಕಿಯು ಚಿತ್ರಿಸುತ್ತಾರೆ. ಇಲ್ಲಿ ಮಡಿಚಿಟ್ಟ ಕೌದಿ ವಾಚ್ಯಾರ್ಥದ ಹಳೆಯ ಬಟ್ಟೆಗಳ ರಾಶಿಯಲ್ಲ– ಬದಲಾಗಿ

*ರಂಗುರಂಗಾದ ಮಾಸಿಹೋದ*
*ಇಷ್ಟಿಷ್ಟೆ ಚಿಂದಿಗಳ ಜೋಡಿಸಿಟ್ಟ ನೇಯ್ಗೆ*
*ದೊಡ್ಡಮ್ಮ, ಚಿಕ್ಕಮ್ಮ, ಅತ್ತೆ, ಅಕ್ಕ*
*ಉಟ್ಟ ಬಟ್ಟೆಯ ದಿಟ್ಟ ಮಿಡಿತಗಳೆ*
*ದುಮ್ಮಾನ ಸುಮ್ಮಾನಗಳ ಸರ್ವಸಾಕ್ಷಿ*
*ಭಾವಗರ್ಭದ ಅನಿರ್ವಚನೀಯ*
*ಸಹಾನುಭೂತಿ ಅಂತಃಕರಣಗಳ ತಂತುಗಳೆ*
*ಇಲ್ಲಿ ಒಬ್ಬರದೇ ಸಾಮ್ರಾಜ್ಯ ದೌರ್ಜನ್ಯವಿಲ್ಲ*

(ಮಡಿಚಿಟ್ಟಕೌದಿ, ಪು. ೧)

ಹೀಗೆ ಮಹಿಳಾ ಪರಂಪರೆಯನ್ನು ಕುಟುಂಬದ ಮೂಲಕ ಗುರ್ತಿಸುವಂತೆಯೇ ಒಂಟಿ ಬದುಕಿನ ಸಂಕಟ ಮತ್ತು ಭಾವನೆಗಳನ್ನೂ ರೂಪಕದ ಮೂಲಕವೇ ಹಿಡಿಯುತ್ತಾರೆ.

*ಈ ಒಲೆಯಲ್ಲಿ*
*ಬೆಂಕಿ*
*ಉರಿಯಲೆ ಇಲ್ಲ*
*ಮೇಲಿಟ್ಟ ಪಾತ್ರೆಯಲ್ಲಿ*
*ನನ್ನ ಹಸಿಹಸಿಭಾವನೆಗಳು*
*ಆರ್ದ್ರ ಕಾಮನೆಗಳು*
*ಹಾಗೇ ಉಳಿದಿದೆ*
*ತಣ್ಣಗೆ.*

(ಕೊರಗು, ಪು. ೧೭, ಛಾಯೆ)

ಕೌಟುಂಬಿಕ ಚೌಕಟ್ಟಿನೊಳಗೆ ಆಕೆ ಅಸಹಾಯಕಳು ಎನ್ನುವಂತಿಲ್ಲ; ಆಕೆಯ ವಿಧೇಯತೆ ಪರಾಧೀನ ಸಂಕೇತವೂ ಅಲ್ಲ; ಆಕೆಯ ಪ್ರೇಮಕ್ಕೆ ಆಕೆಯದೇ ಆದ ಸ್ವಾಭಿಮಾನವೂ ಬಂದಿದೆ.

ಶಿವಕುಮಾರ್ ಕಂಪ್ಲಿ

ಹಾಡಾಗಲೊಲ್ಲೆ
ನಿನ್ನ ಎದೆಯ
ಛಾಯೆ
ನಿನ್ನ ಕೈಗೊಂಬೆ ಕನ್ನೆ
ಮಾಯೆ (ಛಾಯೆ, ಪು. ೧೫)

ರಜಿಯಾಗೆ ಪುರುಷಾಧಿಪತ್ಯದ ಮುಖವಾಡ ಗೊತ್ತು. ಅಂತಲೇ ಈಕೆಯ ಬರಹಗಳಲ್ಲಿ ಎಚ್ಚರವಿದೆ, ಭಾವತೀವ್ರತೆಗಿಂತಲೂ ಸೂಕ್ಷ್ಮವಾದ, ಗಾಢವಾದ ಬಂಡಾಯದ ತಣ್ಣನೆಯ ಬೆಂಕಿ ಇದೆ.

ಇವರೆ ನಮ್ಮವರು
ನಮ್ಮ ಕಾಯುವವರು
ಬೇಲಿಯಾಗಿ ಸುತ್ತನಿಂತ
ನಮ್ಮ ಮೇಯುವವರು
(ಇವರೆ ನಮ್ಮವರು, ಪು. ೩, ಛಾಯೆ)

– ಹೀಗೆ ಕಾದಿಟ್ಟ ಎಚ್ಚರದೊಂದಿಗೇ ಬಂಡಾಯ ವೇಳುವ ಲೇಖಕಿಗೆ ಬೇಕಾದದ್ದು ಬಿಡುಗಡೆಯ ಬೆಳಕು. ಈ ಬೆಳಕಿಗೆ ಅಡ್ಡಿಬರುವ ತೊಡಕನ್ನು ಮತ್ತು ಅದರೊಂದಿಗೇ ಅಂಟಿಕೊಂಡ ಮೌಢ್ಯವನ್ನು ಕಳೆದುಕೊಳ್ಳಬೇಕೆನ್ನುತ್ತ ಅದಕ್ಕೆ ಬೇಕಾದ ಊರುಗೋಲಿನ ಆಸರೆಯನ್ನು ಅರಸುತ್ತ ಈಕೆ ಹೊರಡುತ್ತಾರೆ. ಇಲ್ಲಿ ಒಬ್ಬ ಮಹಿಳೆಯ 'ಸ್ವಪ್ರಜ್ಞೆ'ಗಿಂತಲೂ ಆ ಅರಿವನ್ನು ಸುತ್ತಲ ಮಹಿಳಾ ಲೋಕಕ್ಕೂ ಅದನ್ನು ಆವರಿಸಿಕೊಂಡ ಪುರುಷಲೋಕಕ್ಕೂ ಮೂಡಿಸಬೇಕೆನ್ನುವ ಆಶಯವೇ ಮುಖ್ಯವಾಗಿದೆ. ಈ ಅರಿವಿನ ಬಿತ್ತನೆಯನ್ನು ಮತ್ತು ಬೆಳದಿಂಗಳ ಅನ್ವೇಷಣೆಯನ್ನು, ಊರುಗೋಲಿನ ಆಸರೆಯ ಭಾವವನ್ನು ಇವರ ಭಿನ್ನ ಭಿನ್ನ ಇತರ ಕವಿತೆಗಳ ಎಳೆಯಲ್ಲೂ ಗುರ್ತಿಸಬಹುದಾಗಿದೆ. ಕವಿತೆ ಎನ್ನುವ ಪ್ರಕಾರ ಈ ಲೇಖಕಿಗೆ ''ಮರಕ್ಕೆ ಎಲೆ ಮೂಡಿದಷ್ಟೇ ಸಹಜವಾದದ್ದು.'' ಇಲ್ಲಿ ಚಿಗುರಿದೆ, ನಳ ನಳಿಸುವ ಬಣ್ಣವಿದೆ, ಹಣ್ಣು ಹಣ್ಣಾದ ಮಾಗುವಿಕೆಯೂ ಇದೆ. ಅಂತಲೇ ನಾನೆನ್ನುವುದು ಈಕೆ ಮೂರು ಬಣ್ಣಗಳ ವಿಶಿಷ್ಟ ಲೇಖಕಿ, ಎಂದು.

**ಶಿವಕುಮಾರ್ ಕಂಪ್ಲಿ**
ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ದೇವದುರ್ಗ ಅಂಚೆ- ತಾಲ್ಲೂಕು, ರಾಯಚೂರು ಜಿಲ್ಲೆ

# ಪ್ರೀತಿಯ ನಗೆ ಚೆಲ್ಲಿ

ಗೆಳತಿ,
ನಿನಗೊಂದು ಪ್ರೀತಿಯ ಹೂ
ಕೊಡಬೇಕೆಂಬ ಹಂಬಲದಿಂದ
ಹೂದೋಟಕ್ಕೆ ಹೋದೆ.
ಅಲ್ಲಿ!
ಹೂಗಳ ಮುಖದಲ್ಲಿ
ಪ್ರೀತಿಯೇ ಇರಲಿಲ್ಲ,
ಕಣ್ಣಲ್ಲಿ ಕೆಂಡಕಾರುತ್ತಾ
ಬುಸುಗುಡುತ್ತಿದ್ದವು



ಹೆಡೆಯೆತ್ತಿದ ಹಾವಿನಂತೆ
ವಿಷ ಹರಿಯುತ್ತಿತ್ತು
ಬಳ್ಳಿಗಳ ಮೈಯಲ್ಲಿ
ಕೆಂಪು, ಬಿಳಿ, ನೀಲಿ, ಹಳದಿ
ಬಣ್ಣಗಳಿರಲಿಲ್ಲ ಅಲ್ಲಿ
ಎಲ್ಲವೂ ಕೇಸರಿಯಾಗಿದ್ದವು
ಕೆಸರಿಲ್ಲದ ಕಮಲವಾಗಿದ್ದವು
ಬುಸುಗುಡುವ ಹಾವುಗಳಾಗಿದ್ದವು
ಹೂವನರಸುತ್ತ
ಈ ತೋಟ ಬಿಟ್ಟು
ಆ ತೋಟಕ್ಕೆ ಹೋದೆ.
ಅಲ್ಲಿ!
ಹೂದಳಗಳಲ್ಲಿ
ಬಂದೂಕುಗಳು ಬಾಯ್ದೆರೆದಿದ್ದವು
ಮೊಗ್ಗುಗಳಲ್ಲಿ
ಬಾಂಬುಗಳಿದ್ದವು
ಜೆಹಾದ್ ಕಣ್ಣುಗಳಿದ್ದವು

ಹಕ್ಕಿಗಳ ಕಲರವ
ದುಂಬಿಗಳ ಝೇಂಕಾರ
ಅಲ್ಲಿರಲಿಲ್ಲ,
ಸಿಡಿದ ಬಾಂಬುಗಳ ಸದ್ದು
ಕಿವಿಗಪ್ಪಳಿಸುತ್ತಿತ್ತು,
ಜೀವವುಳಿದರೆ ಸಾಕೆಂದು
ಬೇಲಿ ಹಾರಿ ಓಡೋಡಿ ಬಂದೆ.
ಗೆಳತಿ,
ಅಣಕಿಸಬೇಡ ನನ್ನನ್ನು
ಪ್ರೀತಿ ತುಂಬಿದ ಹೂ
ಕೊಡಲಾಗದವನೆಂದು
ನೋಡು,
ನನ್ನೆದೆಯ ಈ ತೋಟದಲ್ಲಿ
ಪ್ರೀತಿಯ ಬೀಜಗಳನ್ನು
ಬಿತ್ತಿದ್ದೇನೆ.
ನಾಳೆ,
ಹೂಗಳ ರಾಶಿಯನ್ನು
ನಿನ್ನ ಮುಂದೆ ಸುರಿಯುತ್ತೇನೆ.
ಹಾಗೆಯೇ,
ಕೊಲ್ಲುತ್ತೇನೆ ದ್ವೇಷವನ್ನು
ಪ್ರೀತಿಯ ನಗೆ ಚೆಲ್ಲಿ.

**ಹುಲಿಕಟ್ಟಿ ಚನ್ನಬಸಪ್ಪ**
[illegible]
[illegible], ಬಳ್ಳಾರಿ ಜಿಲ್ಲೆ

# ಕುವೆಂಪು ಕಾವ್ಯ ಮತ್ತು ದಲಿತ-ಬಂಡಾಯ ಕಾವ್ಯ

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**

ಕುವೆಂಪು ಕಾವ್ಯಕ್ಕೂ ದಲಿತ-ಬಂಡಾಯ ಕಾವ್ಯಕ್ಕೂ ಅನೇಕ ನೆಲೆಗಳಲ್ಲಿ ಸಾಮ್ಯತೆಯಿದೆ. ಅವುಗಳಲ್ಲಿ ಮುಖ್ಯವಾದುದು ವೈಚಾರಿಕತೆ. ಇದನ್ನು ಇನ್ನೂ ಒಂದು ಮಾತಿನಲ್ಲಿ ಹೇಳುವುದಾದರೆ ದಲಿತ-ಬಂಡಾಯದವರಿಗೆ ಹೆಚ್ಚು ಹತ್ತಿರದ ನವೋದಯ ಕವಿ ಕುವೆಂಪು ಮಾತ್ರ. ಹೀಗೆ ಕುವೆಂಪು ಮತ್ತು ದಲಿತ-ಬಂಡಾಯದ ಲೇಖಕರ ಚಿಂತನೆಗಳ ನಡುವೆ ಸಾಮ್ಯತೆಯಿದೆ. ಇದು ಪ್ರಧಾನ ನೆಲೆ. ಇದೇ ಆತ್ಯಂತಿಕ ನೆಲೆಯೂ ಅಲ್ಲ.

ಕುವೆಂಪು ಅವರು ಶೂದ್ರತ್ವದ ಹಿನ್ನೆಲೆಯಲ್ಲಿ ಬಂದವರು. ಅಂತೆಯೇ ದಲಿತ-ಬಂಡಾಯದವರು ಸಹ ಪ್ರಧಾನವಾಗಿ ಇದನ್ನೂ ಒಳಗೊಂಡು ದಲಿತ, ಸ್ತ್ರೀ ಮುಂತಾದ ಇನ್ನೂ ಅನೇಕ ಶೋಷಿತ ನೆಲೆಗಳಿಂದ ಬಂದವರು. ಹಾಗಾಗಿಯೇ ಇಬ್ಬರೂ ಸಹಜವಾಗಿ ತಮ್ಮ ಸಮುದಾಯವನ್ನು ಶೋಷಿಸುತ್ತ ಬಂದ ಶತ್ರುವನ್ನು ಕುರಿತು ಮಾತನಾಡಬೇಕಾಗುತ್ತದೆ. ಅಂತಹ ಮಾತುಗಳು ಸಹಜವಾಗಿಯೇ ಚಾರಿತ್ರಿಕ ಪ್ರಜ್ಞೆಯನ್ನು ಇಟ್ಟುಕೊಂಡು ಸಾತ್ವಿಕ ಸಿಟ್ಟನ್ನು ಪ್ರಕಟಪಡಿಸುವಂಥವೇ ಆಗಿರುತ್ತವೆ. ಇವರಿಗೆ ಕಲೆ ಎಂಬುದು ಮುಖ್ಯವಾಗಿ ಸಾಮಾಜಿಕ ವ್ಯಾಪಾರವಾಗಿರುತ್ತದೆಯೇ ವಿನಾ ಲೋಲುಪತೆಯ ವ್ಯಾಪಾರವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ 'ಗೊಬ್ಬರ'



ಕವಿತೆಯನ್ನು ಜಂಬಣ್ಣ ಅಮರಚಿಂತ ಅವರ ಈ ಕೆಳಗಿನ ಪದ್ಯದೊಂದಿಗೆ ಇಟ್ಟು ನೋಡಬಹುದಾಗಿದೆ. ಕವಿತೆ ಅಂದರೆ –

ಜಾಡಮಾಲಿಯ ಪೊರಕೆಯ ಹಾಗೆ
ಬಟ್ಟೆಯೊಗೆಯುವ ಅಗಸನ ಹಾಗೆ
ಕುಂಬಾರ ಗುಂಡಪ್ಪನ ತಿಗುರಿಯ ಹಾಗೆ
ಹೊಲೇರ ಮೂಕಪ್ಪನ ಡಪ್ಪಿಯ ಹಾಗೆ
ಕೊರವರ ಕುರಿಮ್ಯಾನ ಬಿಜಲಿಯ ಹಾಗೆ...

ಇಲ್ಲಿ ಕುವೆಂಪು ಕವಿತೆಯ ಹಾಗೂ ದಲಿತ-ಬಂಡಾಯ ಕಾವ್ಯದ ಮುಖ್ಯ ಆಶಯ ದೊರಕಿಬಿಡುತ್ತದೆ. ಕಾವ್ಯಾತ್ಮಕತೆಯೊಡನೆ ಕೆಲವೊಮ್ಮೆ ರಾಜಿಯೆನಿಸಿದರೂ ಚಿಂತನಾತ್ಮಕತೆ ಅಥವಾ ತಾವು ಒಪ್ಪಿದ ವೈಚಾರಿಕತೆಯೊಂದಿಗೆ ಎಂದಿಗೂ ರಾಜಿಯಿಲ್ಲ ಎಂಬ ನಡೆ ಇವರಿಬ್ಬರ ಕಾವ್ಯಸಮುದಾಯದಲ್ಲಿ ಕಾಣುತ್ತದೆ. ಅದನ್ನು ಕುವೆಂಪುರವರೆ ಒಂದೆಡೆ ಪದ್ಯವನ್ನಾಗಿ ಸಹ ಮಾಡುತ್ತಾರೆ :

ನನ್ನ ಕೃತಿ ಕಲೆಯಲ್ಲ
ನಾನು ಕವಿಯಲ್ಲ
ಕಲೆಗಾಗಿ ಕಲೆಯೆಂಬ
ಹೊಳ್ಳು ನೆಲೆಯಿಲ್ಲ
....................
ಮೆಚ್ಚುಗೆಯ ನನಗೆ ಕೊಲೆ
ಬದುಕುವುದೆ ನನಗೆ ಬೆಲೆ
ಸಾಧನೆಯ ಛಾಯೆ ಕಲೆ
ವಿಶ್ವಾತ್ಮವದಕೆ ನೆಲೆ
ನಿನಗದು ಚಮತ್ಕಾರ
ನನಗೋ ಸಾಕ್ಷಾತ್ಕಾರ
ಮೌನದಿಂದನುಭವಿಸು
ಕೋ ನಮಸ್ಕಾರ
ಕಲೆಯೆಂದು ಹೊಗಳುವೊಡೆ
ಕೋಟಿ ಧಿಕ್ಕಾರ

ಈ ನೆಲೆಯಲ್ಲಿ ಚಿಂತಿಸಿದ ಕವಿ ಅದನ್ನು ತಮ್ಮ ಬಹುಪಾಲು ಸಾಹಿತ್ಯ ಕೃತಿಗಳಲ್ಲಿ ಸಾಕ್ಷಾತ್ಕರಿಸಿದ್ದಾರೆ.

ವಾಸ್ತವವಾಗಿ ನವೋದಯದ ಚಿಂತನೆ ಗಿಡ-ಮರದ ಹಸಿರು, ಚಿಗುರು, ಮೊಗ್ಗು, ಹೂವು, ಚೆಲುವಿಗೆ ಪ್ರಧಾನವಾಗಿ ಸಂಬಂಧಿಸಿದೆ, ಇದು ಸಾಂಕೇತಿಕ ಮಾತೂ ಹೌದು. ಆದರೆ ಅಂತಹ ಸಂದರ್ಭದಲ್ಲಿ ಇದ್ದ ಕುವೆಂಪುರವರು ಈ ಹೊರ ಫಲಿತಗಳಿಗೆ ಕಾರಣವಾದ ಅಥವಾ ಪೋಷಣೆ ನೀಡಿದ ಗೊಬ್ಬರದ ಬಗೆಗೆ ಚಿಂತಿಸಿದ್ದಾರೆ. ಇದು ಇವರ ಒಂದು ವಿಶಿಷ್ಟ ನೆಲೆ. ಇಲ್ಲಿ ಗೊಬ್ಬರ ಎಂಬುದು ಸಾಹಿತ್ಯ ಪ್ರತಿಮೆ. ಇದು ಬೆವರಿನ ಮೂಲಕ ಪರಂಪರೆಯನ್ನು ಕಟ್ಟಿ, ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯವನ್ನು ಕುರಿತದ್ದಾಗಿದೆ. ಇಂತಹ ಪೋಷಕ ಶಕ್ತಿಗೆ ಸೃಜನಶೀಲ ವ್ಯಾಪಾರದಲ್ಲಿ, ಚರಿತ್ರೆಯ ಪುಟಗಳಲ್ಲಿ ನೆಲೆ ಇಲ್ಲ. ಇದು ಕವಿಪ್ರಜ್ಞೆ ಚಾರಿತ್ರಿಕ ನೆಲೆಯಲ್ಲಿ ಗ್ರಹಿಸಿದ್ದಾಗಿದೆ. ವರ್ತಮಾನದಲ್ಲಿ ಅದಕ್ಕೆ ಘನತೆಯನ್ನು ತರುವ ಛಲವನ್ನು ಹೊತ್ತಿದೆ. ಆದ್ದರಿಂದಲೇ ಗೊಬ್ಬರ ಎಂಬುದು ಕುವೆಂಪು ಮತ್ತು ದಲಿತ-ಬಂಡಾಯದವರ ಮುಖ್ಯ ಕವನ ಮತ್ತು ಆಶಯವಾಗಿ ಅನುರಣತವಾಗುವುದು.

ಕುವೆಂಪು ಅವರಲ್ಲಿ ಗೊಬ್ಬರ ಎಂಬುದು ಶೂದ್ರ ಸಮುದಾಯಕ್ಕೆ ಒಡ್ಡಿದ ಪ್ರತಿಮೆಯಾಗಿ ಬಂದಿದೆ. ಆದರೆ ಇದೇ ಪ್ರತಿಮೆಯ ಭಾಗವಾಗಿ ದಲಿತ-ಬಂಡಾಯದವರಲ್ಲಿ ದಲಿತರು, ಸ್ತ್ರೀಯರು, ಬೆವರನ್ನು ಹರಿಸಿ ಬಡತನದ ಬಿಸಿಲಲ್ಲಿ ಬೆಂಡಾಗಿಹೋದ ಎಲ್ಲರೂ ಕಾಣುತ್ತಾರೆ. ಈ ನೆಲೆಯಲ್ಲಿ ಇವರಲ್ಲಿ ಇದು ವರ್ಗಪ್ರಜ್ಞೆಯಾಗಿ ಕಾಣುತ್ತದೆ. ಆದರೆ ಇದು ಕುವೆಂಪು ಅವರಲ್ಲಿ ವರ್ಣಪ್ರಜ್ಞೆಯಾಗಿ ಮಾತ್ರ ಕಾಣುತ್ತದೆ.

ಕುವೆಂಪು ಅವರಿಗೆ ಬ್ರಾಹ್ಮಣ ಮತ್ತು ಶೂದ್ರ ಎಂಬ ಎರಡು ವಿರುದ್ಧ ಅಂಚುಗಳ ಸಮುದಾಯಗಳು ಎದುರಿಗಿವೆ. ಶೂದ್ರ ಸಮುದಾಯವು ಬೆವರನ್ನು ಹರಿಸಿ, ಚರಿತ್ರೆಯನ್ನು ಕಟ್ಟಿದ್ದರೂ ಅವರಿಗೆ ಸೂಕ್ತ ಸ್ಥಾನಮಾನ ಸಿಕ್ಕಿಲ್ಲ ಎಂಬ ಸಾತ್ವಿಕ ಸಿಟ್ಟು ಇವರಿಗಿದೆ. ಆದರೆ ದಲಿತ-ಬಂಡಾಯದವರಿಗೆ ಈ ವರ್ಣ ಕಲ್ಪನೆಗಿಂತ ಮಿಗಿಲಾಗಿ ವರ್ಗಪ್ರಜ್ಞೆ ಕಾಡಿದೆ. ಅತ್ಯಂತ ಕೆಳಸ್ತರದ ಜನ ಚರಿತ್ರೆಯನ್ನು ಕಟ್ಟಿದ್ದಾರೆ. ಆದರೆ ಅದರ ಬಹುತೇಕ ಫಲಿತವನ್ನು ಭೋಗಿಸಿದವರು ಯಾವುದೇ ಜಾತಿಗಳ ಮೇಲ್ವರ್ಗದ ಜನರೇ ಆಗಿದ್ದಾರೆ ಎಂಬುದು ಕಾಣುತ್ತದೆ. ಈ ನೆಲೆಯಲ್ಲಿ 'ಹಸಿವಿನಿಂದ ಸತ್ತೋರು' ಎಂದು ಮೊದಲಾಗುವ ಸಿದ್ಧಲಿಂಗಯ್ಯನವರ ಹಾಗೂ ರಂಜಾನ್ ದರ್ಗಾ ಅವರ ಕವಿತೆಗಳನ್ನು ಗಮನಿಸಬೇಕು.

ಹೀಗೆ ಕುವೆಂಪು ಅವರಲ್ಲಿ ಸಾಮಾಜಿಕ ಸಂಘರ್ಷದ ಭಾಗವಾಗಿ ವರ್ಣಪ್ರಜ್ಞೆ ಹೆಚ್ಚು ಕಾಡಿದರೆ ದಲಿತ-ಬಂಡಾಯದವರಿಗೆ ವರ್ಗ ಮತ್ತು ಜಾತಿಪ್ರಜ್ಞೆ ಹೆಚ್ಚು ಕಾಡುತ್ತದೆ. ಇಲ್ಲಿ 'ಹೆಚ್ಚು' ಎಂಬ ಪದದಿಂದ ಇವೇ ಸಂಗತಿಗಳು ಇವರಿಗೆ ಹೊರತಾದವರಲ್ಲಿಯೂ ಇದೆ ಎಂಬುದು ಸ್ಪಷ್ಟ.

ಒಟ್ಟಾರೆ ಸಾಮಾಜಿಕ ಸಂಘರ್ಷ ಎಂಬುದು ಕುವೆಂಪು

ಮತ್ತು ದಲಿತ-ಬಂಡಾಯದವರಲ್ಲಿ ಅತ್ಯಂತ ಪ್ರಧಾನ ನೆಲೆಯಾಗಿದೆ. ನವೋದಯದಲ್ಲಿ ಮೂಡಿದ ಕವಿಗೆ ಇದು ಹೇಗೆ ಸಾಧ್ಯವಾಯಿತು ಎಂಬುದು ಕುತೂಹಲಕರ ಪ್ರಶ್ನೆ. ಇವರ ಸಮಕಾಲೀನರಾದ ಬರಹಗಾರರನ್ನು ಇಷ್ಟಾಗಿ ಕಾಡಿಸದ ಈ ನೆಲೆ ಇವರಿಗೆ ಹೇಗೆ ಪ್ರಧಾನವಾಯಿತು ಎಂಬುದು ಈ ಪ್ರಶ್ನೆಯ ಸಾರ. ಇನ್ನು ದಲಿತ-ಬಂಡಾಯ ದವರಿಗಂತೂ ಇದು ಸಹಜವಾದುದೇ ಸರಿ. ಆದ್ದರಿಂದ ಕುವೆಂಪು ಸಂದರ್ಭದ ಹಿನ್ನೆಲೆಯಲ್ಲಿ ಈ ಪ್ರಶ್ನೆಯನ್ನು ಸ್ವಲ್ಪ ವಿವರಿಸಿಕೊಳ್ಳಬೇಕಿದೆ.

ಕುವೆಂಪು ಅವರು ಸಾಮಾಜಿಕ ಶ್ರೇಣೀಕರಣದ ವ್ಯವಸ್ಥೆಯಲ್ಲಿ ತೀರಾ ಅಧೋಜಗತ್ತಿನಿಂದ ಅಲ್ಲದಿದ್ದರೂ ಕೆಳಸ್ತರದಿಂದಲೇ ಬಂದವರು. ಓದು ಮತ್ತು ಅನುಭವ ದಿಂದ ಅರಿವನ್ನು ವಿಸ್ತರಿಸಿಕೊಂಡವರು. ಹಾಗಾಗಿ ಸಾಮಾಜಿಕ ವಿವೇಕ ಮತ್ತು ಪ್ರಜ್ಞೆಯೆಂಬುದು ಸಹಜವಾಗಿಯೇ ಅಲ್ಲಿ ಗರಿಗೆದರುತ್ತದೆ. ಅದರ ದಮನ ಸಾಧ್ಯವಿಲ್ಲ. ಎಷ್ಟೇ ಸವಾಲುಗಳು ಬಂದರೂ ಕಲ್ಲುಚಪ್ಪಡಿಗೆ ಸಿಕ್ಕಿದ ಗರಿಕೆ ಹುಲ್ಲು ಅದರ ಪಕ್ಕದಿಂದ ತಲೆಯೆತ್ತಿ ನಿಲ್ಲುವ ಹಾಗೆ ಆ ಪ್ರಜ್ಞೆ ಹೊರಚೆಲ್ಲಿ ಬರುತ್ತದೆ. ಹೀಗೆ ಸಾಮಾಜಿಕ ಪ್ರಜ್ಞೆಯನ್ನು ಇಟ್ಟುಕೊಂಡಿದ್ದ ಕವಿ ತನ್ನ ಕಾಲದ ಸಾಮಾಜಿಕ ಜಗತ್ತನ್ನು ಗ್ರಹಿಸಿದ್ದಾರೆ ಮತ್ತು ಅದಕ್ಕೆ ಪ್ರತಿಕ್ರಿಯಿಸಿದ್ದಾರೆ. ಅಲ್ಲದೆ ಈ ಬಗೆಯ ಸಾಮಾಜಿಕ ಕಳಕಳಿ ಇರುವವರಿಗೆ ರಾಜ್ಯ, ಭಾಷೆ, ದೇಶ ಮುಂತಾದ ಯಾವುದೇ ರಾಜಕೀಯ ಮತ್ತು ಸಾಂಸ್ಕೃತಿಕ ಗಡಿಗಳು ಬೇಲಿಗಳಾಗುವುದಿಲ್ಲ. ಅವುಗಳಾಚೆಗೆ ಪ್ರಜ್ಞೆ ಬೆಳೆದು ನಿಲ್ಲುತ್ತದೆ. ಅದು ವಾಸ್ತವವಾಗಿ ಅಂತರರಾಷ್ಟ್ರೀಯ ಪ್ರಜ್ಞೆ. ಅಂಥಲ್ಲಿ ಲೆನಿನ್, ಸಾಕ್ರೆಟಿಸ್, ಬುದ್ಧ, ಸ್ಟಾಲಿನ್, ಗಾಂಧಿ, ಅಂಬೇಡ್ಕರ್ ಮುಂತಾದವರು ಕುವೆಂಪು ಅವರಲ್ಲಿಯೇ ಅಲ್ಲದೆ ದಲಿತ-ಬಂಡಾಯ ದವರಲ್ಲಿ ಆಪ್ತರಾಗಿ ಒಡಮೂಡುತ್ತಾರೆ.

ಕುವೆಂಪು ಕವಿತೆಗಳ ಸಾಮಾಜಿಕ ನೆಲೆ ಎಂದಾಗ ಅದು ನವೋದಯದ ಇತರ ಬರಹಗಾರರಲ್ಲಿ ಇರಲಿಲ್ಲವೆಂದಲ್ಲ; ಅದು ಇತ್ತು. ಆದರೆ ಅದು ಇದ್ದುದು ಸಾಮಾಜಿಕ ಕಳಕಳಿಯ ನೆಲೆಯಲ್ಲಿ. ಆದರೆ ಅದು ಕುವೆಂಪು ಅವರಲ್ಲಿ ಇದ್ದುದು ಸಾಮಾಜಿಕ ಪ್ರಜ್ಞೆಯಾಗಿ. ಈ ಸಾಮಾಜಿಕ ಪ್ರಜ್ಞೆ ಇರುವಾತನಿಗೆ ವಿವಿಧ ಸಾಮಾಜಿಕ ನೆಲೆಗಳ ಆಳವಾದ ಅರಿವು ಇರುತ್ತದೆ. ಅದು ಕೇವಲ ಅನುಕಂಪ, ಸಹಾನುಭೂತಿ ಮುಂತಾದ ನೆಲೆಗಳಲ್ಲಿ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಕುವೆಂಪು ಅವರ ಸಾಮಾಜಿಕ ಪ್ರಜ್ಞೆ ಕೆಲಸ ಮಾಡಿದೆ. ಹಾಗಾಗಿಯೇ ಇವರ ಎದುರು ಪುರೋಹಿತಶಾಹಿ ನಗ್ನವಾದದ್ದು, ಅದರ ಹುನ್ನಾರಗಳು ಬೆತ್ತಲಾದದ್ದು. ಈ ಕೆಲಸವನ್ನು ಕುವೆಂಪು ಕಾವ್ಯೇತರ ಪ್ರಕಾರಗಳಲ್ಲಿಯೂ ಹರಿತವಾಗಿಯೇ ಮಾಡಿದ್ದಾರೆ.

ಹೀಗೆ ಗಾಢ ಸಾಮಾಜಿಕ ಪ್ರಜ್ಞೆಯನ್ನು ಹೊಂದಿದ್ದ ಕುವೆಂಪು ತಮಗಿಂತ ಕೆಳಸ್ತರದ ಜನರು ಇದೇ ಶತ್ರುವನ್ನು ಗುರುತಿಸಿಕೊಂಡಾಗ ಸಹಜವಾಗಿಯೇ ಹೆಚ್ಚು ನಿಕಟರಾಗುತ್ತಾರೆ.

ಈಗಾಗಲೇ ಪ್ರಸ್ತಾಪಿಸಿದಂತೆ ಕುವೆಂಪು ಅವರು ಭಾರತದ ನವೋದಯದ ಸಂದರ್ಭದಲ್ಲಿ ಸಾಹಿತ್ಯ ರಚನೆ ಮಾಡಲು ಆರಂಭಿಸಿದವರು. ಇಲ್ಲಿ ಹೆಚ್ಚೆಂದರೆ ಅವರ ಸಾಹಿತ್ಯ ರಚನೆಯು ದಾರ್ಶನಿಕತಾವಾದಿಯು ಸಾಮಾಜಿಕ ನೆಲೆಗೆ ಸಂಬಂಧಿಸಿತ್ತು. ಇದನ್ನು ಮೀರಿ ಬೆಳೆದ, ಬರೆದ ಕುವೆಂಪು ಅವರಿಗೆ ಹಿನ್ನೆಲೆಯಾಗಿ ಎರಡು ಕಾರಣಗಳು ಇದ್ದಿರಬಹುದು ಎಂದು ಭಾವಿಸಿದ್ದೇನೆ. ಒಂದು - ಡಾ|| ಬೈರಮಂಗಲ ರಾಮೇಗೌಡ ಅವರು ತಮ್ಮ 'ರಸಸಿದ್ಧಿ' ಕೃತಿಯಲ್ಲಿ ಪುಟ ೧೧೪ರಲ್ಲಿ ಹೇಳುವಂತೆ ''ಸಾಮಾಜಿಕ ಪ್ರಜ್ಞೆಯಿಂದ ಜಾಗೃತನಾಗಿರುವ ಸಂವೇದನಾಶೀಲನಾದ ಕವಿಯ ಸೂಕ್ಷ್ಮದೃಷ್ಟಿಯಿಂದ ಯಾವ ಸಾಮಾಜಿಕ ಸಮಸ್ಯೆಯೂ ತಪ್ಪಿಸಿಕೊಳ್ಳಲಾರದು. ಹಾಗಾಗಿ ಇವರಿಗೆ ತಮ್ಮ ಸಾಮಾಜಿಕ ಜಗತ್ತಿನ ಹಾಗೂ ಇಂತಹುದೇ ಸಾಮಾಜಿಕ ಮತ್ತು ರಾಜಕೀಯ ಸವಾಲುಗಳನ್ನು ಎದುರಿಸುತ್ತಿದ್ದ ಯಾವುದೇ ಜಾಗತಿಕ ಸನ್ನಿವೇಶವು ತಮ್ಮದೇ ಆಗುತ್ತದೆ. ಅಂತಹ ವಿಶ್ವಾತ್ಮಕ ಪ್ರಜ್ಞೆ ಇವರಲ್ಲಿದೆ.'' ಇದು ಒಂದು ಕಾರಣ. ಇನ್ನೊಂದು, ಕುವೆಂಪು ಅವರು ಸಾಮಾಜಿಕ ಚಲನ-ವಲನಗಳ ಬಗೆಗೆ ಹೆಚ್ಚು ಜಾಗೃತರಾಗಿದ್ದ ಕಾರಣ ವಯಸ್ಸು ಪ್ರಯಾಣಿಸುತ್ತ ಬಂದಂತೆ ಅವರು ಸಂಧಿಸಿದ ೩೦-೪೦ರ ದಶಕದ ರಷ್ಯನ್ ಸಾಹಿತ್ಯ, ಮಾರ್ಕ್ಸ್‌ವಾದ, ಭಾರತದ ಪ್ರಗತಿಶೀಲ ಮುಂತಾದ ನೆಲೆಗಳು ಅವರನ್ನು ಕಾಡಿವೆ. ಇದರ ಪ್ರಭಾವದಿಂದಾಗಿಯೇ ಈ ಕಾಲಘಟ್ಟದಲ್ಲಿ 'ಗೊಬ್ಬರ', 'ಕಲ್ಕಿ', 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?', 'ನೂರು ದೇವರನೆಲ್ಲ ನೂಕಾಚೆ ದೂರ' ಮುಂತಾದ ಕವನಗಳನ್ನು ಒಳಗೊಂಡ 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' ಸಂಕಲನವನ್ನು ಬರೆಯಲು ಅವರಿಗೆ ಸಾಧ್ಯವಾದದ್ದು. ಈ ನೆಲೆಯಲ್ಲಿ ಕುವೆಂಪು ಅವರ ನವೋದಯ ಕಾವ್ಯ ಪ್ರಗತಿಶೀಲ ಆಯಾಮವನ್ನು ಪಡೆಯುತ್ತದೆ. ಹಾಗೆಂದು ಇವರು ಈ ಸಿದ್ಧಾಂತದ ಭಾಗವಾದ ಸಮತಾವಾದಿ ಪ್ರಭುತ್ವಕ್ಕೆ ತಮ್ಮ ಮನಸ್ಸನ್ನು ತೆರೆಯಲಿಲ್ಲ. ಇಲ್ಲಿ ಅವರು ಪ್ರಜಾಪ್ರಭುತ್ವವಾದಿ ರಾಷ್ಟ್ರ ವ್ಯವಸ್ಥೆಯನ್ನೇ ಒಪ್ಪುತ್ತಾರೆ. ಇವರು ಪ್ರಗತಿಶೀಲರಿಗಿಂತ ಭಿನ್ನವಾದುದು, ಈ ಕಾರಣದಿಂದಾಗಿಯೇ. ಸಮತಾವಾದ ದಲ್ಲಿ ಪ್ರಜಾಪ್ರಭುತ್ವದ ಅಂಶವು ಗೌಣ ಎಂಬ ತಪ್ಪು ಕಲ್ಪನೆ ಬಹಳ ಹಿಂದಿನಿಂದಲೂ ಬಂದಿರುವುದೇ ಆಗಿದೆ.

ಸಾಮಾಜಿಕ ಸಂಘರ್ಷ ಎಂಬುದು ಕುವೆಂಪು ಮತ್ತು ದಲಿತ-ಬಂಡಾಯದವರಲ್ಲಿ ಅತ್ಯಂತ ಪ್ರಧಾನ ನೆಲೆಯಾಗಿದೆ. ನವೋದಯದಲ್ಲಿ ಮೂಡಿದ ಕವಿಗೆ ಇದು ಹೇಗೆ ಸಾಧ್ಯವಾಯಿತು ಎಂಬುದು ಕುತೂಹಲಕರ ಪ್ರಶ್ನೆ. ಇವರ ಸಮಕಾಲೀನರಾದ ಬರಹಗಾರರನ್ನು ಇಷ್ಟಾಗಿ ಕಾಡಿಸದ ಈ ನೆಲೆ ಇವರಿಗೆ ಹೇಗೆ ಪ್ರಧಾನವಾಯಿತು ಎಂಬುದು ಈ ಪ್ರಶ್ನೆಯ ಸಾರ. ಇನ್ನು ದಲಿತ-ಬಂಡಾಯದವರಿಗಂತೂ ಇದು ಸಹಜವಾದುದೇ ಸರಿ.

ಏನೇ ಆದರೂ ತಮ್ಮ ಜೀವಮಾನದ ಪ್ರಗತಿಶೀಲ ನಿಲುಗಡೆಯಲ್ಲಿ ಸ್ವಲ್ಪ ಕಾಲ ತಂಗಿ ಇವರು ಮುಂದಕ್ಕೆ ಹೋಗಿದ್ದಾರೆ. ದಲಿತ-ಬಂಡಾಯ ಸಾಹಿತ್ಯದ ಮುಖ್ಯ ನೆಲೆಗಳಲ್ಲಿ ಸಮತಾವಾದವೂ ಒಂದಾಗಿದೆ. ಸಿದ್ದಲಿಂಗಯ್ಯ, ಬರಗೂರು, ರಂಜಾನ್ ದರ್ಗಾ, ಸಿದ್ಧನಗೌಡ ಪಾಟೀಲ ಮುಂತಾದವರ ಹಲವು ಕವಿತೆಗಳು ಇಲ್ಲಿ ಮಾತಾಡುತ್ತವೆ. ಈ ನೆಲೆಯಲ್ಲಿ ಕುವೆಂಪು ಅವರ 'ಕಲ್ಕಿ', 'ಹೊಸ ಬಾಳಿನ ಗೀತೆ' ಮುಂತಾದ ಕವಿತೆಗಳೊಡನೆ ಸಿದ್ದಲಿಂಗಯ್ಯನವರ 'ಸಾವಿರಾರು ನದಿಗಳು', 'ದಲಿತರು ಬರುವರು ದಾರಿಬಿಡಿ', ನಲ್ಲೂರು ಪ್ರಸಾದ್ ಅವರ 'ಸಂಭವಾಮಿ' ಮುಂತಾದ ಕವಿತೆಗಳನ್ನು ಜೊತೆ ಜೊತೆಗೆ ಇಟ್ಟು ನೋಡಬಹುದಾಗಿದೆ.

ಇಲ್ಲಿ ಕುವೆಂಪುರವರು ಪ್ರಭುತ್ವದ ನೆಲೆಯಿಂದಾಚೆಗಿನ ಜನತೆಯ ನೆಲೆಯಲ್ಲಿ ನಿಂತು ಚರಿತ್ರೆಯನ್ನು ನೋಡಿ ಅದನ್ನು ಕಂಡರಿಸುತ್ತಾರೆ. ಇಲ್ಲಿ ಜನತೆಯ ಚರಿತ್ರೆ ಅನಾವರಣ ಗೊಳ್ಳುತ್ತದೆ. ಸಂಭ್ರಮದ ಇನಿದನಿಗಳಿಗೆ ಎದುರಾಗಿ ಸಂಕಟದ ಧ್ವನಿಗಳು ಇಲ್ಲಿ ಕೇಳಿಬರುತ್ತವೆ. ಇದು ಜನತೆಯ ಚರಿತ್ರೆಯೂ ಹೌದು ಮತ್ತು ಜನರಿಗೆ ಕಂಡ ಚರಿತ್ರೆಯೂ ಹೌದು. ಇದು ಭಾರತದ, ಅಷ್ಟೇ ಏಕೆ ಮನುಕುಲದ, ಚರಿತ್ರೆಯ ದೊಡ್ಡ ಭಾಗ. ಇದಕ್ಕಿಂತ ಭಿನ್ನ ಚರಿತ್ರೆ ಇದ್ದರೆ ಅದು ಬೂರ್ಷ್ವಾ ಅಥವಾ ಪ್ರತಿಷ್ಠಿತ ಜನವರ್ಗದ ಚರಿತ್ರೆ ಮಾತ್ರ. ಈ ನೆಲೆಯಲ್ಲಿ ಸಮಕಾಲೀನ ಸಂದರ್ಭದ ಚರಿತ್ರೆಯ ಪಾಠಗಳನ್ನು ಅದರ ಕೃತಿಗಳ ಹುನ್ನಾರಗಳನ್ನು ಮರ್ಮ ಘಾತುಕವಾಗಿ ಬಯಲಿಗೆಳೆಯುತ್ತಾರೆ. ಈ ನೆಲೆಯಲ್ಲಿ ಕುವೆಂಪು ಅವರ 'ರೈತನ ದೃಷ್ಟಿ', 'ಕ್ರಾಂತಿಕಾಳಿ', 'ಅವತಾರ', 'ಮಾದಿಗರ ಹುಡುಗಿ', ಇಂದೂಧರ ಹೊನ್ನಾಪುರ ಅವರ 'ಕಪ್ಪು ಜನರ ಇಂಡಿಯವ್ವ ಮತ್ತು ದಲಿತ', ಜಂಬಣ್ಣ ಅಮರಚಿಂತ ಅವರ 'ಪೆಟ್ರೋಮ್ಯಾಕ್ಸ್ ಹೊತ್ತ ಕೊರವರು', ಆರ್. ವಿ. ಭಂಡಾರಿ ಅವರ 'ಇತಿಹಾಸ', ಕೆ. ಎಸ್. ನಿಸಾರ್ ಅಹಮದ್ ಅವರ 'ಹೆಣಗಳೆದ್ದು ಹಾಡಿದವು' – ಮುಂತಾದ ನೂರಾರು ಕವಿತೆಗಳು ಮಾತಾಡುತ್ತವೆ. ಇಲ್ಲಿ ಅನಾವರಣವಾಗುವ ಚರಿತ್ರೆ ಶೋಷಿತ ಸಮುದಾಯಗಳ ಮೂಲದ್ದು. ಶೋಷಕರ ಚರಿತ್ರೆಯನ್ನೇ ಚರಿತ್ರೆ ಎನ್ನುತ್ತಿರುವವರಿಗೆ ಶೋಷಿತರ ಚರಿತ್ರೆ ಅನೇಕ ಒಳನೋಟಗಳೊಂದಿಗೆ ಇಲ್ಲಿ ಕಾಣುತ್ತದೆ. ಇಲ್ಲೆಲ್ಲಾ ಪರಂಪರೆಯ ಬಗ್ಗೆ ತೀವ್ರ ಪ್ರಜ್ಞೆ ಇದೆ. ಈ ಪ್ರಜ್ಞೆಯ ಸ್ಫೋಟದಲ್ಲಿ ಸಾತ್ವಿಕ ಸಿಟ್ಟಿದೆ. ಇಂತಹ ಚರಿತ್ರೆಯ ಅನಾವರಣದಲ್ಲಿ ವಿಷಾದವೂ ಮಡುಗಟ್ಟಿದೆ. ಇದ ರೊಂದಿಗೆ ಬದಲಾಗಬೇಕಾದ ಆಶಯವೂ ಅರಳುತ್ತಿದೆ.

ಕುವೆಂಪು ಮತ್ತು ದಲಿತ-ಬಂಡಾಯದವರು ಜನತೆಯ ನೆಲೆಯಲ್ಲಿ ನಿಂತು ಮಾತಾಡಿದರು. ಆದ್ದರಿಂದಲೇ ಪುರೋಹಿತಶಾಹಿ, ಊಳಿಗಮಾನ್ಯ ಶಕ್ತಿಗಳ ಆಪ್ತರಿಗೆ ಇವರು ಅಪಥ್ಯವಾದದ್ದು.

ಒಟ್ಟಾರೆ, ಇವರಲ್ಲಿ ಜನಕೇಂದ್ರಿತ ಪ್ರಜ್ಞೆ, ಸಮಕಾಲೀನತೆ, ಸಾಮಾಜಿಕತೆ ಹರಳುಗಟ್ಟಿದೆ. ಆದ್ದರಿಂದಲೇ ಇವರ ಕವಿತೆ ಆಕಾಶ, ನಕ್ಷತ್ರ, ಹಸಿರು, ಹೊಳೆಯನ್ನು ಅರಸಿ ಊರಾಚೆಗೆ ಹರಿಯಲಿಲ್ಲ. ಬದಲಿಗೆ ಜನರ ಬದುಕಿನ ಸಮಕಾಲೀನ ನೆಲೆಗಳು ಅನಾವರಣಗೊಂಡವು. ಈ ನೆಲೆಯಲ್ಲಿ

ಸಾಂಪ್ರದಾಯಿಕ ಸಂವೇದನೆಗೆ ಹೊರತಾದ ವಾಸ್ತವವಾದಿ ಪ್ರಜ್ಞೆ ಸಮಕಾಲೀನತೆಯಲ್ಲಿ ಅರಳುತ್ತದೆ. ಆದ್ದರಿಂದಲೇ ಗಾಂಧಿ ತತ್ವದ ನುಡುತ್ತು ಆಡಂಬರಗಳ ಆಚರಣೋತ್ಸವಗಳ ಗಾಂಧಿಯ ನಡುವೆ ಅಲ್ಲಮಪ್ರಭು ಬೆಟ್ಟದೂರು ಅವರು 'ಗಾಂಧಿ' ಪದ್ಯ ಮುಖೇನ ವ್ಯತ್ಯಾಸವನ್ನು ಕಂಡದ್ದು. ಈ ನೆಲೆಯಲ್ಲಿ ಕೃಷ್ಣಮೂರ್ತಿ ಹಿಚಕಡ ಅವರ 'ಕೋಗಿಲೆ ಅಳುತ್ತಿದೆ', ಕೃಷ್ಣಮೂರ್ತಿ ಬಿಳಿಗೆರೆ ಅವರ 'ಪಂಜಾಬು', ಗವಿಸಿದ್ಧ ಎನ್. ಬಳ್ಳಾರಿ ಅವರ 'ಆಗಸ್ಟ್ ಹದಿನೈದರ ಹಾಡು', ಗುಡಿಹಳ್ಳಿ ನಾಗರಾಜ್ ಅವರ 'ಸಾವು', ಗುಜ್ಜನಡು ಅವರ 'ಸ್ವಾತಂತ್ರ್ಯೋತ್ಸವ', ಚಂಪಾ ಅವರ 'ಗಾಂಧಿ ಸ್ಮರಣೆ' ಮುಂತಾದ ಕವನಗಳು ಪ್ರಸ್ತುತವಾಗುವುದು.

ಇಲ್ಲೆಲ್ಲಾ ಕಾಣುವುದು ಸಮಾಜದ ಕಟ್ಟಕಡೆಯ ಮನುಷ್ಯ, ಅವನ ಸಂವೇದನೆ, ಅವನ ಆಶೋತ್ತರ, ಅವನ ಕಾಣ್ಕೆ ಮತ್ತು ಗ್ರಹಿಕೆ ಇತ್ಯಾದಿ. ಇಂತಹ ಸಾಮಾನ್ಯ ಶ್ರೀಸಾಮಾನ್ಯನಾಗಬೇಕು. ಆಗಲೇ ಭಾರತದ ರಿಪಬ್ಲಿಕ್‌ಗೆ ಅರ್ಥ ಬರುತ್ತದೆ. ಇದರಡಿಯಲ್ಲಿ ಮಂತ್ರಿ, ಕುಂಬಾರ, ಅಧಿಕಾರಿ, ಚಮ್ಮಾರ ಎಲ್ಲರೂ ಒಂದೇ. ಯಾರ ಬೆನ್ನು ಬಾಗಬೇಕಿಲ್ಲ, ಅಂಬಾರಿ ಮೇಲೇರಬೇಕಿಲ್ಲ, ಪರಾಕು ಬೇಕಿಲ್ಲ. ಈ ನೆಲೆಯಲ್ಲಿ ಕುವೆಂಪು ಅವರ ಶ್ರೀಸಾಮಾನ್ಯನ ದೀಕ್ಷಾಗೀತೆಯನ್ನು ಲಕ್ಷಿಸಬೇಕು. ಅವರೇ ಇಲ್ಲಿ ಹೇಳುವಂತೆ ಇದು ಗರ್ವರ ಕಾಲವಲ್ಲ; ಸರ್ವರ ಕಾಲ.

ಶೋಷಿತರಿಗೆ ನಿಕಟ ಶತ್ರು ಆರ್ಥಿಕವಾಗಿ ಶೋಷಣೆ ಮಾಡುವವನೇ ಆಗುತ್ತಾನೆ. ಅನಂತರದಲ್ಲಿ ಇತರ ಶತ್ರುಗಳು ಪ್ರಸ್ತುತರಾಗುತ್ತಾರೆ. ಈ ನೆಲೆಯಲ್ಲಿ ದಲಿತರಿಗೆ ಮೊದಲ ಶತ್ರು ಜಮೀನ್ದಾರನೇ ಸರಿ. ಆದರೆ ಈ ವ್ಯವಸ್ಥೆಗೆ ರಸ್ತೆಯನ್ನು ಹಾಕುತ್ತ ಬಂದ ಪುರೋಹಿತಶಾಹಿಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ. ಜೀತಗಾರರಿಗೆ ಪಡಿಯನ್ನು ನಿರಾಕರಿಸುವುದು ಕಾನೂರು ಹೆಗ್ಗಡಿತಿಯ ಒಂದು ಘಟನೆ ಯಾಗಿದೆ. ಇಲ್ಲಿ ಊಳಿಗಮಾನ್ಯ ಒಡೆಯ ಮತ್ತು ಪುರೋಹಿತಶಾಹಿ ವಕ್ತಾರ ಇಬ್ಬರೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕ್ರಿಯಾಶೀಲವಾಗುತ್ತಾರೆ. ಆದ್ದರಿಂದ ಇದರ ದಮನಕ್ಕೆ ಗುರಿಯಾದವನು ಯಾವುದೇ ಸಾಮಾಜಿಕ ಸ್ತರದಲ್ಲಿ ಇದ್ದರೂ ಅಲ್ಲಿಂದಲೇ ತನ್ನ ಪ್ರತಿಭಟನೆಯನ್ನು ತೋರುತ್ತಾನೆ ಮತ್ತು ಅದರ ಹುನ್ನಾರವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಾನೆ.

ಹೀಗೆ ಮುಖ್ಯವಾಗಿ ಪುರೋಹಿತಶಾಹಿಯ ಹುನ್ನಾರ ವನ್ನು ಬಯಲಿಗೆಳೆಯುವಲ್ಲಿ ಕುವೆಂಪು ವಿಶೇಷ ಉತ್ಸಾಹ ವನ್ನು ತೋರುತ್ತಾರೆ. ಇದು ಚಾರಿತ್ರಿಕ ಅನಿವಾರ್ಯವೇ ಆಗಿದೆ. ಈ ನೆಲೆಯಲ್ಲಿ 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು', 'ನೂರು ದೇವರನೆಲ್ಲ ನೂಕಾಚೆ ದೂರ', 'ಅವತಾರ', 'ಮಹದೇಶ್ವರನ ಬೆಟ್ಟಕಂತೆ', 'ಧ್ರಾಂ ಧ್ರೀಂ ಧ್ರೂಂ' ಮುಂತಾದ ಕವಿತೆಗಳೊಡನೆ ಸಾವು ಮಾತಾಡ ಬೇಕು. ಇದೇ ನೆಲೆಯಲ್ಲಿ ಸಂಸ್ಕೃತ ಭಾಷೆಯನ್ನು ಗುತ್ತಿಗೆ, ಅಲ್ಲಲ್ಲ ಪೇಟೆಂಟ್ ಪಡೆದವರು ಮಾಡಿದ ಭಾಷಿಕ ಮತ್ತು ಬೌದ್ಧಿಕ ಅನಾಚಾರಗಳನ್ನು ಲಕ್ಷಿಸಬೇಕಿದೆ. ಈ ತೆರೆಯನ್ನು ಸರಿಸಿ ಚರಿತ್ರೆಯನ್ನು ತೋರುವ ಕವಿತೆ ಅಲ್ಲಮಪ್ರಭು ಬೆಟ್ಟದೂರು ಅವರ 'ಸಂಸ್ಕೃತ'.

ಇದೇ ಬಗೆಯಲ್ಲಿ ಸ್ತ್ರೀವಾದಿ ನೆಲೆಯಲ್ಲಿ ಕುವೆಂಪು ಅವರ 'ಊರ್ಮಿಳಾ', 'ಮನೆ ಮನೆಯ ತಪಸ್ವಿನಿಗೆ' ಪದ್ಯಗಳನ್ನು ಗಮನಿಸಬಹುದು. ಇದಕ್ಕೆ ಸಂವಾದಿ ನೆಲೆಯಲ್ಲಿ ಬಿ. ಟಿ. ಲಲಿತಾ ನಾಯಕ್, ಕಮಲಾ ಹಂಪನಾ, ಪ್ರತಿಭಾ ನಂದಕುಮಾರ್ ಮುಂತಾದವರ ಅನೇಕ ಪದ್ಯಗಳನ್ನು ನೋಡಬಹುದು.

ಈಗಾಗಲೇ ನಡೆದಿರುವ ಚರ್ಚೆಯಂತೆ ಕುವೆಂಪು ಅವರು ಉಳ್ಳವರ ಪರವಾದ ವ್ಯವಸ್ಥೆಯನ್ನು ಪೋಷಿಸುತ್ತಾ ಬಂದ ಯಥಾಸ್ಥಿತಿವಾದಕ್ಕೆ ಕೊಡಲಿ ಪೆಟ್ಟು ಹಾಕಿದವರು. ಈ ಯಥಾಸ್ಥಿತಿವಾದದ ಪೋಷಕ ಶಕ್ತಿಗಳಾದ ದೈವ, ಧರ್ಮ, ದೇಗುಲ, ಮೌಢ್ಯ, ಜಾತಿ ಮುಂತಾದವುಗಳ ಎದುರಿನಲ್ಲಿ ಪಾಂಚಜನ್ಯ ಮೊಳಗಿಸಿದವರು. ಇದು ದಲಿತ-ಬಂಡಾಯದವರ ಧ್ವನಿಗಿಂತ ಹೆಚ್ಚು ಕಠೋರ ಮತ್ತು ಶಕ್ತಿಯುತವಾಗಿದೆ. ಇಲ್ಲಿ ತಮಿಳುನಾಡಿನಲ್ಲಿ ವ್ಯಾಪಕವಾಗಿ ಮೊಳಗಿದ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಅವರ ಧ್ವನಿಯನ್ನು ಸಹ ನೆನಪಿಸಿಕೊಳ್ಳಬೇಕು.

ಹೀಗೆ ಕುವೆಂಪು ಅವರು ಹೊಸ ಸಮಾಜ ರಚನೆಯ ಕನಸನ್ನು ಹೊತ್ತು, ಅದಕ್ಕೆ ಮಾರಕವಾಗಿ ಪರಿಣಮಿಸಿದ್ದ ಸಾಂಸ್ಥಿಕ ಶಕ್ತಿಗಳ ವಿರುದ್ಧ ಬಂಡಾಯವನ್ನು ಹೂಡಿದವ ರಾಗಿದ್ದಾರೆ. ಆದ್ದರಿಂದಲೇ ಅವರ ಸಮಾಜಮುಖಿ ಕವನಗಳ ಭಾಷೆ ಕತ್ತಿಯಷ್ಟೇ ಮೊನಚು. ಇದಕ್ಕೆ ಹತ್ತಿರದ ನೆಲೆಯಲ್ಲಿ ಮಾತನಾಡುವ ದಲಿತ-ಬಂಡಾಯದ ದನಿಯಲ್ಲಿ ವಿಷಾದವೇ ಹೆಚ್ಚು.

ಒಟ್ಟಾರೆ ಆಧುನಿಕ ಸಂದರ್ಭದಲ್ಲಿ ಕುವೆಂಪು, ಪ್ರಗತಿಶೀಲ ಮತ್ತು ದಲಿತ-ಬಂಡಾಯದ ಗೆಳೆಯರು ಸಮಪಾತಳಿಯಲ್ಲಿ ಕಾಣುತ್ತಾರೆ. ಅದಕ್ಕೆ ಕಾರಣವಾದ ಸಾಮಾಜಿಕತೆ ಮತ್ತು ಜನಸಾಮಾನ್ಯರ ರಾಜ್ಯದ ಕನಸು ಅವರನ್ನು ನಮ್ಮೊಂದಿಗೆ ಇರಿಸಿದೆ. ಅಂತಹ ಸಮಾಜ ಸ್ಥಾಪನೆಯಾಗುವವರೆಗೂ ಇವರಂತೆ ನುಡಿದ-ದುಡಿದ ಯಾವುದೇ ಕಾಲದ, ಯಾವುದೇ ಲೋಕದ ಜನರೂ ನಮ್ಮವರೇ ಆಗುತ್ತಾರೆ. ಆ ನೆಲೆಯಲ್ಲಿ ಪ್ರಧಾನವಾಗಿ ಕುವೆಂಪು ಮತ್ತು ದಲಿತ-ಬಂಡಾಯದವರನ್ನು ಮಾತ್ರ ಇಲ್ಲಿ ಸದ್ಯಕ್ಕೆ ಲಕ್ಷಿಸಲಾಗಿದೆ.


**ಆಕರ ಗ್ರಂಥಗಳು**

ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ೨

ಶ್ರೀ ಕುವೆಂಪು – ಸಂ. ಜಿ. ಎಸ್. ಶಿವರುದ್ರಪ್ಪ

ರಸಸಿದ್ಧಿ : ಕುವೆಂಪು ಕಾವ್ಯ ವಿಮರ್ಶೆ – ಬೈರಮಂಗಲ ರಾಮೇಗೌಡ

ಬಂಡಾಯ ಕಾವ್ಯ – ಸಂ. ಬರಗೂರು ರಾಮಚಂದ್ರಪ್ಪ

ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು – ಪ್ರಸಾದ ಅಗಸನಕಟ್ಟೆ



ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ

ರೀಡರ್, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ

ಕೋಲಾರ – [illegible]


ಮತ್ತೆ ಹಾಲು ಒಡೆದಿದೆ
ಧಗಧಗನೆ ಉರಿದ
ಹಾಲೊಡೆಸಿದ
ಸೂರ್ಯನ ಮುಖಕ್ಕಿಷ್ಟು
ಸಿಟ್ಟಿನಲ್ಲಿ ಉಗಿದು
ಸರಸರನೆ ಒಳಗೆ ಬಂದವಳಿಗೆ
ಯಾಕೋ ತಟ್ಟನೆ
ಅಮ್ಮ ನೆನಪಾಗುತ್ತಾಳೆ.

ಒಡೆದ ಹಾಲಿಗೆ
ಮತ್ತಿಷ್ಟು ಹುಳಿಹಿಂಡಿ
ಒಡಕಲೊಡಕಲು
ಗರಣೆ ಬಸಿದುಕೊಂಡು
ಉರಿವ ಒಲೆಯ ಮೇಲಿಟ್ಟು
ಮೇಲಿಷ್ಟು ಸಕ್ಕರೆ ಬೆರೆಸಿಟ್ಟು
ಕೈಯಾಡುತ್ತಲೇ
ಹದಗೊಂಡ ಸಿಹಿಯ
ಬಿಸಿಯಲೇ ಬಾಯಿಗಿಟ್ಟು
ಗೆಲುವಿನ ನಗೆ ನಗುತ್ತಾಳೆ.
ಮತ್ತೆ ಹೊರಬಂದು
ಉರಿವ ಸೂರ್ಯನ್ನೇ
ಅಣಕಿಸಿ ಬೀಗುತ್ತಾಳೆ !





ರೂಪ ಹಾಸನ

ಪ್ರೇರಣಾ, ಸಂತ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ, ಹಾಸನ



# ಜನನಾಯಕಿ ಅಹಲ್ಯಾ ಇನ್ನಿಲ್ಲ

ಏಪ್ರಿಲ್ ೧೯. ಬೆಳಗ್ಗೆ ಎಂಟು ಗಂಟೆಯ ಸಮಯ. ಗೆಳತಿ ಮಾಲಾ ಫೋನ್ ಮಾಡಿ ''ಅಹಲ್ಯಾ ಇಂದು ಬೆಳಗ್ಗೆ ೬ ಗಂಟೆಗೆ ತೀರಿ ಹೋದರು'' ಎಂದು ಹೇಳಿದಾಗ ತಕ್ಷಣ ನನಗೆ ಅದು ಯಾರೆಂದು ಹೊಳೆಯದೆ ಮತ್ತೆ ಕೇಳಿದಾಗ, ಅವಳು ಅಹಲ್ಯಾ ರಾಂಗ್ಣೇಕರ್ ಎಂದೊಡನೆ ಮನಸ್ಸಿಗೆ ಖೇದವಾಯಿತು. ನನ್ನ ಮನಸ್ಸು ಇಪ್ಪತ್ತೆಂಟು ವರ್ಷಗಳ ಹಿಂದಿನ ಸಂದರ್ಭಕ್ಕೆ ಹಾರಿತು. ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಸ್ಥಾಪನಾ ಸಮಾವೇಶ ೧೯೧೧ರಲ್ಲಿ ಮದ್ರಾಸ್‌ನಲ್ಲಿ ನಡೆದಿತ್ತು. ಈ ಸಮಾವೇಶದಲ್ಲಿ ಕರ್ನಾಟಕದಿಂದ ಪ್ರತಿನಿಧಿಯಾಗಿ ಭಾಗವಹಿಸಿದ್ದ ನಾನು ಹೊಸದೊಂದು ಅನುಭವಕ್ಕೆ ಕಾತರಿಸಿ ಕುಳಿತಿದ್ದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಹಲವಾರು ವೀರ ಮಹಿಳೆಯರು ವಿಶಾಲವಾದ ವೇದಿಕೆಯ ಮೇಲೆ ಅಧ್ಯಕ್ಷ ಮಂಡಳಿಯಲ್ಲಿ ಆಸೀನರಾಗಿದ್ದರು. ಮೂರು ದಿನಗಳ ಕಾಲ ಎಡೆಬಿಡದೆ ನಡೆದ ಈ ಕಾರ್ಯಕಲಾಪಗಳಲ್ಲಿ ನನ್ನ ಮನಸ್ಸನ್ನು ಸೂರೆಗೊಂಡ ಒಬ್ಬ ಪ್ರಜ್ವಲಿಸುವ ಮಹಿಳೆಯನ್ನು ಇಂದಿಗೂ ಮರೆಯಲು ಸಾಧ್ಯವೇ ಇಲ್ಲ. ಆಕೆಯೇ ಭಾರತದ ಮಹಿಳಾ ಚಳುವಳಿಯ ಇತಿಹಾಸದಲ್ಲೇ ತನ್ನದೇ ಛಾಪು ಒತ್ತಿದ ಧೀರ ನಾಯಕಿ ಕಾಂ. ಅಹಲ್ಯಾ ರಾಂಗ್ಣೇಕರ್. ಸಮಾವೇಶದಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ, ಬೆಲೆ ಏರಿಕೆಯ ಬಗ್ಗೆ ಉದಾಹರಣೆಗಳ ಸಮೇತ ಅವರು ಚರ್ಚಿಸುತ್ತಿದ್ದ ರೀತಿ, ತಾರ್ಕಿಕ ವಾದಸರಣಿ ಮತ್ತು ದೇಶದ ಪ್ರಸಕ್ತ ರಾಜಕೀಯ ವಿದ್ಯಮಾನಗಳ ಬಗ್ಗೆ ಅವರು ನಡೆಸಿದ ಹರಿತವಾದ ವಿಶ್ಲೇಷಣೆ ಕಂಡು ನಾನು ಬೆರಗಾದೆ. ಹೋರಾಟದ ಅನುಭವಗಿಂದ ಹುಟ್ಟಿದ ಅಂತಹ ವೈಚಾರಿಕ ಸ್ಪಷ್ಟತೆಯನ್ನು ನಾನು ಕಂಡಿರುವುದೇ ಅಪರೂಪ. ನಂತರ ಬೆಂಗಳೂರಿನಲ್ಲಿ ಕೆಲವು ವರ್ಷಗಳ ಹಿಂದೆ ನಡೆದ ಜನವಾದಿ ಮಹಿಳಾ ಸಂಘಟನೆಯ ರಾಷ್ಟ್ರೀಯ ಸಮ್ಮೇಳನದಲ್ಲಿ ಅವರನ್ನು ಕಂಡಾಗಲೂ ಅವರ ಚೈತನ್ಯದಾಯಕ ವ್ಯಕ್ತಿತ್ವದ ಕಾಂತಿಯಲ್ಲಿ ಬದಲಾವಣೆ ಕಂಡುಬಂದಿರಲಿಲ್ಲ.

ಮುಂಬೈನ ಸಾರ್ವಜನಿಕ ಜೀವನದಲ್ಲಿ ಅಹಲ್ಯಾ ತಾಯಿ ಯಾರೂ ಮರೆಯಲಾಗದ ಹೆಸರು. ಅಹಲ್ಯಾ ಹುಟ್ಟಿದ್ದು ಪುಣೆಯಲ್ಲಿ ೧೯೨೨ರಲ್ಲಿ. ಸುಧಾರಣೆ ಮತ್ತು ಪ್ರಗತಿಪರತೆಯ ಗಾಳಿ ಉಸಿರಾಡುತ್ತಿದ್ದ ತ್ರಯಂಬಕ ರಣದಿವೆಯವರ ಕುಟುಂಬದಲ್ಲಿ, ಅವರ ಎಂಟು ಮಕ್ಕಳಲ್ಲಿ ಕಡೆಯವಳಾಗಿ ಜನಿಸಿದ ಅಹಲ್ಯಾರವರಿಗೆ ಅವರ ಎಲ್ಲ ಚಟುವಟಿಕೆಗಳಿಗೂ ಮನೆಯಲ್ಲಿ ವಿಶೇಷ ಪ್ರೋತ್ಸಾಹ. ಓದಿನಲ್ಲಿ ಚುರುಕು, ಆಟದಲ್ಲಿ ಮುಂದು. ಮಧುರ ಗಾಯಕಿ. ಪದವಿ ಶಿಕ್ಷಣ ಪಡೆದು ಕಮ್ಯುನಿಸ್ಟ್ ಪಕ್ಷ ಸೇರಿದಾಗ ಅವರ ಬಳಿಯಿದ್ದ ೩೪ ಕಪ್‌ಗಳು ಮತ್ತು ಪದಕಗಳು ಅವರ ಪ್ರತಿಭೆಯನ್ನು ಸೂಚಿಸುತ್ತವೆ. ಇಪ್ಪತ್ತನೆಯ ವಯಸ್ಸಿಗೇ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ಹೋರಾಟದ ಜೀವನವನ್ನು ಆರಿಸಿಕೊಂಡರು. ಆರ್.ಐ.ಎನ್. ಬಂಡಾಯವನ್ನು ಬೆಂಬಲಿಸಿ ನಡೆದ ಸಾರ್ವತ್ರಿಕ ಮುಷ್ಕರದಲ್ಲಿ ಕ್ರಿಯಾಶೀಲ ಭಾಗವಹಿಸುವಿಕೆ. ಗಿರಣಿ ಕಾರ್ಮಿಕರ ಸಂಘಟನೆಯಲ್ಲೂ ಸಕ್ರಿಯರಾಗಿದ್ದರು.

ಕಮ್ಯುನಿಸ್ಟ್ ನಾಯಕರಾಗಿದ್ದ ಅಣ್ಣ ಬಿ.ಟಿ. ರಣದಿವೆಯ ಪ್ರೋತ್ಸಾಹ ಕಮ್ಯುನಿಸ್ಟ್ ಪಕ್ಷಕ್ಕೆ ಪದಾರ್ಪಣೆ. ಅವರಿಂದ ಅವರ ಗೆಳೆಯ ರಾಂಗ್ಣೇಕರ್‌ರ ಪರಿಚಯವಾಗಿ ಅವರನ್ನು ವಿವಾಹವಾದರು. ಕಮ್ಯುನಿಸ್ಟ್ ಪತಿಯ ಬೆಂಬಲದಿಂದ ವಿವಾಹವಾದ ನಂತರ ಪೂರ್ಣಪ್ರಮಾಣದಲ್ಲಿ ಕಮ್ಯುನಿಸ್ಟ್ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಹಲ್ಯಾ ತಮ್ಮ ರಾಜಕೀಯ ವಲಯವನ್ನು ವಿಸ್ತರಿಸಿಕೊಳ್ಳಲು ಅನುವಾಗುವಂತೆ ಪೂರಕವಾದ ಅನುಕೂಲಗಳನ್ನು ಅವರ ಗಂಡನ ಕುಟುಂಬದ ಸದಸ್ಯರು ಅವರಿಗೆ ದೊರಕಿಸಿಕೊಟ್ಟರು. ಮೊದಲ ಮಗ ಅಜಿತ್ ಹುಟ್ಟಿದಾಗ ಅವರನ್ನು ರೈಲ್ವೇ ಮುಷ್ಕರದಲ್ಲಿ ಭಾಗವಹಿಸಿದ್ದಕ್ಕೆ ಬಂಧಿಸಿದ್ದರು. ನಂತರ ಸಂಯುಕ್ತ ಮಹಾರಾಷ್ಟ್ರ ಚಳುವಳಿಯಲ್ಲಿ ಭಾಗವಹಿಸಿ ಅವರು ಜೈಲಿಗೆ ಹೋಗಿ ಬಂದರು.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಅಹಲ್ಯಾರವರ ಬದುಕು ಸಂಪೂರ್ಣ ಸಾರ್ವಜನಿಕ ಹಿತಕ್ಕಾಗಿಯೇ ಮೀಸಲಾಗಿತ್ತು. ಅಂಬೇಡ್ಕರ್‌ರವರ ನೇತೃತ್ವದ ಹಿಂದೂ ಕಾಯಿದೆ ೧೯೫೦ರನ್ನು ಬೆಂಬಲಿಸುವ ಚಳುವಳಿಯಲ್ಲಿ ಭಾಗವಹಿಸಿದರು. ೧೯೬೧ರಲ್ಲಿ ಮುಂಬೈಯ ಮುನಿಸಿಪಲ್ ಕಾರ್ಪೊರೇಷನ್‌ಗೆ ಚುನಾಯಿತರಾದ ಅಹಲ್ಯಾ, ಮೊದಲ ಮಹಿಳಾ ಕಾರ್ಪೊರೇಟರ್ ಆಗಿ, ೧೯ ವರ್ಷಗಳ ಕಾಲ ಕೆಲಸ ಮಾಡಿದ್ದರು. ಆಗ ಕೂಲಿಕಾರರ, ಮನೆಯಿಲ್ಲದವರ, ಗುಡಿಸಲು ನಿವಾಸಿಗಳ ಕಲ್ಯಾಣಕ್ಕಾಗಿ ದುಡಿದ ಅಹಲ್ಯಾ ೧೯೭೭ರಲ್ಲಿ ಸಂಸತ್ ಸದಸ್ಯೆಯಾಗಿಯೂ ಚುನಾಯಿತರಾದರು. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯ ಸದಸ್ಯೆಯಾಗಿದ್ದರು. ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಸ್ಥಾಪಕ ಸದಸ್ಯೆಯಾಗಿ ಹಲವಾರು ಹುದ್ದೆಗಳಲ್ಲಿ ಕೆಲಸ ಮಾಡಿದರು.

ಅಹಲ್ಯಾ ಎಂದೂ ಕೀರ್ತಿ ಕಾಮನೆಯ ಬೆನ್ನು ಹತ್ತಿ ಹೋಗಲಿಲ್ಲ. ಪ್ರಚಾರ, ಗದ್ದಲಗಳಿಂದ ದೂರವೇ ಉಳಿದ ಅವರು ಕೊನೆಗಾಲದವರೆಗೂ ಕ್ರಿಯಾಶೀಲರಾಗಿಯೇ ಉಳಿದು ಅದ್ಭುತ ಮಹಿಳಾ ನಾಯಕತ್ವದ ಸಂಕೇತವಾದರು. ೮೭ ವರ್ಷದ ಈ ಹಿರಿಯ ಚೇತನದ ಸಾವಿನಿಂದ ಆ ತಲೆಮಾರಿನ ನಾಯಕತ್ವದ ಕೊಂಡಿ ಸಂಪೂರ್ಣ ಕಳಚಿದಂತಾಗಿದೆ. ಅವರ ಬದುಕಿನ ಸಾಧನೆಯ ಈ ಸ್ಮರಣೆ 'ಹೊಸತು'ವಿನ ನುಡಿನಮನವಾಗಿದೆ.

ಎಸ್. ಗಾಯತ್ರಿ
೧೦೮, ೧೪ ಪಿ, ಸ್ಕೈಲೈನ್ ಸುರಭಿ, ವಿದ್ಯಾಪೀಠ ರೋಡ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ಶಿಕ್ಷಣ ರಂಗದಲ್ಲಿ ಉದಾರೀಕರಣ ನೀತಿ ಪ್ರವೇಶವಾದ ಮೇಲೆ ಅಸ್ತಿತ್ವಕ್ಕೆ ಬಂದಿರುವ ಮಾನ್ಯಮಾಡಲ್ಪಟ್ಟ ವಿಶ್ವವಿದ್ಯಾಲಯಗಳು ಯಾವ ರೀತಿ ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಳ್ಳುತ್ತವೆ; ಯಾವ ದರದಲ್ಲಿ ವಿದ್ಯಾರ್ಥಿಗಳಿಂದ ಶುಲ್ಕ ಪಡೆಯುತ್ತವೆ; ಅಲ್ಲಿಯ ಬೋಧಕ ಹಾಗೂ ಇತರ ಸಿಬ್ಬಂದಿಗಳಿಗೆ ನೀಡುತ್ತಿರುವ ವೇತನಗಳೆಷ್ಟು; ಅವರ ಉದ್ಯೋಗ ಭದ್ರತೆ ಮತ್ತು ಸೇವಾಸ್ಥಿತಿಗತಿ ಯಾವ ರೀತಿ ಇದೆ; ಅವುಗಳು ನೀಡುತ್ತಿರುವ ಪದವಿಗಳ ಗುಣಮಟ್ಟವೆಂತಹದು ಎಂಬ ಅಂಶಗಳನ್ನು ಪರಿಶೀಲಿಸಿದರೆ ಸಾಕು, ವಿದೇಶಿ ವಿಶ್ವವಿದ್ಯಾಲಯಗಳು ನಮ್ಮ ದೇಶದಲ್ಲಿ ಎಂತಹ ಶೈಕ್ಷಣಿಕ ಸಂಸ್ಕೃತಿಯನ್ನು ನಿರ್ಮಿಸಬಹುದೆಂಬುದು ಸ್ಪಷ್ಟವಾಗುತ್ತದೆ. ಈಗಾಗಲೇ ಭದ್ರವಾಗಿ ನೆಲೆಗೊಂಡಿರುವ ದೇಶೀಯ ಖಾಸಗಿ ಶಿಕ್ಷಣ ಸಂಸ್ಥೆಗಳು ಇನ್ನು ಮುಂದೆ ವಿದೇಶಿ ಶಿಕ್ಷಣ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳೊಂದಿಗೆ 'ಟೈಅಪ್' ಎಂಬ ಕೂಡಿಕೆಗಳನ್ನು ಮಾಡಿಕೊಂಡು ಇಡೀ ದೇಶಾದ್ಯಂತ ತಮ್ಮದೇ ಆದ ಶೈಕ್ಷಣಿಕ ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು, ಗಣಕಯಂತ್ರ, ಅಂತರ್ಜಾಲ, ಅನಿಮೇಶನ್, ಮಲ್ಟಿಮೀಡಿಯಾ, ಇ-ಲರ್ನಿಂಗ್, ಆನ್‌ಲೈನ್ ಪರೀಕ್ಷೆ ಮುಂತಾದ ಶೈಕ್ಷಣಿಕ ಆಯುಧ ಸನ್ನದ್ಧವಾಗಿ, ಭಾರತದಲ್ಲಿ ಅತಿ ಕಡಿಮೆ ಕೂಲಿಗೆ ದೊರಕುವ ಸಮೃದ್ಧವಾದ ಮಾನವ ಸಂಪನ್ಮೂಲಾಭಿವೃದ್ಧಿಯ ವೃತ್ತಿಪರ ಗುಲಾಮಿ ಶೈಕ್ಷಣಿಕ ಕಾಲಾಳುಗಳ ಮೂಲಕ ವಿಸ್ತಾರವಾದ ಶೈಕ್ಷಣಿಕ ಸಾಮ್ರಾಜ್ಯಗಳನ್ನು ನಿರ್ಮಾಣ ಮಾಡಿಕೊಳ್ಳಲು ಮುಕ್ತ ಅವಕಾಶ ಇನ್ನು ಮುಂದೆ ದೊರಕುತ್ತದೆ.

# ಜ್ಞಾನವನ್ನು ಬಡವರಿಂದ ದೂರ ಸರಿಸುವ ರಾಷ್ಟ್ರೀಯ ಜ್ಞಾನ ಆಯೋಗದ ಶಿಫಾರಸ್ಸುಗಳು

ಸಿ. ಯತಿರಾಜು

ದೂರ ಸಂವಹನ, ಮಾಹಿತಿ ತಂತ್ರಜ್ಞಾನದ ಹರಿಕಾರ ಎಂದೇ ಬಿಂಬಿತವಾಗಿರುವ ಹೈ ಫೈ ಅಂತರರಾಷ್ಟ್ರೀಯ ಚಿಂತಕರಾದ ಸ್ಯಾಮ್ ಪಿಟ್ರೋಡಾ ಭಾರತದಲ್ಲಿ ಮತ್ತೊಂದು ಕ್ರಾಂತಿಯ ಹರಿಕಾರರಾಗಿ ಅವತಾರವೆತ್ತುತ್ತಿದ್ದಾರೆ. 'ರಾಷ್ಟ್ರೀಯ ಜ್ಞಾನ ಆಯೋಗ'ದ ಅಧ್ಯಕ್ಷರಾಗಿ ಅವರು ಭಾರತದಲ್ಲಿ ಜ್ಞಾನ ಕ್ರಾಂತಿಯನ್ನುಂಟುಮಾಡಲು ಕ್ರಾಂತಿಕಾರಕ ಸಲಹೆಗಳನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಈ ಬಾರಿ ಅವರ ಗಮನ ಭಾರತದಲ್ಲಿ ವಿಪುಲವಾಗಿರುವ ಮಾನವ ಸಂಪನ್ಮೂಲ ಅಭಿವೃದ್ಧಿಯ ಕಡೆಗೆ ಹರಿದಿದೆ. ೨೫ ವರ್ಷಕ್ಕಿಂತ ಕಡಿಮೆ ವಯೋಮಾನದ ೫೫೦ ಮಿಲಿಯನ್ ಭಾರತೀಯ ಯುವಕರ ಪಡೆಯನ್ನು ಮುಂದಿನ ದಶಕದಲ್ಲಿ ಜಾಗತಿಕ ಆರ್ಥಿಕತೆಗೆ ಕೊಡುಗೆಯಾಗಿ ನೀಡುವ ಹಂಬಲದಿಂದ ಅನೇಕ ಸಲಹೆಗಳನ್ನು ಸರ್ಕಾರದ ಮುಂದೆ ಮಂಡಿಸಿದ್ದಾರೆ. ಮುಂದಿನ ೧೦-೧೫ ವರ್ಷಗಳಲ್ಲಿ ಸಂಭವಿಸಲಿರುವ 'ಜ್ಞಾನ ಕ್ರಾಂತಿ'ಯಲ್ಲಿ ಭಾರತ ಅಗ್ರಮಾನ್ಯ ಪಾತ್ರ ವಹಿಸಲು ಸಾಧ್ಯವಾಗುವಂತೆ ಮಾಡಲು ತಮ್ಮ ಅಮೂಲ್ಯ ಸಲಹೆಗಳ ಮೂಲಕ 'ಮಾರ್ಗ ನಕಾಶೆ'ಯೊಂದನ್ನು ಅನಾವರಣಗೊಳಿಸಿದ್ದಾರೆ. ಇವರ ಅತ್ಯದ್ಭುತ ಮಾರ್ಗ ನಕಾಶೆಯ ಬಗ್ಗೆ ಮುಖ್ಯವಾಹಿನಿಯ ಮಾಧ್ಯಮಗಳಲ್ಲಿ ಪ್ರಾಯೋಜಿತ ಚಿಂತಕರು ಈಗಾಗಲೇ ಬಾಜಾಬಜಂತ್ರಿ ಚರ್ಚೆಗಳನ್ನಾರಂಭಿಸಿ ಸರ್ಕಾರ ಈ ಶಿಫಾರಸ್ಸುಗಳನ್ನು ಸಾರಾಸಗಟಾಗಿ ಅಂಗೀಕರಿಸುವಂತೆ ಮಾಡಲು ಅಗತ್ಯವಾದ ಕೃತಕ ಸಾರ್ವಜನಿಕ ಒತ್ತಡವನ್ನು ಸೃಷ್ಟಿಸುತ್ತಿದ್ದಾರೆ. ಮಾಧ್ಯಮಗಳ ಒತ್ತಡದಲ್ಲಿ ನಮ್ಮ ಅನೇಕ ಶಿಕ್ಷಣತಜ್ಞರು ಈ ಬಗ್ಗೆ ಅತ್ಯಾಶ್ಚರ್ಯಕರ ಮೌನಕ್ಕೆ ಶರಣಾಗಿದ್ದಾರೆ.

ಇವರುಗಳ ಈ ಮೌನವೇ ಶಿಕ್ಷಣ ಕ್ಷೇತ್ರಕ್ಕೆ ಮಾರಕವಾಗಿ ಪರಿಣಮಿಸುತ್ತಿದೆ. ಶಿಕ್ಷಣವೇತ್ತರ ಈ ಮನೋಭಾವದಿಂದಾಗಿ ಸರ್ಕಾರ ಇಂದು ಕೈಗಾರಿಕೋದ್ಯಮಿಗಳನ್ನು, ಅವರ ವಕ್ತಾರರನ್ನು, ಅರ್ಥಶಾಸ್ತ್ರಜ್ಞರನ್ನು ಶೈಕ್ಷಣಿಕ ಸಲಹೆ ನೀಡಲು ಆಹ್ವಾನಿಸುತ್ತಿದೆ. ಆದ್ದರಿಂದಲೇ ರಾಷ್ಟ್ರೀಯ ಜ್ಞಾನ ಆಯೋಗದಂತಹ ನೀತಿ ನಿರೂಪಣಾ ಸಮಿತಿಯಲ್ಲಿ ನಂದನ್ ನಿಲೇಕಣಿ, ಅಶೋಕ ಗಂಗೂಲಿ, ದೀಪಕ್ ನಯ್ಯರ್, ಜಯತಿ ಘೋಶ್, ಪ್ರತಾಪ್ ಬಾನು ಮೆಹ್ತಾ, ಅಂಡ್ರೆ ಬೆಟಿಲಿ, ಪಿ. ಎಂ. ಭಾರ್ಗವ ರಂತಹವರು ಸ್ಥಾನ ಪಡೆದುಕೊಳ್ಳುತ್ತಾರೆ. ಡಾ|| ಎಸ್. ರಾಧಾಕೃಷ್ಣನ್, ಮೊದಲಿಯಾರ್, ಕೊಠಾರಿಯಂತಹ ಶಿಕ್ಷಣ ತಜ್ಞರು ಆಯೋಗಗಳ ಹತ್ತಿರ ಸುಳಿಯಲೂ ಇತ್ತೀಚಿನ ದಿನಗಳಲ್ಲಿ ಸಾಧ್ಯವಾಗುತ್ತಿಲ್ಲ. ನಿರ್ಲಜ್ಜವಾಗಿ ಸರ್ಕಾರಗಳು ತಮ್ಮ ಆರ್ಥಿಕ ನೀತಿಗಳಿಗನು ಗುಣವಾಗಿ ಶಿಫಾರಸ್ಸುಗಳನ್ನು ಮಾಡುವಂತಹ ಪಕ್ಷಪಾತಿಗಳನ್ನು ನೇಮಕ ಮಾಡಿದರೂ ಯಾರೂ ಅದರ ಬಗ್ಗೆ ಚಕಾರವೆತ್ತುವುದಿಲ್ಲ. ಇದು ಅತ್ಯಂತ ವಿಷಾದಕರ.

ರಾಷ್ಟ್ರೀಯ ಜ್ಞಾನ ಆಯೋಗದ ಅಧ್ಯಕ್ಷರು ಹಾಗೂ ಕೆಲವು ಸದಸ್ಯರು ಆರಂಭದಿಂದಲೇ ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾತಿಯನ್ನು ವಿರೋಧಿಸುವ ಮೂಲಕ ಸಾಮಾಜಿಕ ನ್ಯಾಯದ ಬಗ್ಗೆ ತಮ್ಮ ಪೂರ್ವಗ್ರಹಗಳನ್ನು ನಿಚ್ಚಳವಾಗಿ ಪ್ರದರ್ಶಿಸಿದ್ದಾರೆ. ರಾಷ್ಟ್ರೀಯ ಜ್ಞಾನ ಆಯೋಗದ ಇಬ್ಬರು ಸದಸ್ಯರು ಸರ್ಕಾರದ ಮೀಸಲಾತಿ ನೀತಿಯನ್ನು ಪ್ರತಿಭಟಿಸಿ ರಾಜಿನಾಮೆ ನೀಡಿದರೆ, ಅದರ ಉಪಾಧ್ಯಕ್ಷರಾದ ಪಿ. ಎಂ. ಭಾರ್ಗವ ಅವರು ತಮ್ಮ ಅಭಿಪ್ರಾಯಗಳಿಗೆ ಆಯೋಗದಲ್ಲಿ ಮಾನ್ಯತೆ ದೊರೆಯಲಿಲ್ಲವೆಂದು ಸಾರ್ವಜನಿಕವಾಗಿ ದೂರುವ ಮೂಲಕ ವಿವಾದದ ಧೂಳೆಬ್ಬಿಸಿದ್ದಾರೆ. ಆದರೆ ಜ್ಞಾನ ಆಯೋಗದ ದೂರಗಾಮಿ ಪರಿಣಾಮ ಗಳುಂಟುಮಾಡಬಹುದಾದ ಶಿಫಾರಸ್ಸುಗಳ ಬಗ್ಗೆ ವ್ಯಾಪಕ ಚರ್ಚೆಯ ಅಗತ್ಯವಿದೆ.

ಭಾಷೆ ಕಲಿಕೆಯ ಬಗ್ಗೆ ಆಯೋಗ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸ ಬೇಕೆಂಬ ಶಿಫಾರಸ್ಸು ಮಾಡಿದೆ. ಜಾಗತೀಕರಣದ ದಾರಿಯಲ್ಲಿ ಮುನ್ನಡೆಯಲು ಇದು ಅತ್ಯಗತ್ಯವೆಂದು ಪ್ರತಿಪಾದಿಸಲಾಗಿದೆ. ಆದರೆ ಕಲಿಕೆಯ ಮಾಧ್ಯಮದ ಬಗ್ಗೆ ಮೌನ ತಾಳಿದೆ. ಶೈಕ್ಷಣಿಕವಾಗಿ ಈ ನೀತಿ ದೇಶೀಯ ಹಾಗೂ ಪ್ರಾದೇಶಿಕ ಭಾಷೆಗಳನ್ನು ಎರಡನೇ ದರ್ಜೆಗೆ ದೂಡಿರುವುದು, ಇದರಿಂದ ಅತ್ಯಂತ ಸ್ಪಷ್ಟ. ಈ ನೀತಿ 'ಮಾಹಿತಿ ತಂತ್ರಜ್ಞಾನ' ಮತ್ತು 'ಸಂವಹನ ತಂತ್ರಜ್ಞಾನ' ಕ್ಷೇತ್ರಗಳಲ್ಲಿ ದೇಶೀಯ ಭಾಷೆಗಳನ್ನು ವ್ಯಾಪಕವಾಗಿ ಬಳಸಲು ಸಶಕ್ತಗೊಳಿಸುವ ಪ್ರಯತ್ನಗಳಿಗೆ ಇದರಿಂದ ದೊಡ್ಡ ಹಿನ್ನಡೆಯಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ಉದಾರೀಕರಣವನ್ನು ಮತ್ತಷ್ಟು ತೀವ್ರಗೊಳಿಸಲು ಆಯೋಗ ಅನೇಕ ಶಿಫಾರಸ್ಸುಗಳನ್ನು ಮಾಡಿದೆ. ಆಯೋಗದ ಬಹುಪಾಲು ಶಿಫಾರಸ್ಸುಗಳ ಆಶಯ ಶಿಕ್ಷಣ ರಂಗದಲ್ಲಿ ಸರ್ಕಾರದ ಪಾತ್ರವನ್ನು ಗಣನೀಯವಾಗಿ ಕಡಿಮೆ ಮಾಡುವುದಾಗಿದೆ. ಸರ್ಕಾರದ ಹಿಂತೆಗೆತದಿಂದ ತೆರವಾದ ವಲಯಗಳಲ್ಲಿ ಖಾಸಗಿ ಹೂಡಿಕೆದಾರರು ಬಂಡವಾಳ ಹೂಡಿ ಲಾಭದಾಯಕ ವ್ಯಾಪಾರಕ್ಕೆ ಸದವಕಾಶ ಕಲ್ಪಿಸುವುದಾಗಿದೆ. ಕೇಂದ್ರೀಕೃತ ಶೈಕ್ಷಣಿಕ ಏಕಸ್ವಾಮ್ಯವನ್ನು ಕಳಚಿ ಬಿಸಾಡಲು ಆಯೋಗ ಕರೆ ನೀಡುತ್ತದೆ. ಅಧಿಕಾರಶಾಹಿ ನಿಯಂತ್ರಣವನ್ನು ಸಡಿಲಗೊಳಿಸುವ ಹೆಸರಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರದ ಮಧ್ಯಪ್ರವೇಶವನ್ನು ನಿರಾಕರಿಸಿ ವ್ಯಾಪಾರೀಕರಣಕ್ಕೆ ರತ್ನಗಂಬಳಿ ಹಾಸಿದೆ. ಶಿಕ್ಷಣವನ್ನು

ಯಾವುದೇ ಪ್ರಮುಖ ಮೂಲ ಸೌಕರ್ಯ ಕ್ಷೇತ್ರದಂತೆ ಪರಿಗಣಿಸಿ ಸರ್ಕಾರ ಅದರ ಅಭಿವೃದ್ಧಿಗೆ ಆದ್ಯತೆ ನೀಡಬೇಕು ಎಂದು ಶಿಫಾರಸ್ಸು ಮಾಡಿದೆ. ಇದಲ್ಲದೆ ತೆರಿಗೆ ವಿನಾಯತಿ ನೀಡುವ ಮೂಲಕ ಖಾಸಗಿ ಬಂಡವಾಳ ಮತ್ತು ವಿದೇಶಿ ನೇರ ಬಂಡವಾಳಗಳನ್ನು ಶಿಕ್ಷಣ ಕ್ಷೇತ್ರಕ್ಕೆ ಆಹ್ವಾನಿಸಬೇಕೆಂದು ತಿಳಿಸುತ್ತದೆ.

ಈ ಮೂಲಕ ಅಪಾರ ಪ್ರಮಾಣದ ಹೂಡಿಕೆದಾರರು ಶಿಕ್ಷಣರಂಗದಲ್ಲಿ ಬಂಡವಾಳ ಹೂಡಿ ಲೂಟಿ ಹೊಡೆಯಲು ಮುಕ್ತ ಅವಕಾಶ ಕಲ್ಪಿಸಲಾಗಿದೆ. ವಿಶ್ವವಿದ್ಯಾಲಯಗಳು ಮತ್ತು ಕಾಲೇಜುಗಳಿಗೆ ಗರಿಷ್ಠ ಪ್ರಮಾಣದ ಸ್ವಾಯತ್ತತೆ ನೀಡಬೇಕೆಂದು ಶಿಫಾರಸ್ಸು ಮಾಡಿ ಯು.ಜಿ.ಸಿ. ಮತ್ತು ಎ.ಐ.ಸಿ.ಟಿ.ಇ.ಗಳಂತಹ ಉನ್ನತ ನಿರ್ವಹಣಾ ಮತ್ತು ಪ್ರೋತ್ಸಾಹಕ ಸಂಸ್ಥೆಗಳನ್ನು ಮೂಲೆಗುಂಪು ಮಾಡಿಬಿಟ್ಟಿದೆ. ಉನ್ನತ ಶಿಕ್ಷಣದ ಗುರಿ ಕೇವಲ ದೇಶಭಕ್ತ ರಾಷ್ಟ್ರೀಯ ಪ್ರಜೆಯನ್ನು ರೂಪಿಸುವುದಕ್ಕೆ ಮಾತ್ರ ಸೀಮಿತಗೊಳ್ಳಬಾರದೆಂದು ಲಜ್ಜೆಗೆಟ್ಟು ಹೇಳುವ ಮೂಲಕ ಶಿಕ್ಷಣದ ಸಾಂಪ್ರದಾಯಿಕ ಪಾತ್ರ ಮತ್ತು ಮಹತ್ವಗಳಿಗೆ ಎಳ್ಳುನೀರು ಬಿಟ್ಟಿದೆ. ಏಕಪಕ್ಷೀಯವಾಗಿ ಮೀಸಲಾತಿಯನ್ನು ಈ ವಲಯದ ಮೇಲೆ ಹೇರಬಾರದೆಂದು ಹೇಳುವ ಮೂಲಕ ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನೇ ಶಿಕ್ಷಣ ಕ್ಷೇತ್ರದಿಂದ ಹೊರದಬ್ಬಿದೆ. ಭಾರತದಲ್ಲಿ ಕೇವಲ ಶೇ. ೭ರಷ್ಟು ವಿದ್ಯಾರ್ಥಿಗಳು ಮಾತ್ರ ಉನ್ನತ ಶಿಕ್ಷಣಕ್ಕೆ ಬರುತ್ತಿದ್ದಾರೆ. ಇದು ಅತ್ಯಂತ ಕಡಿಮೆ ಪ್ರಮಾಣ ಎಂದು ಪ್ರಲಾಪಿಸಿ, ಉನ್ನತ ಶಿಕ್ಷಣದ ಲಭ್ಯತೆಯನ್ನು ಶೇ. ೧೫ರ ಪ್ರಮಾಣಕ್ಕಾದರೂ ಹೆಚ್ಚಿಸಲು ೨೦೧೫ರ ವೇಳೆಗೆ ಸುಮಾರು ೧೫೦೦ ಹೊಸ ವಿದ್ಯಾಲಯಗಳನ್ನು ಸ್ಥಾಪಿಸಬೇಕಾದ ಅಗತ್ಯವಿದೆ. ಆದರೆ ಸರ್ಕಾರ ಇಷ್ಟೊಂದು ಅಗಾಧ ಪ್ರಮಾಣದ ಸಂಪನ್ಮೂಲ ಹೂಡಿಕೆ ಮಾಡುವ ಸ್ಥಿತಿಯಲ್ಲಿಲ್ಲದಿರುವುದರಿಂದ ಖಾಸಗಿ ಮತ್ತು ವಿದೇಶಿ ವಿಶ್ವವಿದ್ಯಾಲಯಗಳು ಭಾರತದಲ್ಲಿ ತಮ್ಮ ಶೈಕ್ಷಣಿಕ ಮಂಡಿಗಳನ್ನು ತೆಗೆಯಲು ಅವಕಾಶ ಕಲ್ಪಿಸಬೇಕೆಂದು ವಾದ ಮಂಡಿಸಿದೆ. ಸುಮಾರು ೮೦,೦೦೦ ಭಾರತೀಯ ವಿದ್ಯಾರ್ಥಿಗಳು ಪ್ರತಿ ವರ್ಷ ವಿದೇಶಗಳಲ್ಲಿ ಕಲಿಯಲು ತೆರಳಿ ಇಲ್ಲಿ ಉನ್ನತ ಶಿಕ್ಷಣಕ್ಕೆ ವೆಚ್ಚಮಾಡುವ ೨೦೦ ಪಟ್ಟು ಹಣವನ್ನು ವೆಚ್ಚ ಮಾಡುತ್ತಿದ್ದಾರೆ. ಇದನ್ನು ತಪ್ಪಿಸುವ ಹೆಸರಿನಲ್ಲಿ ವಿದೇಶಿ ವಿಶ್ವವಿದ್ಯಾಲಯಗಳನ್ನು, ಶಿಕ್ಷಣ ಸಂಸ್ಥೆಗಳನ್ನು ಭಾರತದಲ್ಲಿ ಶಾಖೆ ತೆರೆಯಲು ಆಹ್ವಾನಿಸಲಾಗಿದೆ. ಈ ಮೂಲಕ ಭಾರತದ ಸಿರಿವಂತರ ಮಕ್ಕಳಿಗೆ ನಮ್ಮ ನೆಲದಲ್ಲಿಯೇ ಶಿಕ್ಷಣ ನೀಡುವ ವಿದೇಶಿ ಅಂಗಡಿಗಳಿಗೆ ಅವಕಾಶ ಕಲ್ಪಿಸಿದಂತಾಗಿದೆ. ವಾರ್ಷಿಕವಾಗಿ ಒಂದು ಅಂದಾಜಿನಂತೆ ೩ ಬಿಲಿಯನ್ ಡಾಲರ್ ಹಣ ದೋಚಲು ಅನುವು ಮಾಡಿಕೊಡಲಾಗಿದೆ. ಇದರಿಂದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ವಿಶ್ವವಿದ್ಯಾಲಯಗಳು ದೊಡ್ಡ ಸಂಖ್ಯೆಯಲ್ಲಿ ತಲೆಯೆತ್ತಿ ಗುಣಮಟ್ಟದ ಶಿಕ್ಷಣದ ಹೆಸರಿನಲ್ಲಿ ಲೂಟಿ ಆರಂಭಿಸಲಿವೆ.

ಶಿಕ್ಷಣ ರಂಗದಲ್ಲಿ ಉದಾರೀಕರಣ ನೀತಿ ಪ್ರವೇಶವಾದ ಮೇಲೆ ಅಸ್ತಿತ್ವಕ್ಕೆ ಬಂದಿರುವ ಮಾನ್ಯಮಾಡಲ್ಪಟ್ಟ ವಿಶ್ವವಿದ್ಯಾಲಯಗಳು ಯಾವ ರೀತಿ ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಳ್ಳುತ್ತವೆ; ಯಾವ ದರದಲ್ಲಿ ವಿದ್ಯಾರ್ಥಿಗಳಿಂದ ಶುಲ್ಕ ಪಡೆಯುತ್ತವೆ, ಅಲ್ಲಿಯ ಬೋಧಕ ಹಾಗೂ ಇತರ ಸಿಬ್ಬಂದಿಗಳಿಗೆ ನೀಡುತ್ತಿರುವ ವೇತನಗಳೆಷ್ಟು; ಅವರ ಉದ್ಯೋಗ ಭದ್ರತೆ ಮತ್ತು ಸೇವಾಸ್ಥಿತಿಗತಿ ಯಾವ ರೀತಿ ಇದೆ; ಅವುಗಳು ನೀಡುತ್ತಿರುವ ಪದವಿಗಳ ಗುಣಮಟ್ಟವೆಂತಹದು ಎಂಬ ಅಂಶಗಳನ್ನು ಪರಿಶೀಲಿಸಿದರೆ ಸಾಕು, ವಿದೇಶಿ ವಿಶ್ವವಿದ್ಯಾಲಯಗಳು ನಮ್ಮ ದೇಶದಲ್ಲಿ ಎಂತಹ ಶೈಕ್ಷಣಿಕ ಸಂಸ್ಕೃತಿಯನ್ನು ನಿರ್ಮಿಸಬಹುದು ಎಂಬುದು ಸ್ಪಷ್ಟವಾಗುತ್ತದೆ. ಈಗಾಗಲೇ ಭದ್ರವಾಗಿ ನೆಲೆಗೊಂಡಿರುವ ದೇಶೀಯ ಖಾಸಗಿ ಶಿಕ್ಷಣ ಸಂಸ್ಥೆಗಳು ಇನ್ನು ಮುಂದೆ ವಿದೇಶಿ ಶಿಕ್ಷಣ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳೊಂದಿಗೆ 'ಟೈಅಪ್' ಎಂಬ ಕೂಡಿಕೆಗಳನ್ನು ಮಾಡಿಕೊಂಡು ಇಡೀ ದೇಶಾದ್ಯಂತ ತಮ್ಮದೇ ಆದ ಶೈಕ್ಷಣಿಕ ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು, ಗಣಕಯಂತ್ರ, ಅಂತರ್ಜಾಲ, ಅನಿಮೇಶನ್, ಮಲ್ಟಿ ಮೀಡಿಯಾ, ಇ-ಲರ್ನಿಂಗ್, ಆನ್‌ಲೈನ್ ಪರೀಕ್ಷೆ ಮುಂತಾದ ಶೈಕ್ಷಣಿಕ ಆಯುಧ ಸನ್ನದ್ಧವಾಗಿ, ಭಾರತದಲ್ಲಿ ಅತಿ ಕಡಿಮೆ ಕೂಲಿಗೆ ದೊರಕುವ ಸಮೃದ್ಧವಾದ ಮಾನವ ಸಂಪನ್ಮೂಲಾಭಿವೃದ್ಧಿಯ ವೃತ್ತಿಪರ ಗುಲಾಮಿ ಶೈಕ್ಷಣಿಕ ಕಾಲಾಳುಗಳ ಮೂಲಕ ವಿಸ್ತಾರವಾದ ಶೈಕ್ಷಣಿಕ ಸಾಮ್ರಾಜ್ಯಗಳನ್ನು ನಿರ್ಮಾಣ ಮಾಡಿಕೊಳ್ಳಲು ಮುಕ್ತ ಅವಕಾಶ ಇನ್ನು ಮುಂದೆ ದೊರಕುತ್ತದೆ. ಉಚಿತ ಉನ್ನತ ಶಿಕ್ಷಣ ಇನ್ನು ಕನಸಿನ ಮಾತು. ಉನ್ನತ ಶಿಕ್ಷಣಕ್ಕೆ ಸರ್ಕಾರ ಸಹಾಯಧನ ನೀಡುವಂತಿಲ್ಲ. ಉನ್ನತ ಶಿಕ್ಷಣ ಪಡೆಯಲಿಚ್ಛಿಸುವವರು ಯಾರೇ ಆಗಲಿ ಶುಲ್ಕ ಪಾವತಿಸಬೇಕೆಂದು ಹೇಳುವ ಮೂಲಕ ಭಾರತೀಯ ಬಡ ವಿದ್ಯಾರ್ಥಿಗಳನ್ನು ಉನ್ನತ ಶಿಕ್ಷಣದಿಂದ ದೂರ ದಬ್ಬಿದೆ. ಪ್ರತಿ ೨ ವರ್ಷಗಳಿಗೊಮ್ಮೆ ಉನ್ನತ ಶಿಕ್ಷಣದ ಶುಲ್ಕವನ್ನು ಪರಿಷ್ಕರಿಸಲು ತಾಕೀತು ಮಾಡುವ ಆಯೋಗ ಉನ್ನತ ಶಿಕ್ಷಣ ಬಯಸುವ ಬಡ ವಿದ್ಯಾರ್ಥಿಗಳ ಮೇಲೆ ಆರ್ಥಿಕ ಹೊರೆಯನ್ನು ನಿರಂತರವಾಗಿ ಹೆಚ್ಚಿಸಲು ಬಯಸುತ್ತದೆ. ನಿರಂತರ ದುಬಾರಿ ಶುಲ್ಕಗಳನ್ನು ವಿಧಿಸುವ ಮೂಲಕ ಬಡವಿದ್ಯಾರ್ಥಿಗಳನ್ನು ವಿಶ್ವವಿದ್ಯಾಲಯಗಳಿಂದ ದೂರತಳ್ಳಿ ಅದಕ್ಕೆ ಸೇರುವ ವಿದ್ಯಾರ್ಥಿಗಳನ್ನು ಹೇಗೆ ದ್ವಿಗುಣಗೊಳಿಸುತ್ತಾರೆ ಎಂಬುದು ಒಂದು ಯಕ್ಷಪ್ರಶ್ನೆಯಾಗಿದೆ. ಈ ಅಧಿಕ ಹೊರೆಯ ಪಾಪದ ಕಳಂಕವನ್ನು ತೊಡೆದುಹಾಕಲು ಅರ್ಹ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಶುಲ್ಕ ರಿಯಾಯತಿಯಂತಹ ಸೌಲಭ್ಯ ನೀಡುವ ಮೂಲಕ ಅವರನ್ನು ಪ್ರೋತ್ಸಾಹಿಸಬೇಕೆಂದು ಮೊಸಳೆ ಕಣ್ಣೀರು ಹರಿಸಿದೆ.



ಪದವಿ ಶಿಕ್ಷಣದಲ್ಲಿರುವ ವಿದ್ಯಾರ್ಥಿಗಳು ವೃತ್ತಿ ಕೌಶಲ್ಯಗಳನ್ನು ತಮ್ಮ ವಿದ್ಯಾರ್ಥಿ ದೆಸೆಯಲ್ಲಿಯೇ ರೂಪಿಸಿಕೊಳ್ಳಲು ಅವಕಾಶ ಕಲ್ಪಿಸಲು ಕೈಗಾರಿಕೆಗಳಿಗೆ ಮತ್ತು ಶಿಕ್ಷಣ ಸಂಸ್ಥೆಗಳಿಗೆ ನೇರ ಸಂಪರ್ಕ ಕಲ್ಪಿಸಲು ಶಿಫಾರಸ್ಸು ಮಾಡಲಾಗಿದೆ. ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಪಠ್ಯವಿಷಯ, ಪರೀಕ್ಷೆ, ಪದವಿ ಪ್ರದಾನ ಮುಂತಾದವುಗಳ ವಿಷಯದಲ್ಲಿ ಪೂರ್ಣ ಅಧಿಕಾರ ನೀಡಿ ಅವರು ಅವರಿಗೆ ತೋಚಿದಂತಹ ಮಾನದಂಡಗಳನ್ನು ರೂಪಿಸಲು ಪೂರ್ಣ ಸ್ವಾತಂತ್ರ್ಯ ನೀಡಲಾಗಿದೆ. ತೋರಿಕೆಯ ನಿಯಂತ್ರಣಕ್ಕಾಗಿ ಹಲ್ಲಿಲ್ಲದ ಉನ್ನತ ಶಿಕ್ಷಣ ನಿಯಂತ್ರಣ ಪ್ರಾಧಿಕಾರದ ರಚನೆಯನ್ನು ಸೂಚಿಸಲಾಗಿದೆ.

ಪ್ರಾಕೃತಿಕ, ದೈಹಿಕ, ಕೃಷಿ, ಆರೋಗ್ಯ ಮತ್ತು ಸಾಮಾಜಿಕ ವಿಜ್ಞಾನ ಕ್ಷೇತ್ರದಲ್ಲಿ ಹೊಸ ಜ್ಞಾನದ ಬಳಕೆ ಕುರಿತು ಅಗತ್ಯ ಸಲಹೆ ನೀಡಲು 'ರಾಷ್ಟ್ರೀಯ ವಿಜ್ಞಾನ ಮತ್ತು ಸಾಮಾಜಿಕ ವಿಜ್ಞಾನ ಪ್ರತಿಷ್ಠಾನ' ಎಂಬ ಬಿಳಿ ಆನೆಯನ್ನು ವಾರ್ಷಿಕವಾಗಿ ೧೨೫೦ ಕೋಟಿ ರೂ.ಗಳ ಸರ್ಕಾರಿ ಅನುದಾನದಲ್ಲಿ ಸ್ಥಾಪಿಸಲು ಶಿಫಾರಸ್ಸು ಮಾಡಲಾಗಿದೆ.

ಒಂದು ಗೀಗಾಬೈಟ್ ಬ್ಯಾಂಡ್‌ವಿಡ್ತ್ ಸಾಮರ್ಥ್ಯದ ವಿದ್ಯುನ್ಮಾನ ರಾಷ್ಟ್ರೀಯ ಜಾಲವೊಂದನ್ನು ನಿರ್ಮಾಣ ಮಾಡುವ ಮೂಲಕ ವಿಶ್ವವಿದ್ಯಾಲಯಗಳು, ಕೃಷಿ ವಿಜ್ಞಾನ, ತಂತ್ರಜ್ಞಾನ ಪ್ರಯೋಗಾಲಯಗಳು ಗ್ರಂಥಾಲಯಗಳನ್ನು ಸುಮಾರು ೫೦೦೦ ಘಟಕಗಳುಳ್ಳ ಜಾಲಗಳಲ್ಲಿ ಹೆಣೆದಿಡಲು ಉದ್ದೇಶಿಸಲಾಗಿದೆ. ಇಂತಹ ಬೃಹತ್ ಜಾಲದ ನಿರ್ಮಾಣದ ಮೂಲಕ ದೇಶೀಯ ಶಿಕ್ಷಣ ಸಂಸ್ಥೆಗಳು ಅಪಾರ ಶ್ರಮ ವಹಿಸಿ ಸುಮಾರು ವರ್ಷಗಳಿಂದ ಸಂಗ್ರಹಿಸಿಟ್ಟಿದ್ದ ಜ್ಞಾನ ಭಂಡಾರವನ್ನು ವಿದೇಶಿ ದರೋಡೆಗೆ, ದುರುಪಯೋಗಕ್ಕೆ ಮುಕ್ತವಾಗಿ ತೆರೆದಿಡಲು ಅವಕಾಶ ಕಲ್ಪಿಸಲಾಗಿದೆ. ಇದೇ ಜಾಲವನ್ನು ಬಳಕೆ ಮಾಡಿಕೊಂಡು ವಿದೇಶಿ ಶಿಕ್ಷಣ ಕಂಪನಿಗಳು ಭಾರತೀಯ ವಿದ್ಯಾರ್ಥಿಗಳ ಮಿದುಳು ತೊಳೆಯುವ ಅವಕಾಶ ಕಲ್ಪಿಸಿವೆ. ಈ ಜಾಲದ ಮೂಲಕ ತಜ್ಞರು ದೂರ ಶಿಕ್ಷಣದ ಮೂಲಕ ಲಕ್ಷಾಂತರ ಮಂದಿ ವಿದ್ಯಾರ್ಥಿಗಳನ್ನು ತಮ್ಮ ಆಶಯಗಳಿಗನುಗುಣವಾಗಿ ರೂಪಿಸಲು ಸಾಧ್ಯವಾಗುತ್ತದೆ.

ಏಕೆಂದರೆ ಖಾಸಗಿ/ವಿದೇಶಿ ಶಿಕ್ಷಣ ಸಂಸ್ಥೆಗಳು ನಿಗದಿಪಡಿಸುವ ದುಬಾರಿ ಶುಲ್ಕಗಳನ್ನು ಬಡ ಮತ್ತು ಮಧ್ಯಮ ವರ್ಗದವರು ತುಂಬುವ ಸಾಮರ್ಥ್ಯ ಇಲ್ಲ. ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣ ಇನ್ನು ಮುಂದೆ ಬಡವರಿಗೆ ಗಗನ ಕುಸುಮವೇ. ಎಲ್ಲರನ್ನು ಆಲಂಗಿಸಿಕೊಳ್ಳಬಹುದಾದ ಶಿಕ್ಷಣ ಸೌಲಭ್ಯಗಳು ಇನ್ನು ಮುಂದೆ ಉಳ್ಳವರ ವಶವಾಗಲಿವೆ. ಮಾರುಕಟ್ಟೆಯ ಆದ್ಯತೆಗಳು ಶಿಕ್ಷಣದ ಆದ್ಯತೆಗಳಾಗಿ, ಮಾರ್ಪಟ್ಟು ಆರ್ಥಿಕ ರಂಗದ ಲೂಟಿ ಮತ್ತು ದರೋಡೆ ಶಿಕ್ಷಣ ಕ್ಷೇತ್ರದಲ್ಲೂ ನೆಲೆಗೊಳ್ಳುತ್ತವೆ. ದೇಶೀಯ ಭಾಷೆ, ಸಂಸ್ಕೃತಿ, ಜ್ಞಾನ ವಿಕಾಸ ಮತ್ತು ಅಭಿವೃದ್ಧಿಗಳು ಅವಗಣನೆಗೆ ಗುರಿಯಾಗುವ ಅಪಾಯ ನಿಚ್ಚಳವಾಗಿದೆ.

ನಮ್ಮ ವಿಶ್ವವಿದ್ಯಾಲಯಗಳು ಈ ವಿದೇಶಿ ಸಂಸ್ಥೆಗಳ ಬಾಲಂಗೋಚಿಗಳಾಗುತ್ತವೆ. ಈಗಾಗಲೇ ನಿರ್ಮಾಣಗೊಂಡಿರುವ ಬೃಹತ್ ಶೈಕ್ಷಣಿಕ ಮೂಲಸೌಕರ್ಯಗಳನ್ನು, ಮಾನವ ಸಂಪನ್ಮೂಲಗಳನ್ನು, ಆಧುನೀಕರಿಸಿ ಮೇಲ್ದರ್ಜೆಗೇರಿಸುವ ಹೆಸರಿನಲ್ಲಿ ಅವುಗಳನ್ನು ಆಪೋಶನ ತೆಗೆದುಕೊಳ್ಳಲಿವೆ. ಈ ರೀತಿಯ ಸುಧಾರಣೆಗಳಿಂದ ಭಾರತೀಯ ಶಿಕ್ಷಣ ರಂಗವೇ ವಾಣಿಜ್ಯೀಕರಣಗೊಳ್ಳುವುದು ಅತ್ಯಂತ ನಿಚ್ಚಳವಾಗಿದೆ.


ಸಿ. ಯತಿರಾಜು
ಪ್ರಾಚಾರ್ಯರು, ಕಾಳಿದಾಸ ಪ. ಪೂ. ಕಾಲೇಜು, ತುಮಕೂರು

**ಹಂಪಿ ಪರಿಸರದಲ್ಲಿ ಕಂಡುಬರುವ ಸಾಮಾಜಿಕ ಆಚರಣೆಗಳಿಗೂ ಇಲ್ಲಿನ ಗ್ರಾಮ ದೈವಗಳ ಸಂಪ್ರದಾಯ ಆಚರಣೆಗಳಿಗೂ ಪರಸ್ಪರ ಸಂಬಂಧವಿದೆ. ಕೆಳಜಾತಿ ಸಮುದಾಯಗಳ ಜನರಲ್ಲಿ ಹೆಣ್ಣುಮಕ್ಕಳನ್ನು ಮನೆತನಕ್ಕೆ ನಿಲ್ಲಿಸುವ ಆಚರಣೆ ಜನಪ್ರಿಯವಾಗಿದೆ. ಇದನ್ನು ಪುರುಷ ಸಮಾಜದ ಪರಿಭಾಷೆಯಲ್ಲಿ ಬಸವಿ ಬಿಡುವುದು ಅಥವಾ ಮುತ್ತು ಕಟ್ಟಿಸುವ ಪದ್ಧತಿ ಎಂದೂ ಕರೆಯಲಾಗುತ್ತದೆ.**

**ಹಂ**ಪಿ ಇಂದು ಧಾರ್ಮಿಕ, ಚಾರಿತ್ರಿಕ-ಪುರಾತತ್ವೀಯ ಹಾಗೂ ಪ್ರವಾಸಿ ತಾಣವಾಗಿ ಪ್ರಸಿದ್ಧವಾಗಿದೆ. ಈ ಪ್ರದೇಶ ಪಂಪಾದೇವಿಯ ನೆಲೆಯೆಂದೂ ದಕ್ಷಿಣ ಕಾಶಿಯೆಂದೂ ಪ್ರತೀತಿ. ವಿರೂಪಾಕ್ಷನಾದ ಶಿವನು ಇಲ್ಲಿನ ಪಂಪಾದೇವಿಯನ್ನು ವರಿಸಿದನೆಂದು ಪುರಾಣ ಕತೆ ಹೇಳುತ್ತದೆ. ಆದರೂ ಪಂಪಾದೇವಿ ಪಾರ್ವತಿಯೇ ಅಥವಾ ಇತರ ಕುಲ ದೈವವೆ ಎಂಬುದು ಸ್ಪಷ್ಟವಾಗುವುದಿಲ್ಲ. ಹಾಗಾಗಿ ಇಲ್ಲಿ ಸಾಮಾಜಿಕ ಜೀವನದ ಮೇಲೆ ಧಾರ್ಮಿಕ ರಾಜಕಾರಣ ಉಂಟುಮಾಡಿರುವ ಪ್ರಭಾವ-ಪರಿಣಾಮ ಮುಖ್ಯವಾಗಿರುವಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಸಾಮಾಜಿಕ ಜೀವನ ಮೌಲ್ಯಗಳು ಮತ್ತು ಸಾಮಾಜಿಕ ಶ್ರೇಣೀಕರಣಗಳಿಗಿರುವ ಸಂಬಂಧ ಕುತೂಹಲಕ್ಕೆ ಎಡೆಕೊಡುತ್ತದೆ. ಹಂಪಿ ಪರಿಸರದ ಗ್ರಾಮಗಳ ಕೆಳ ಸಮುದಾಯದ ಸಮಾಜಗಳು, ಅವುಗಳ ಸಾಮಾಜಿಗ ಸ್ಥಿತಿಗತಿಗಳು, ನಂಬಿಕೆ ಆಚರಣೆಗಳು ವಿಶಿಷ್ಟವಾಗಿ ಎದ್ದುಕಾಣುತ್ತವೆ. ಸಂಸ್ಕೃತಿಯ ಅಂಗವಾದ ಧರ್ಮ ಮತ್ತು ಸಾಮಾಜಿಕ ಜೀವನ ಹೇಗೆ ಒಂದೇ ದಿಸೆಯಲ್ಲಿ ಕಾರ್ಯ ನಿರ್ವಹಿಸುತ್ತವೆ, ಕೆಳವರ್ಗಗಳ ದೈಪ ಮತ್ತು ಸಾಮಾಜಿಕ ನಂಬಿಕೆ ಆಧರಿಸಿಯೆ ಮೇಲುವರ್ಗಗಳು ಹೇಗೆ ಸಾಂಸ್ಕೃತಿಕ ಯಜಮಾನಿಕೆ ಸಾಧಿಸುತ್ತವೆ ಎಂಬುದು ಪರಿಶೀಲಿಸಲು ಅರ್ಹವಾಗಿ ಕಾಣುತ್ತದೆ. ಪಂಪಾಕ್ಷೇತ್ರದ ಅಧಿದೈವ ಕಲ್ಪನೆ ಮತ್ತು ಆ ದೈವಕ್ಕೆ ನಡೆದುಕೊಳ್ಳುವ ಜನರ ಸಾಮಾಜಿಕ ಜೀವನದ ಮಿತಿಯಲ್ಲಿ ಈ ಅಂಶವನ್ನು ನೋಡಬಹುದು.

### ಪಂಪಾತೀರ್ಥ-ಪಂಪಾಕ್ಷೇತ್ರ

ಹೂವಿನ ಹಡಗಲಿ ಪ್ರದೇಶದಲ್ಲಿ ತುಂಗಭದ್ರಾ ನದಿಯನ್ನು 'ಹಂಪಿಹೊಳಿ'ಯೆಂದು ಕರೆಯಲಾಗುತ್ತದೆ. ಹಂಪಾ ಪದದ ಮೂಲ ರೂಪ 'ಪಂಪಾ'. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಈ ಪದ ನದಿಯನ್ನು ಹೆಸರಿಸುತ್ತದೆ. ಈ ಪ್ರದೇಶದಲ್ಲಿ ಸಮಾಜದ ಎಲ್ಲ ಜಾತಿ ಮತಗಳಲ್ಲೂ ಈ ಪದ ಬಳಕೆಯಲ್ಲಿದೆ. ಪಂಪಾ ಎಂಬ ಸ್ಥಳನಾಮದಿಂದ ವ್ಯಕ್ತಿನಾಮ ಹುಟ್ಟಿದೆಯೆಂದು ಚಿದಾನಂದಮೂರ್ತಿ ಹೇಳುತ್ತಾರೆ. ಹಂಪಿಹೊಳಿಯೆಂದರೆ ಸೀಳುಳ್ಳ, ಭಾಗಗಳುಳ್ಳ ನದಿ ಎಂದರ್ಥ. ಹೂವಿನ ಹಡಗಲಿಯಿಂದ ಕಂಪ್ಲಿವರೆಗೆ ತುಂಗಭದ್ರಾ ನಡುಗಡ್ಡೆಗಳನ್ನು ನಿರ್ಮಿಸಿ ಸೀಳುಗಳನ್ನು ಉಂಟುಮಾಡಿ ಹರಿಯುತ್ತದೆ. ಇದರಿಂದ ಈ ನದಿಗೆ ಈ ಹೆಸರು ಬಂದಿದೆ ಎಂಬ ಭೌಗೋಳಿಕ ಸಮರ್ಥನೆ ಹಂಪಿ ಶಾಸನ ಸಂಪುಟದಲ್ಲಿದೆ. ಪಂಪಾ ಎಂಬುದು ನದಿಯ ನಿರ್ದಿಷ್ಟ ಸ್ಥಳದ ಪ್ರಾದೇಶಿಕ ವಿಶಿಷ್ಟತೆಯನ್ನು ಸೂಚಿಸುವ ಜನಪದ ಬಳಕೆಯ ಪದವೆಂದು ಇದರಿಂದ ತಿಳಿಯುತ್ತದೆ.

ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿ ಹರಿಯುವ ತುಂಗಭದ್ರಾ ನದಿಯನ್ನೆ ಪಂಪಾತೀರ್ಥವೆಂದೂ ಅದರ ಸುತ್ತಲ ಪ್ರದೇಶವನ್ನೇ ಪಂಪಾಕ್ಷೇತ್ರವೆಂದೂ ಇಲ್ಲಿಯ ವಾಸಸ್ಥಳವನ್ನು ಪಂಪಾಪುರ, ಪಂಪಾ ಪಟ್ಟಣ ಎಂದೂ ಕಾವ್ಯ, ಶಾಸನ, ಪುರಾಣಗಳಲ್ಲಿ ಹೆಸರಿಸಿದೆ. ಇಲ್ಲಿ ತುಂಗಭದ್ರಾ ನದಿ ಪೂರ್ವಾಭಿಮುಖವಾಗಿ ಹರಿದು

# ಪಂಪಾಕ್ಷೇತ್ರದ ಅಧಿದೈವ ಕಲ್ಪನೆ ಕುರಿತು



ಶ್ರೀಧರ ಪಿಸ್ಸೆ

ಉತ್ತರಕ್ಕೆ ತಿರುಗುತ್ತದೆ. ನದಿಯ ಈ ಸ್ಥಳವನ್ನು ಪವಿತ್ರ ತೀರ್ಥವೆಂದು ನಂಬಲಾಗುತ್ತದೆ. ಇದನ್ನು ಪುರಸ್ಕರಿಸಿದರೆ, ಇದೀಗ ಚಕ್ರತೀರ್ಥವೆಂದು ಕರೆಯಲಾಗುತ್ತಿರುವ ಸ್ಥಳವೆ ಪಂಪಾತೀರ್ಥ-ಪಂಪಾಕ್ಷೇತ್ರ ಎನಿಸುತ್ತದೆ. ಹಂಪಿ ಜಾತ್ರೆಯ ಮುಖ್ಯ ಆಚರಣೆಯಾದ ಫಲಪೂಜೆಯೂ ಚಕ್ರತೀರ್ಥದ ಬಳಿಯೆ ನಡೆಯುತ್ತಿದೆ. ಈ ಸ್ಥಳದ ವೈಶಿಷ್ಟ್ಯ ಅಥವಾ ಪವಿತ್ರತೆ ಜನರ ನಂಬಿಕೆಯ ಭಾಗವಾಗಿ ಬೆಳೆದಿದ.

ನಿಜವಾಗಿ ಬೇಡುವವರಿಗೆ ಭುಕ್ತಿ, ಮುಕ್ತಿ ನೀಡಿ ರಕ್ಷಿಸುವ ಗುಣವುಳ್ಳ ದೈವಕ್ಕೆ ಪಂಪಾ ಎಂದು 'ಪಂಪಾ ಮಹಾತ್ಮೆ'ಯಲ್ಲಿ ಹೇಳಲಾಗಿದೆ. ಅಂಥ ದೈವ ಮುಳುಗು ಹಾಕಿದ ಪ್ರದೇಶವನ್ನು ಪಂಪಾ ಸರೋವರವೆಂದೂ ಅದರ ದಡದಲ್ಲಿರುವ ದೈವವನ್ನು ಪಂಪಾಂಬೆ ಎಂದೂ ಕರೆಯಲಾಗಿದೆ. ಹೀಗೆ ನದಿಯೊಂದರ ಪ್ರಾದೇಶಿಕ ವೈಶಿಷ್ಟ್ಯತೆಯ ಬಗ್ಗೆ ಹೇಳುವ ಪದವೊಂದು ಪುರಾಣ ಕತೆಯಲ್ಲಿ ಸ್ತ್ರೀ ದೈವರೂಪ ಧರಿಸಿದೆ. ಭಾರತೀಯ ಪುರಾಣ ಕತೆಗಳಲ್ಲಿ ನದಿ, ನಾಡು, ಪರ್ವತಗಳಿಗೆ ಹೆಣ್ಣುತನವನ್ನು ಆರೋಪಿಸಿ ದೈವತ್ವಕ್ಕೇರಿಸಿರುವ ಸಾಮಾನ್ಯ ಸಂಗತಿ ಇಲ್ಲೂ ನಡೆದಿದೆ. ರಾಮಾಯಣ, ಮಹಾಭಾರತಗಳ ಪ್ರಸಂಗಗಳನ್ನು ಸಾಂದರ್ಭಿಕವಾಗಿ, ವೈಷ್ಣವ ಪ್ರಸಂಗಗಳನ್ನು ಆಂಶಿಕವಾಗಿ ಮತ್ತು ಶೈವ ಪ್ರಸಂಗಗಳನ್ನು ಪ್ರಧಾನವಾಗಿ ನಿರೂಪಿಸುವ ಈ 'ಪಂಪಾ ಮಹಾತ್ಮೆ', ಶೈವ ಕೇಂದ್ರಿತ ವೈದಿಕ ಚಿಂತನಾ ಕ್ರಮವನ್ನು ಒಳಗೊಂಡಿದೆ. ಆದರೂ ಸ್ಥಳೀಯ ಭೌಗೋಳಿಕ ವಿಶಿಷ್ಟತೆ ಕುರಿತ ನಂಬಿಕೆಗಳನ್ನು ಯಥಾವತ್ತಾಗಿ ತನ್ನ ಚಿಂತನಾ ಕ್ರಮದ ಭಾಗವಾಗಿ ಮಂಡಿಸಿದೆ.

**ಪಂಪಾದೇವಿ**

ಈ ದೈವವನ್ನು ಬ್ರಹ್ಮನ ಮಾನಸ ಪುತ್ರಿಯೆಂದು ಕರೆದ ಪಂಪಾ ಮಹಾತ್ಮೆ ಆಕೆಯ ಕತೆಯನ್ನು ಚಾಕ್ಷುಷ ಮನ್ವಂತರದಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಿ ಪರಾಶಕ್ತಿ ರೂಪಿಣಿಯೆಂದು ಹೆಸರಿಸುತ್ತದೆ. ತನ್ನ ತಂದೆಯ ಅಪ್ಪಣೆಯಂತೆ ಹೇಮಕೂಟ ಪರ್ವತದ ಉತ್ತರಕ್ಕಿರುವ ಸರೋವರದಲ್ಲಿ ಆಕೆ ನಿತ್ಯ ಸ್ನಾನ ಮಾಡಿ ಉಗ್ರ ತಪಸ್ಸನ್ನಾಚರಿಸಿ, ವಿರೂಪಾಕ್ಷನನ್ನು ಮೆಚ್ಚಿಸಿ ಆತನಿಗೆ ಸತಿಯಾಗುತ್ತಾಳೆ. ಅವಳನ್ನು ವರಿಸಿದ ಶಿವನು ಆಕೆಯನ್ನು ಸಂತೋಷಪಡಿಸಲು ಆ ಕ್ಷೇತ್ರಕ್ಕೆ ಪಂಪಾಕ್ಷೇತ್ರವೆಂದೂ

## ವಸಂತ ದಹನ



ಪ್ರಿಯೆ,
ನಿನ್ನ ಕೋಮಲ ಕಾಯ ನಡೆವ
ಕ್ರೂರ ಪಾದಗಳ ಕೆಳಗೆ ಅಪ್ಪಚ್ಚಿಯಾಗಿದೆ ;
ಆ ವ್ರಣಗಳು ಹೆಪ್ಪುಗಟ್ಟದೆ ರಕ್ತ ತೊಟ್ಟಿಕ್ಕುತಿದೆ.
ಹುಣ್ಣಿಮೆಯ ಚಂದ್ರನೂ ಅದನ್ನು ಸುಡುವ ಉತ್ಸಾಹದಲ್ಲಿದ್ದಾನೆ;
ನೊಣಗಳು ನಿನ್ನ ಹೆಜ್ಜೆಯೊಂದಿಗೆ
ಹೆಜ್ಜೆ ಹಾಕಿವೆ ಹಸಿ ರಕ್ತವ ಮೂಸುತ್ತ
ಇನ್ನಾರ ನಂಬುಗೆಯಲಿ ಉಸಿರಾಡುವೆನೆಂಬ ಸಂಕಟದ
ಉರಿ ಕೊಲ್ಲುತ್ತಿದೆ ನಿನ್ನ ಹಗಲಿರುಳು.

ಪ್ರಿಯೆ,
ಹೂವಿನ ಪಕಳೆಗಳಂಥ ನಿನ್ನ ಹೃದಯವ ಮೆಟ್ಟಿದ
ಯಾವ ಪಾದಗಳಿಗೂ ಅದರ ಎಚ್ಚರವಿಲ್ಲ;
ನೀನು ಮಿಸುಕಾಡಿ ತೋರಿದ ಪ್ರತಿಭಟನೆಯ ಕಾವು ತಾಕಿಲ್ಲ
ಅಥವಾ ನಿನ್ನಂಥ ಮುಳ್ಳುಗಳಿಲ್ಲದ ಪಕಳೆಗಳ ಭಯವೇಕೆ ಅವಕೆ ?
ರಕ್ತಗರೆವ ನೀನು ಅವರ ಕಣ್ಣೀರ ನಿರೀಕ್ಷಿಸಿ ದುಃಖಿಸುವೆಯೇಕೆ ?

ಮೊದಲು ಅವರ ಪಾದ ಕಳಕೊಂಡಿರುವ ಸ್ಪರ್ಶಶಕ್ತಿ
ಮರಳಿ ಬರುವಂತೆ ಪ್ರಾರ್ಥಿಸು;
ಕಣ್ಣೀರ ಚಿಲುಮೆ ನಿನ್ನಲ್ಲಾದರೂ ಜೀವಂತವಿರಲಿ
ಅಥವಾ ಸತ್ತಿರಲೂಬಹುದಾದ
ಅವರ ಇಂದ್ರಿಯಗಳಿಗೆ ಮುಲಾಮು ಹಚ್ಚಿ
ಮರುಜೀವ ನೀಡಿದ ಧನ್ಯತೆಗೆ ಪಾತ್ರಳಾಗು.
ಬಹುಶಃ ಈಗಾಗಲೆ ಅವರ ಪಾದಶಕ್ತಿ ಸತ್ತಿರುವುದರಿಂದಲೇ
ಸ್ಪರ್ಶ ಕಳಕೊಂಡು ಉರುಳುತ್ತಿವೆ
ಹೂವ ಪಕಳೆಗಳ ಮೇಲೆ ಚಿತೆಯಂತೆ ;
ಕಿಚ್ಚನ್ನು ಮೈಗೆ ಹೊತ್ತಿಸಿಕೊಂಡು,
ಉದುರಿ ನಿಂತರೂ ಮತ್ತೆ ಜೀವ ಧರಿಸಲು
ಕಾತರಿಸುತ್ತಿರುವ ಒಣ ಎಲೆಗಳ ಮೇಲೆ ಹಾಯ್ದು
ಬನಕೆ ನುಗ್ಗಿ ನರ್ತಿಸಿವೆ
ವಸಂತದಲಿ ಚಿಗಿತಿರುವ ಚಿಗುರನು ದಹಿಸಿ ತನ್ನೊಂದಿಗೆ
ಬೋಳು ದೇಹದ ಮೇಲಿನ ತುಳಿದ ಪಾದ ಸಂಬಂಧವನ್ನು
ಕವಿದ ಹೊಗೆ ಮೋಡ ಎಲ್ಲೆಲ್ಲು
ಬೆಳಕಿರಣ ನೆಲ ತಾಗದೆ ಅಪರಾಹ್ನವೂ ಮಬ್ಬುಕತ್ತಲು

ಪ್ರಿಯ, ಸಾಕು ನಿಲ್ಲಿಸು ನಿನ್ನ ಸಾಂತ್ವನ, ಪ್ರಲಾಪವನ್ನು
ಮೊದಲು ನಿನ್ನ ಪಾದದಡಿ ನಲುಗುತ್ತಿರುವ
ನನ್ನ ಹೃದಯವನ್ನು ನನಗೆ ಬಿಡು ಉಸಿರಾಡಿಕೊಳ್ಳುತ್ತೇನೆ;
ಅಳಿದುಳಿದ ವಸಂತದ ಪಕಳೆಗಳ ಜತೆ
ಅವುಗಳ ಮರೆಯಲ್ಲಿರುವ ಒಂದಿಷ್ಟು ತಂಗಾಳಿಯ ಆಲಿಂಗನದಲಿ.

**ರಂಗನಾಥ ಕಂಟನಕುಂಟೆ**
ಕನ್ನಡ ಅಧ್ಯಾಪಕ, ಕ್ರೈಸ್ಟ್ ಪದವಿ ಪೂರ್ವ ಕಾಲೇಜು, ಹೊಸೂರು ರಸ್ತೆ
ಬೆಂಗಳೂರು - ೫೬೦೦೨೯

ಸರೋವರಕ್ಕೆ ಪಂಪಾ ಸರೋವರವೆಂದೂ ಹೆಸರಿಟ್ಟು, ತನ್ನನ್ನು ಪಂಪಾಪತಿಯೆಂದು ಕರೆದುಕೊಳ್ಳುತ್ತಾನೆ. ಇವು ಸ್ಥಳೀಯ ಪಂಪಾತೀರ್ಥದ ದೈವವನ್ನು ವೈದಿಕ ಸಂಸ್ಕೃತಿಯ ಶೈವಪಂಥ ತನ್ನ ತೆಕ್ಕೆಗೆ ತೆಗೆದುಕೊಳ್ಳುವ ವಿವರಗಳು. ಹಾಗಾಗಿಯೆ ವಿರೂಪಾಕ್ಷನ ಉತ್ತರ ದಿಗ್ಭಾಗದಲ್ಲಿ ಪಂಪಾದೇವಿಯ ಸ್ಥಾನವಿದೆಯೆಂದು ಆಕೆ ನೆಲೆ ನಿಂತ ಸ್ಥಾನವನ್ನು ತನ್ನ ಕತೆಗೆ ಅನುಗುಣವಾಗಿ ನಿರ್ದೇಶಿಸಿದೆ. ಈ ದೈವವನ್ನೆ ದುರ್ಗೆ, ಗೌರೀ, ಮಾತೃ, ಲಲಿತೆ, ಆರ್ಯೆ ಎಂದು ಹೆಸರಿಸಿದೆ. ಯಾವ ಪೀಠಗಳು ಆದಿಶಕ್ತಿಯಿಂದ ಪಾಲಿಸುವುವೋ ಆ ಪೀಠಗಳಲ್ಲಿ 'ಪಂಪಾ' ಎಂಬ ಹೆಸರಿನ ಪರಮೇಶ್ವರಿ ವಾಸಿಸುತ್ತಾಳೆಂದು ಹೇಳಿದೆ. ಪಾರಮೇಶ್ವರಾಗಮದಲ್ಲಿ ಹೊಗಳಿರುವ ಪಂಪಾಕ್ಷೇತ್ರದ ಶಕ್ತಿ ಪಂಪಾದೇವಿಯೆ ಆಗಿದ್ದಾಳೆಂದು ಹೇಳಿ ಗಿರಿಜೆಯ ಪ್ರತಿರೂಪವಾಗಿ ಚಿತ್ರಿಸಿದೆ ಮತ್ತು ಶಕ್ತಿ ದೇವತೆಯನ್ನಾಗಿಸಿದೆ. ಪಂಪಾ ಸರೋವರದ ಪಂಪಾಂಬಿಕೆ ಪೀಠ ತತ್ವಶಕ್ತಿಗಳಿಂದ ಸುತ್ತುವರೆದಿದ್ದು ನವವಿಧ ಶಕ್ತಿಯರಿಂದ ಸೇವನೆಯಾಗುತ್ತದೆಯೆಂದೂ ಆ ಮೂರ್ತಿಯನ್ನು ಶ್ರೀಚಕ್ರ ಸಾಮ್ರಾಜ್ಞೆ ಪಂಪಾಂಬಿಕೆ ಎಂದೂ ಹೇಳಿದೆ. ಪಂಪಾಕ್ಷೇತ್ರವನ್ನು ಶಾಕ್ತ ಕ್ಷೇತ್ರವಾಗಿ ಬಿಂಬಿಸಿದೆ.

ಆದರೆ, ಸೂತ ಪುರಾಣಕರು ಹೇಳಿದ ಪಂಪಾ ಕಥೆಯನ್ನು ಪಾರ್ವತಿದೇವಿ ಭಕ್ತಿಯಿಂದ ಕೇಳಿ ಷಣ್ಮುಖನನ್ನು ಕರೆದು ಅವನಿಗೆ ಹೇಳಿದಳೆಂದು ಈ ಶೈವ ಪುರಾಣ ನಿರೂಪಿಸಿದೆ. ಅಂದರೆ ಪಂಪಾದೇವಿಯನ್ನು ಪಾರ್ವತಿಯ ಪ್ರತಿರೂಪವಾಗಿ ಚಿತ್ರಿಸಿದರೂ ಪಾರ್ವತಿ ಮತ್ತು ಪಂಪಾದೇವಿಯನ್ನು ಏಕವಾಗಿಸಿಲ್ಲ. ಹಾಗಾಗಿ ಪಂಪಾಂಬಿಕೆ ಮತ್ತು ಗಿರಿಜೆ ಬೇರೆ ಬೇರೆ ಎಂಬ ಅಭಿಪ್ರಾಯಕ್ಕೆ ಸಮರ್ಥನೆ ಒದಗುತ್ತದೆ.

ಪಂಪಾ ಸರೋವರದ ದಡದಲ್ಲಿರುವ ದೈವವನ್ನು ಜೈನರು ಯಕ್ಷಿಯೆಂದೂ ಕರೆಯುತ್ತಾರೆ. ಇತ್ತೀಚೆಗೆ ಈ ದೈವವನ್ನು ಜಯಲಕ್ಷ್ಮಿ ಎಂದೂ ಕರೆಯುವ ರೂಢಿಯಿದೆ. ಇದೇ ದೈವವನ್ನು ಸೀತಾದೇವಿಯೆಂದು ವಿ. ಸೀ. ತಮ್ಮ ಪಂಪಾಯಾತ್ರೆಯಲ್ಲಿ ದಾಖಲಿಸಿದ್ದಾರೆ. ಇವು ಕಾಲಾನಂತರದಲ್ಲಾದ ಬೆಳವಣಿಗೆಗಳೇ ಆದರೂ ಶೈವ ಪುರಾಣ ಸ್ಥಳೀಯ ಸಂಗತಿಗಳನ್ನು ಉಳಿಸಿಕೊಂಡು ತನ್ನದೆ ಪರಂಪರೆಯನ್ನು ಬೆಳೆಸಲು ಪ್ರಯತ್ನಪಟ್ಟಿದೆ. ಜೈನ ಮತ್ತು ವೈಷ್ಣವ ದೃಷ್ಟಿಕೋನಗಳು ತಮ್ಮ ಮತ ಸಂಬಂಧಿತ ಗ್ರಹಿಕೆಯನ್ನು ಆರೋಪಿಸಿವೆ.

ಹೂವಿನ ಹಡಗಲಿ-ಕಂಪ್ಲಿ ಪ್ರದೇಶದಲ್ಲಿ ನದಿಯ ಪಕ್ಕದಲ್ಲಿ ವಾಸಿಸುವ ಜನತೆ ಆರಾಧಿಸಲು ಆರಂಭಿಸಿದ ದೈವಕ್ಕೆ ಪಂಪಾ ಎಂಬ ಹೆಸರು ಬಳಕೆಯಲ್ಲಿದೆ. ಆ ನಂತರದಲ್ಲಿ ಬೆಳೆದ ಊರಿಗೂ ಈ ದೈವದ ಹೆಸರೇ ಬಳಕೆಗೆ ಬಂದಿದೆ ಎಂದು ಪಂಪಾಕ್ಷೇತ್ರದ ಸ್ಥಳನಾಮ ಮೂಲ ಸೂಚಿಸುತ್ತದೆ. ಪ್ರಾದೇಶಿಕ ವಿಶಿಷ್ಟತೆಯ ಪದವೊಂದು ಹೇಗೆ ಆ ಪ್ರದೇಶದ ಸಮಾಜ ಮತ್ತು ಸಂಸ್ಕೃತಿಯ ಭಾಗವಾಗಿದೆಯೆಂದು ಹೇಳುತ್ತದೆ. ಸ್ಥಳೀಯ ಪ್ರಾದೇಶಿಕ ದೈವಗಳಿಗೂ ಆ ಸಮಾಜದ ಸಂಪ್ರದಾಯ, ಆಚರಣೆಗಳಿಗೂ ಸಂಬಂಧ ಕಲ್ಪಿಸಿ ಇಲ್ಲಿನ ಸಾಂಸ್ಕೃತಿಕ ಮಹತಿಯನ್ನು ಕಾಣಿಸುತ್ತದೆ. ಇದು ಪಂಪಾದೇವಿ ಯಾರು ಎಂಬ ಪ್ರಶ್ನೆಗೆ ಉತ್ತರ ಅಡಗಿಸಿಕೊಂಡಂತಿದೆ.



'ಸರಿಗಮ' ಕಂಬದ ಮಂಟಪ

ಈ ಹಿನ್ನೆಲೆಯಲ್ಲಿ ಬಿಳಿಮಲೆ ತಮ್ಮ 'ಹಂಪಿ ಜಾನಪದ'ದಲ್ಲಿ ನೀಡಿರುವ ವಿವರಗಳು ಮಹತ್ವದ್ದಾಗಿ ಪರಿಣಮಿಸಿವೆ. ಇಂದು ಹಂಪಿ ಪರಿಸರದಲ್ಲಿ ವೀರಶೈವರು, ಬ್ರಾಹ್ಮಣರು, ಮುಸಲ್ಮಾನರು, ಕ್ರಿಶ್ಚಿಯನ್ನರು, ವಾಲ್ಮೀಕಿ ಅಥವಾ ಬೇಡರು, ಉಪ್ಪಾರರು, ಕುರುಬರು, ಆದಿ ಕರ್ನಾಟಕರು, ಆದಿ ದ್ರಾವಿಡರು, ಬೋವಿಗಳು, ಕಿಳ್ಳೆಕ್ಯಾತರು, ಕೊರವರು, ದೊಗ್ಗಲರು, ಮೇದಾರರು, ವಡ್ಡರು, ನೆವ್ವರರು, ಕೊರಚರು, ರೆಡ್ಡಿಗಳು, ಕಮ್ಮರು, ಕುಂಬಾರರು, ಬಡಿಗರು, ಅಕ್ಕಸಾಲಿಗರು, ವೇಷಗಾರರು, ಲಂಬಾಣಿಗಳು, ತಮಿಳರು, ಪಿಂಜಾರರು, ಮರಾಠಿಗರು, ಜೈನರು, ಬೆಸ್ತರು, ದಾಸರು, ತಳವಾರರು, ಅಗಸರು, ಗೊಂದಲಿಗರು, ಹಕ್ಕಿಪಿಕ್ಕಿಯರು, ದೊಂಬರು, ಹೂಗಾರರು, ಜಂಗಮರು ಮೊದಲಾದ ವಿವಿಧ ಸಮುದಾಯಗಳು ವಾಸಮಾಡುತ್ತಿವೆ. ಅವುಗಳಲ್ಲಿ ವಾಲ್ಮೀಕಿ ಅಥವಾ ಬೇಡರು, ಕುರುಬರು, ಡೊಂಬರು, ದೊಗ್ಗಲರು, ಹೆಳವರು ಮತ್ತು ವೇಷಗಾರರು ಮೊದಲಾದ ಸಮುದಾಯಗಳು ಹಂಪಿಯ ಇತಿಹಾಸದೊಂದಿಗೆ ಭಾವನಾತ್ಮಕ ಸಂಬಂಧವಿರಿಸಿಕೊಂಡಿವೆ. ಈ ಸಮುದಾಯಗಳೆಲ್ಲ ಸಮಾಜದ ತಳಸಮುದಾಯಕ್ಕೆ ಸೇರಿರುವುದು ಗಮನಾರ್ಹ ಸಂಗತಿ.

ವಾಲ್ಮೀಕಿ ಅಥವಾ ಬೇಡರು ಹಂಪಿ ಸುತ್ತಲ ಗ್ರಾಮಗಳಲ್ಲಿ ಪ್ರಬಲ ಸಂಖ್ಯೆಯಲ್ಲಿದ್ದಾರೆ. ಯುಗಾದಿ ಮರು ದಿವಸ ಇವರು ನಡೆಸುವ 'ಬೇಟೆ ಮರದ ಆಚರಣೆ' ಈ ಸಮುದಾಯದ ಬುಡಕಟ್ಟು ಚಹರೆಯನ್ನು ತೋರಿಸುತ್ತದೆ. ಅವರು ಜನಪದ ದೈವಗಳನ್ನು ಪ್ರಧಾನವಾಗಿ ಆರಾಧಿಸುತ್ತಾರೆ. ಹಂಪಿ ಜಾತ್ರೆಯ ಸಂದರ್ಭದಲ್ಲಿ ವಿಶೇಷವಾಗಿ ವಿರೂಪಾಕ್ಷನಿಗೆ ನಡೆದುಕೊಳ್ಳುತ್ತಾರೆ. ದೊಗ್ಗಲರು ತಮ್ಮ ಆರಾಧ್ಯ ದೈವ ಮಾತಂಗಿ ಇದ್ದುದು ಹಂಪಿಯ ಮಾತಂಗ ಪರ್ವತದಲ್ಲೆಂದು ನಂಬುತ್ತಾರೆ. ಮಾತಂಗ ಪರ್ವತದ ಮಾತಂಗಿಯನ್ನು ದುರ್ಗಮ್ಮ, ಕಾಳಮ್ಮ, ಕನ್ನಿಕಾ ಪರಮೇಶ್ವರಿ, ಹತ್ತು ಕೈಯಮ್ಮ ಎಂದೆಲ್ಲ ಕರೆಯುತ್ತಾರೆ. ಈ ಪರ್ವತವನ್ನು ಪವಿತ್ರವೆಂದು ಭಾವಿಸುತ್ತಾರೆ. ಹೆಳವರು ಹಂಪಿಯಿಂದ ದಕ್ಷಿಣಕ್ಕೆ ವಲಸೆ ಹೋಗುವಾಗ 'ವಿಜಯನಗರದಮ್ಮ' ಎಂಬ ದೈವವನ್ನು ತಮ್ಮೊಡನೆ ಕರೆದುಕೊಂಡು ಹೋದರೆಂದು ನಂಬಿದ್ದಾರೆ. ಕುರುಬರು ಹಂಪಿಯ ಮೂಲ ವಿರೂಪಾಕ್ಷ ಮೂಲತಃ ಬೀರಪ್ಪ ಅಥವಾ ಬೀರೆ ದೇವರು ಎಂದು ಹೇಳುತ್ತಾರೆ. ಆನೆಗೊಂದಿಯ ಐತಿಹಾಸಿಕ ವ್ಯಕ್ತಿಗಳಾದ ಕುಮಾರರಾಮ ಮತ್ತು ಕಂಪಿಲರಾಯನ ಜೀವನದಲ್ಲಿ ಪ್ರವೇಶ ಪಡೆದ ರತ್ನಾಜಿ ಅಥವಾ ರತ್ನಿಯನ್ನು ತಮ್ಮ ಕುಲದವಳೆಂದು

**ಹಂಪಿ ಪರಿಸರದ ತಳವರ್ಗಗಳಲ್ಲಿ ಮಾತೃ ಸಂಸ್ಕೃತಿ ಅಗೋಚರವಾಗಿ ಇನ್ನೂ ನೆಲೆಸಿದೆ. ಅದರ ಪ್ರತಿರೂಪವಾದ ಗ್ರಾಮ ದೇವತೆಗಳು ಆಯಾ ಊರು-ಕೇರಿಗಳನ್ನು ಆವರಿಸಿಕೊಂಡಿವೆ. ಅವೆಲ್ಲದರ ಪ್ರಾತಿನಿಧಿಕ ಮತ್ತು ಸಂಸ್ಕೃತೀಕರಣಕ್ಕೆ ಒಳಪಟ್ಟ ದೈವವಾಗಿ ಪಂಪಾತೀರ್ಥ-ಕ್ಷೇತ್ರದ ಪಂಪಾದೇವಿ ಕಾಣಿಸುತ್ತಾಳೆ.**

ಡೊಂಬರು ಹೇಳಿಕೊಳ್ಳುತ್ತಾರೆ. ಈ ಸಮುದಾಯಗಳು ಪರಂಪರಾಗತವಾಗಿ ಎಲ್ಲಮ್ಮ (ಕಿರೀಟದ ಎಲ್ಲಮ್ಮ, ಪಟ್ಟಣದ ಎಲ್ಲಮ್ಮ), ಹುಲಿಗೆಮ್ಮ ಗಾಳೆಮ್ಮ ಕಂಬದ ಮುದ್ದಮ್ಮ ಗಾರವಿ ಹನುಮಪ್ಪ, ಹೇಮಗಿರಿ ಹನುಮಪ್ಪ, ಗೌಸಂದ್ರ ಮಾರಮ್ಮ, ನೀಲಮ್ಮ, ಕಾಳಮ್ಮ, ಅಂಕಲಮ್ಮ, ಗಡೇದ ದುರ್ಗಮ್ಮ, ನಗರೇಶ್ವರ, ನರೆಗಲ್ಲಮ್ಮ, ಸತ್ಯಮ್ಮ, ಊರಮ್ಮ, ಗರುಡೆ ಆಂಜನೇಯ, ವೀರಭದ್ರಪ್ಪ, ಹಿರೇಮಸಮ್ಮ, ಕೊರಮ್ಮ, ಕೆಂಚಮ್ಮ, ಗಾಳಿದುರ್ಗವ್ವ, ಗವಿಸಿದ್ಧೇಶ್ವರಪ್ಪ, ಗವಿರಂಗನಾಥಪ್ಪ, ಬನ್ನಿಮಾಕಾಳಿ, ದುರ್ಗಮ್ಮ, ಪಾಂಡುರಂಗಸ್ವಾಮಿ, ವಡಕಪ್ಪ, ಕಣಿವೆರಾಯ, ಜಂಬುಕೇಶ್ವರ, ಬಂಡೆ ರಂಗಪ್ಪ, ಗೋಡೆ ಹನುಮಪ್ಪ, ಬಸವೇಶ್ವರ, ಉಗುಳದಮ್ಮಲ ಮಾರಿ, ನರಸಿಂಹ, ಕೋಟೆ ಮಾರಿ, ಚೌಡೇಶ್ವರಿ, ಗುಳ್ಳವ್ವ, ಬನ್ನಿ ಅಮ್ಮ, ಕರಿಯಮ್ಮ, ವಾಸವಿ, ಧರ್ಮರು, ಸುಂಕಲಮ್ಮ, ಕುಮಾರಸ್ವಾಮಿ, ಸೋಮನಾಥ, ಸೀಗಮ್ಮ, ಚೌಡಮ್ಮ, ಮಾರೆಮ್ಮ, ದುರುಗಮ್ಮ, ಊರಮ್ಮ, ನಿಜಲಿಂಗಮ್ಮ ಮುಂತಾದ ಗ್ರಾಮ ದೇವತೆಗಳನ್ನು ಆರಾಧಿಸಿಕೊಂಡು ಬಂದಿವೆ. ಇಲ್ಲಿನ ಬಹುಪಾಲು ದೈವಗಳೆಲ್ಲ ಮಾತೃದೇವತೆಗಳಾಗಿವೆ. ಇವರು ಮಾತೃಸಂಸ್ಕೃತಿಯನ್ನು ತಮ್ಮ ಜೀವದ ಉಸಿರಾಗಿರಿಸಿಕೊಂಡಿರುವುದನ್ನು ಕಾಣಿಸುತ್ತವೆ.

ಈ ಗ್ರಾಮ ದೈವಗಳು ಎಲ್ಲ ಕೆಳವರ್ಗದ ಅಪೌರಾಣಿಕ ದೇವತೆಗಳಾಗಿವೆ. ಈ ದೈವಗಳ ಕೆಲವು ಉತ್ಸವ-ಜಾತ್ರೆಯಲ್ಲಿ ಊರಿನ ಬಹು ಸಮುದಾಯಗಳು ಒಂದಲ್ಲ ಒಂದು ರೀತಿಯಲ್ಲಿ ಭಾಗವಹಿಸುತ್ತಾರೆ. ಈ ಸ್ತ್ರೀ ದೈವಗಳು ವಿಧವೆಯರೂ ಆಗಿರುವುದು ವಿಶೇಷ.. ಪ್ರಾಚೀನ ಮಾತೃಪ್ರಧಾನ ಕುಟುಂಬದಲ್ಲಿ ಪುರುಷನ ಪ್ರಾಧಾನ್ಯತೆಯು ಸಂತತಿಯನ್ನು ಬೆಳೆಸಲು ಮಾತ್ರ ಸೀಮಿತವಾಗಿತ್ತು, ಆದ್ದರಿಂದ ಹೆಣ್ಣು ವಿಧವೆಯಾದಲ್ಲಿ ಅವಳ ಜೀವನದಲ್ಲಿ ಮತ್ತೊಬ್ಬ ಪುರುಷ ಬರುವುದು ಸಾಮಾನ್ಯವಾಗಿತ್ತು. ವ್ಯವಸಾಯದಲ್ಲಿ ಗಂಡಸರಿಗಿಂತ ಹೆಂಗಸರು ಮುಖ್ಯ ಪಾಲುದಾರರಾಗಿದ್ದರು. ಇದರಿಂದ ಬಹುಪಾಲು ಗ್ರಾಮ ದೇವತೆಗಳೆಲ್ಲ ಫಲಶಕ್ತಿ ದೇವತೆಗಳೇ ಆಗಿವೆ. ಕೆಳಜಾತಿಗಳ ಮನೆದೇವರಾದ ಗ್ರಾಮ ದೇವತೆಗಳು ಸಂಸ್ಕೃತೀಕರಣ ಪ್ರಕ್ರಿಯೆಗೆ ಒಳಗಾಗಿದ್ದರೂ ತಮ್ಮ ಪ್ರಾಚೀನತೆಯನ್ನು ಇಂದಿಗೂ ಉಳಿಸಿಕೊಂಡಿವೆ.

ಹಂಪಿ ಪರಿಸರದಲ್ಲಿ ಕಂಡುಬರುವ ಸಾಮಾಜಿಕ ಆಚರಣೆಗಳಿಗೂ ಇಲ್ಲಿನ ಗ್ರಾಮ ದೈವಗಳ ಸಂಪ್ರದಾಯ ಆಚರಣೆಗಳಿಗೂ ಪರಸ್ಪರ ಸಂಬಂಧವಿದೆ. ಕೆಳಜಾತಿ ಸಮುದಾಯಗಳ ಜನರಲ್ಲಿ ಹೆಣ್ಣುಮಕ್ಕಳನ್ನು ಮನೆತನಕ್ಕೆ ನಿಲ್ಲಿಸುವ ಆಚರಣೆ ಜನಪ್ರಿಯವಾಗಿದೆ. ಇದನ್ನು ಪುರುಷ ಸಮಾಜದ ಪರಿಭಾಷೆಯಲ್ಲಿ ಬಸವಿ ಬಿಡುವುದು ಅಥವಾ ಮುತ್ತು ಕಟ್ಟಿಸುವ ಪದ್ಧತಿ ಎಂದೂ ಕರೆಯಲಾಗುತ್ತದೆ.

ಗಂಡುಮಕ್ಕಳಿಲ್ಲದ ಅಥವಾ ಹೆಣ್ಣುಮಕ್ಕಳನ್ನು ಹೆಚ್ಚು ಹಡೆದ ತಂದೆ ತಾಯಿಯರು ತಮ್ಮ ಮಕ್ಕಳಲ್ಲಿ ಕೆಲವರನ್ನು ಹಂಪಿ ಜಾತ್ರೆಯಂದು ಹಂಪಿ ಹೊಳೆಯ ನೀರಿನಲ್ಲಿ ಸ್ನಾನ ಮಾಡಿಸಿ ಅಥವಾ ಇನ್ನಾವುದೇ ದಿನದಂದು ಕಣಿವೆರಾಯನ ಗುಡಿ, ವಡಕರಾಯನ ಗುಡಿ ಗಾರವಿ ಹನುಮಂತಪ್ಪನ ಗುಡಿ ಅಥವಾ ಇನ್ನಾವುದೇ ಗುಡಿಗಳಲ್ಲಿ ತಾಳಿ ಕಟ್ಟಿಸಿ ಮನೆತನಕ್ಕೆ ನಿಲ್ಲಿಸುವ ಆಚರಣೆ ನಡೆಸುತ್ತಾರೆ. ಮನೆತನದ ಹೊಣೆಹೊತ್ತ ಹೆಣ್ಣು ತನ್ನ ಸಮುದಾಯ ಇಲ್ಲವೆ ಇನ್ನಿತರ ಯಾವುದೇ ಸಮುದಾಯದ ಗಂಡಸಿನೊಂದಿಗೆ ಲೈಂಗಿಕ ಸಂಬಂಧ ಹೊಂದುವ ಸ್ವಾತಂತ್ರ್ಯ ಪಡೆದಿದ್ದಾಳೆ. ಇವರಿಗೆ ಏಕಪತಿ ನಿಷ್ಠೆ ಅಪರೂಪವೂ ಅಲ್ಲದ ಅನಿವಾರ್ಯವೂ ಅಲ್ಲದ ಸಂಗತಿಯಾಗಿದೆ. ತಮ್ಮ ಮನೆತನವನ್ನು ನಿರ್ವಹಿಸುವ ಮತ್ತು ಮುಂದುವರೆಸುವ ಹೊಣೆಗಾರಿಕೆಯಲ್ಲಿ ಇವರು ಪುರುಷರಂತೆ ಸ್ವತಂತ್ರ ರಾಗಿರುತ್ತಾರೆ. ಇವರ ಹೆತ್ತವರ ಪ್ರಕಾರ ಇದು ದೇವದಾಸಿ ಸಂಪ್ರದಾಯವಲ್ಲ. ಈ ಪದ್ಧತಿಯನ್ನು ಕೀಳಾಗಿ ಕಾಣುವ ಅಗತ್ಯವಿಲ್ಲ. ಆದ್ದರಿಂದ ಈ ಸಂಪ್ರದಾಯವನ್ನು ನಿಲ್ಲಿಸುವಂತಿಲ್ಲ. ಪುರುಷಪ್ರಧಾನ ಸಮಾಜದ ಪುರುಷ ಯಜಮಾನಿಕೆಯನ್ನು ಕಡೆಗಣಿಸಿರುವ ಈ ಸಂಪ್ರದಾಯ ಹೆಣ್ಣಿಗೆ ಪುರುಷ ಸಮಾಜ ವಿಧಿಸಿದ ಎಲ್ಲ ಬಂಧನ ಗಳಾಚೆಗೆ ಸ್ವಾತಂತ್ರ್ಯವನ್ನು ನೀಡುತ್ತದೆ. ಆದರೆ ಪುರುಷ ಸಮಾಜ ಇವರನ್ನು ದೇವದಾಸಿಯರಂತೆ ನಡೆಸಿಕೊಂಡಿದೆ. ತಳವರ್ಗಗಳ ಮಾತೃ ಸಂಸ್ಕೃತಿಯ ಆಶಯಗಳನ್ನು ಕಡೆಗಣಿಸಿ ಪುರುಷಾನುಕೂಲತೆಗೆ ಒಗ್ಗಿಸಿಕೊಂಡಿದೆ. ದೇವದಾಸಿ ಸಂಪ್ರದಾಯದ ಹುಟ್ಟು ಮತ್ತು ಬೆಳವಣಿಗೆ ಯನ್ನು ಗುರುತಿಸಿರುವ ಜೋಗನ್ ಶಂಕರ್‌ರವರು, ಶಕ್ತಿ (ಮಾತೃ) ದೇವತಾ ಪದ್ಧತಿ ಆರ್ಯೇತರ ಗುಂಪುಗಳಲ್ಲಿ ಹುಟ್ಟಿ ಆಮೇಲೆ ಆದಿವಾಸಿ ಹಾಗೂ ಗ್ರಾಮೀಣ ಜನಾಂಗದಲ್ಲಿ ಪ್ರಸಾರ ಹೊಂದಿ ಹಿಂದೂ ಆಚರಣೆಯಲ್ಲಿ ಐಕ್ಯ ಹೊಂದಿತು ಎಂದು ಅಭಿಪ್ರಾಯ ಪಟ್ಟಿರುವುದು ಈ ಸಂದರ್ಭದಲ್ಲಿ ಹೆಚ್ಚು ಒಪ್ಪುತ್ತದೆ.

ಹಂಪಿ ಪರಿಸರದ ತಳವರ್ಗಗಳಲ್ಲಿ ಮಾತೃ ಸಂಸ್ಕೃತಿ ಅಗೋಚರವಾಗಿ ಇನ್ನೂ ನೆಲೆಸಿದೆ. ಅದರ ಪ್ರತಿರೂಪ ವಾದ ಗ್ರಾಮ ದೇವತೆಗಳು ಆಯಾ ಊರು-ಕೇರಿಗಳನ್ನು ಆವರಿಸಿಕೊಂಡಿದೆ. ಅವೆಲ್ಲದರ ಪ್ರಾತಿನಿಧಿಕ ಮತ್ತು ಸಂಸ್ಕೃತೀಕರಣಕ್ಕೆ ಒಳಪಟ್ಟ ದೈವವಾಗಿ ಪಂಪಾತೀರ್ಥ-ಕ್ಷೇತ್ರದ ಪಂಪಾದೇವಿ ಕಾಣಿಸುತ್ತಾಳೆ.

### ಪ್ರಾಚೀನ-ಅರ್ವಾಚೀನ

ಪಂಪಾಕ್ಷೇತ್ರದ ಪ್ರಾಚೀನತೆ ಪುರಾಣ ಕತೆಗಳೊಂದಿಗೆ ಹೆಣೆದುಕೊಂಡಿದೆ. ರಾಮಾಯಣದಲ್ಲಿನ ಪಂಪಾ ಸರೋವರ ಮತ್ತು ಪಂಪಾ ವನಗಳ ವರ್ಣನೆಯನ್ನು ಸಾಮಾನ್ಯವಾಗಿ ಅತಿ ಪ್ರಾಚೀನ ಮತ್ತು ಮೊಟ್ಟಮೊದಲ ಉಲ್ಲೇಖವೆಂದು ಹೇಳಲಾಗುತ್ತದೆ. ಆದರೆ ಇದು ತುಂಗಭದ್ರ ನದಿ ದಂಡೆಯ ಸರೋವರವೇ ಅಲ್ಲವೇ ಎಂಬುದರ ಬಗ್ಗೆ ಅಧ್ಯಯನಗಳು ದೃಢಪಡಿಸಬೇಕಿವೆ. ಮೊಸಳಯ್ಯನ ಗುಡ್ಡ, ವಿರೂಪಾಕ್ಷ ದೇವಾಲಯದ ಹಿಂದುಗಡೆ ಮತ್ತು ಹೇಮಕೂಟ ಪಕ್ಕದಲ್ಲಿರುವ ಪ್ರಾಗೈತಿಹಾಸ ಕಾಲದ ಕೆಂಪು ವರ್ಣ ಚಿತ್ರಗಳ ಆಧಾರದ ಮೇಲೆ ಈ ಕ್ಷೇತ್ರವನ್ನು ಪ್ರಾಗೈತಿಹಾಸಿಕ ನೆಲೆಯೆಂದು ಗುರುತಿಸಲಾಗಿದೆ. ಚಕ್ರತೀರ್ಥದಲ್ಲಿ ಸ್ನಾನ ಮಾಡಿ ದಡದ ಮೇಲೆ ಬೆಟ್ಟದ ಇಳಿಜಾರಿನಲ್ಲಿ ಸಣ್ಣ ಕಲ್ಲುಗಳ ಸಣ್ಣಮಂಟಪ ಕಟ್ಟಿ, ಬಟ್ಟೆಯಲ್ಲಿ ಸುತ್ತಿದ ಸಣ್ಣ ಕಲ್ಲನ್ನು ಅಲ್ಲಿನ ಗಿಡಮರವೊಂದಕ್ಕೆ ಕಟ್ಟುವುದರಿಂದ ಇಷ್ಟಾರ್ಥ ಸಿದ್ಧಿಸುವುದೆಂಬ ನಂಬಿಕೆ ಮತ್ತು ಅಂಥ ಆಚರಣೆ ಪ್ರಾಗೈತಿಹಾಸಿಕ ಕಾಲದಿಂದ ನಡೆದು ಬಂದದ್ದೆಂದು ಹೇಳಲಾಗುತ್ತದೆ. ಈ ಮೂಲಕ ಪಂಪಾ ಸರೋವರ ಎಂಬ ಪುರಾಣ ಕಲ್ಪನೆಗಿಂತ ವಾಸ್ತವಕ್ಕೆ ಹತ್ತಿರವಾದ ನದಿಮೂಲ ಕಲ್ಪನೆಯ ಐತಿಹಾಸಿಕ ಆಧಾರವುಳ್ಳದ್ದೆಂಬ ವಾದವಿದೆ. ಮಾನವ ನಂಬಿಕೆಗೆ ಮೂಲವಾದ ನೆಲೆ ನದಿಯೋ ಸರೋವರವೋ ? ಇದಕ್ಕೆ ಹಂಪೆಯ ಕವಿ ಹರಿಹರ ಪಂಪಾಕ್ಷೇತ್ರದಲ್ಲಿ 'ಹಿರಿಯ ಹಂಪಾದೇವಿ ಚಿಕ್ಕ ಹಂಪಾದೇವಿ ನಲವಿಂದಲೊಪ್ಪುತಿರೆ' ಎಂದು ಹದಿಮೂರನೆಯ ಪೂರ್ವಾರ್ಧ ಶತಮಾನ ದಲ್ಲಿದ್ದ ದಟ್ಟ ಪೌರಾಣಿಕ ಮತ್ತು ಶೈವ ಪ್ರಧಾನ ಮನಃಸ್ಥಿತಿಯನ್ನು ಕಟ್ಟಿಕೊಟ್ಟಿದ್ದೆ ಆಧಾರ. ಮೂಡಲಲ್ಲಿ ಕಿನ್ನರೇಶ್ವರ, ತೆಂಕಣದಲ್ಲಿ ಜಂಬುಕೇಶ್ವರ, ಪಶ್ಚಿಮದಲ್ಲಿ ಸೋಮೇಶ್ವರ, ಉತ್ತರದಲ್ಲಿ ವಾಣಿ ಭದ್ರೇಶ್ವರರು ನೆಲೆಸಿದ



ಹಂಪೆಯಲ್ಲಿರುವ ಮೆಟ್ಟಿಲುಗಳ ಹೊಂಡ

ಪಂಪಾಪುರದ ಗಡಿರೇಖೆ ಗಳನ್ನು ಸೂಚಿಸಿದ ಹರಿಹರನ ಶೈವನಿಷ್ಠ ಪಂಪಾ ಪುರಾಣ ಜಗತ್ತಿನ ವಾಸ್ತವವನ್ನು ಸಮರ್ಥಿಸುವ ಕಾರ್ಯವಾಗಿಯೂ ಮುಂದುವರೆದಿದೆ. ಪಂಪಾ ಸರೋವರವೆ ಪಂಪಾಕ್ಷೇತ್ರದ ಆದಿಯೆಂದೂ, ದೇವತೆ ಮೊದಲು ಆಮೇಲೆ ಊರು ಎಂದೂ ಪ್ರತಿಪಾದಿಸಿ ಶೈವ ಹಿರಿಮೆ ಸಾರಲಾಗಿದೆ. ಪಂಪಾ ಮಹಾತ್ಮೆಯಲ್ಲಿ ಉಲ್ಲೇಖಿತವಾಗಿರುವ 'ಪಂಪಾ ತಾಯಿಲಿಂದ ಹಂಪೀಗೆ ಹೆಸರಾತು। ಹಂಪವ್ವನ ಒರಗಿದ ಪಂಪಾಪತಿ ತಾನು। ಪಂಪಾ ಸರುವರದಾಗ ಕುಳತಾನ' ಎಂಬ ಜನಪದ ತ್ರಿಪದಿ ಪಂಪಾದೇವಿ ಮತ್ತು ಪಂಪಾ ಸರೋವರವೆ ಪಂಪಾಕ್ಷೇತ್ರದ ಮೂಲವೆಂದು ಸಾರುತ್ತದೆ. ಆದರೂ ಗಿಡಮರಗಳಿಗೆ ಕಲ್ಲು ಕಟ್ಟುವ ಅಥವಾ ಸಣ್ಣ ಕಲ್ಲಿನಲ್ಲಿ ಮಂಟಪ ಕಟ್ಟುವ ಆಚರಣೆಯ ಮೂಲ ತಾಣ, ಫಲಪೂಜೆ ಆಚರಣೆಯ ಮೂಲತಾಣ ಮತ್ತು ಹಂಪಿ ಪರಿಸರದ ತಳವರ್ಗದ ಜನತೆ ತಮ್ಮ ಮಾತೃ ಸಂಸ್ಕೃತಿಯಂತೆ ಮನೆತನಕ್ಕೆ ನಿಲ್ಲುವ ಆಚರಣೆಯ ಮೂಲತಾಣಗಳೆಲ್ಲ ನದಿಯನ್ನೆ ಕೇಂದ್ರವಾಗಿರಿಸಿದೆ ಮತ್ತು ಪಂಪಾ ಪದದ ಮೂಲ ನದಿಯೆ ಆಗಿರುವುದರಿಂದ ಈ ಕ್ಷೇತ್ರದ ಮೂಲವನ್ನು ನದಿಯೇ ಬಿಂಬಿಸುತ್ತದೆ ಎಂದು ಹೇಳಬಹುದು. ಇಲ್ಲಿನ ದೈವ ಕಲ್ಪನೆ ಯಾವ ಕಾಲಘಟ್ಟದಲ್ಲಿ ಮೂಡಿತೆಂದು ಹೇಳಲು ಆಧಾರಗಳಿಲ್ಲದಿದ್ದರೂ ಜನಪದ ನಂಬಿಕೆ ಶೈವ ಪುರಾಣವನ್ನೆ ಅನುಸರಿಸಿದೆ.

ಶಾಸನಗಳಲ್ಲಿ, ಕ್ರಿ.ಶ. ೬೮೧ರ ಶಾಸನ ಪಂಪಾಕ್ಷೇತ್ರವನ್ನು ಮೊಟ್ಟ ಮೊದಲು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೯೯ರ ಶಾಸನ ಪಂಪಾದೇವಿಯನ್ನು ಮೊದಲು ಪ್ರಸ್ತಾಪಿಸಿರುವ ಶಾಸನವಾಗಿದೆ. ಎಲ್ಲಮ್ಮ ದೇವತೆ ಬಗ್ಗೆ ಕ್ರಿ.ಶ. ೧೪೨೫, ಹೊಸವೂರ ಮಹಾಮಾಯಿ ಕುರಿತು ಕ್ರಿ.ಶ. ೧೫೧೪, ಮಹಾಮಾಯಿ ಗುಡಿ ಮತ್ತು ಮಾತಂಗಿ ಗುಡಿ ಕಟ್ಟಿಸಿದ ಬಗ್ಗೆ ಕ್ರಿ.ಶ. ೧೫೨೬, ಹೊಸೂರಮ್ಮ ಕುರಿತು ಕ್ರಿ.ಶ. ೧೫೯೦, ಕ್ರಿ.ಶ. ೧೬೪೩ರ ಶಾಸನಗಳು ಇವೆ. ಹಂಪಿ ಮತ್ತು ಹಂಪಿ ಪರಿಸರದ ಸ್ತ್ರೀ ದೈವಗಳನ್ನು ಕುರಿತ ಈ ಶಾಸನಗಳು, ಮಾತೃ ಮೂಲ ಪರಿಸರದಲ್ಲಿ ಸ್ತ್ರೀ ದೈವಗಳು ಚರಿತ್ರೆಯ ವಿವಿಧ ಕಾಲಗಳಲ್ಲಿ ಹೇಗೆ ಸಮಾಜದ ಉನ್ನತ ವರ್ಗದಿಂದ ಮಾನ್ಯತೆ ಹೊಂದಿ ಪುರಸ್ಕೃತವಾಗಿದ್ದವೆಂದು ತಿಳಿಸುತ್ತವೆ. ಪಂಪಾದೇವಿ ಈ ಕ್ಷೇತ್ರದ ಮೂಲ ದೇವತೆಯಾಗಿ ಎಲ್ಲ ಕಾಲದಲ್ಲೂ ಉಚ್ಛ್ರಾಯ ಮತ್ತು ಪ್ರಧಾನವಾಗಿದ್ದುದನ್ನು ಸೂಚಿಸುತ್ತದೆ.

ಇಂದಿಗೂ ಹಂಪಿ ಪರಿಸರದಲ್ಲಿ ದುರ್ಗಾಗುಡಿ, ಪಂಪಾದೇವಿ ದೇವಾಲಯ, ಎಲ್ಲಮ್ಮ, ದುರ್ಗಾದೇವಿ, ಕೆಂಚಮ್ಮ, ಮದಗಮ್ಮ, ಹತ್ತು ಕೈಯಮ್ಮ, ಗಂಗಮ್ಮ, ಹುಲಿಗೆಮ್ಮ, ಗಾಳೆಮ್ಮ ಮುಂತಾದ ಬೇರೆ ಬೇರೆ ಹೆಸರುಗಳಲ್ಲಿ – ದೇವಾಲಯಗಳಿರುವ ಮತ್ತು ಇಲ್ಲದ – ಸ್ತ್ರೀ ಮೂರ್ತಿಗಳು, ಗೆರೆ ಕೊರೆದ ಸ್ತ್ರೀ ಆಕಾರ ದೈವಗಳು ಬಹಳಷ್ಟು ಕಂಡುಬರುತ್ತವೆ. ಇವುಗಳಿಗೆ ಕರ್ನಾಟಕದ ದೂರ ದೂರದ ಊರುಗಳಿಂದ ಜನ ಬಂದು ನಡೆದುಕೊಳ್ಳುತ್ತಾರೆ. ಸ್ತ್ರೀ ದೇವತೆಯ ಆರಾಧನೆ ಇಲ್ಲಿ ಜನಪ್ರಿಯವಾಗಿದ್ದು ವರ್ಷದ ಆಯಾಯ ಕಾಲಗಳಲ್ಲಿ ಆಚರಣೆಗಳು ಯಾವ ಸದ್ದು ಗದ್ದಲಗಳಿಲ್ಲದೆ, ವಿಜೃಂಭಣೆ ಮೆರವಣಿಗೆಗಳಿಲ್ಲದೆ ಸಾಂಗವಾಗಿ ನಡೆಯುತ್ತಿದೆ.

**ಹಂಪಿ ಆಚರಣೆಗಳು**

ಪಂಪಾದೇವಿ ಮತ್ತು ಪಂಪಾಪತಿಗೆ ಸಂಬಂಧಿಸಿದ ಫಲಪೂಜೆ ಮತ್ತು ಹಂಪಿ ಜಾತ್ರೆ ಆಚರಣೆಗಳಲ್ಲಿ ಹಂಪಿ ಪರಿಸರದ ಸುತ್ತಲ ಗ್ರಾಮಗಳ ಜನ ಪ್ರವಾಹದ ಸಂಖ್ಯೆಯಲ್ಲಿ ಸೇರುತ್ತಾರೆ. ಪ್ರತಿವರ್ಷ ಡಿಸೆಂಬರ್ ತಿಂಗಳಿನಲ್ಲಿ ಫಲಪೂಜೆ ಆಚರಣೆ ನಡೆಯುತ್ತದೆ. ಈ ಸಂದರ್ಭದಲ್ಲಿ ಹಂಪಿಗೆ ಬಂದ ಜನರೆಲ್ಲ ಮದುಮಗಳು ಮತ್ತು ಮದುಮಗನ ಪರವಾಗಿ ಎರಡು ಗುಂಪುಗಳಾಗುತ್ತಾರೆ. ಅವರೆಲ್ಲ ಉತ್ತರಕ್ಕೆ ತಿರುಗುವ ನದಿ ದಂಡೆಯ ತೀರ್ಥದ ಬಳಿ ಸೇರುತ್ತಾರೆ. ಗಂಡಿನ ಕಡೆಯವರು ಹೆಣ್ಣು ಕೇಳುವ ಎಲ್ಲ ಆಚರಣೆಗಳನ್ನು ಅನುಸರಿಸುತ್ತಾರೆ. ಎರಡೂ ಕಡೆಯವರು ವೀಳ್ಯ ವಿನಿಮಯ ಮಾಡಿಕೊಂಡು ರಾತ್ರಿ ಬಲು ಹೊತ್ತಿನವರೆಗೆ ಸಂಬಂಧ ಕುದುರಿಸುವ ಮಾತುಕತೆ ನಡೆಸುತ್ತಾರೆ. ಕೊನೆಗೆ ಹಂಪಿ ದೈವಗಳ ಮದುವೆ ನಿಶ್ಚಯವಾಗುತ್ತದೆ. ಈ ಪ್ರಕಾರ ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ಪಂಪಾದೇವಿ ಮತ್ತು ಪಂಪಾಪತಿಯರ ಮದುವೆ ಹಂಪಿಯ ಜಾತ್ರೆ ಹೆಸರಿನಲ್ಲಿ ನಡೆಯುತ್ತದೆ. ಸಾಮಾನ್ಯ ಮನುಷ್ಯರ ಮದುವೆ ಆಚರಣೆಗಳನ್ನೆಲ್ಲ ಈ ಮದುವೆಯಲ್ಲೂ ನಡೆಸಲಾಗುತ್ತದೆ. ಆರಂಭದಲ್ಲಿ ತೇರು ಎಳೆಯುವ ಹೊಣೆಗಾರಿಕೆ ಸ್ಥಳೀಯ ಬೇಡ ಸಮುದಾಯದವರಿಗಲ್ಲದೆ ಬೇರೆಯವರಿಗಿಲ್ಲ. ಈ ಎರಡೂ ಆಚರಣೆಗಳಲ್ಲಿ ಮದುವೆಯೆಂಬ ಸಾಮಾಜಿಕ ಸಂಸ್ಥೆಯ ಮೇಲೆ ಧಾರ್ಮಿಕ ಮುಸುಕು ಆವರಿಸಿಕೊಂಡಿರುವುದು ಎದ್ದುಕಾಣುವ ಅಂಶವಾಗಿದೆ.

**ಮದುವೆ ಆಚರಣೆಯ ಆಯಾಮುಗಳು**

ಹಂಪೆಯಲ್ಲಿ ವೈದಿಕ, ಶೈವ ಮತ್ತು ವೈಷ್ಣವ ಶಾಖೆಗಳು ಬೇರುಬಿಟ್ಟಿವೆ. ಇದು ಜೈನರ ಧಾರ್ಮಿಕ ಸ್ಥಳ ಮಾತ್ರವಾಗಿರದೆ ಅನೇಕ ಅವೈದಿಕ ಪಂಥಗಳ ಕೇಂದ್ರಸ್ಥಾನವೂ ಆಗಿತ್ತೆಂದು ತಿಳಿಯುತ್ತದೆ. ಧಾರ್ಮಿಕ ರಾಜಕಾರಣದಲ್ಲಿ ಉಳಿದ ಬಲಹೀನ ಮತಪಂಥಗಳು ಮೂಲೆಗುಂಪಾಗಿ ಶೈವ ಮತ್ತು ವೈಷ್ಣವ ಪಂಥಗಳು ಮಾತ್ರ ಪ್ರಧಾನ ನೆಲೆಗೆ ಏರಿದಂತೆಯೂ ಕಾಣುತ್ತದೆ. ಧರ್ಮದ ಪರಮ ಪದಕ್ಕಾಗಿ ಇವೆರಡೂ ಶಾಖೆಗಳ ನಡುವೆ ಸಾಂಸ್ಕೃತಿಕ ಸಂಘರ್ಷಗಳು ನಡೆದಿವೆ. ವೈಷ್ಣವ ಪರಂಪರೆ ಬಿಂಬಿಸಲು



ಕಲ್ಲಿನ ರಥ

ರಾಮನ ಭಂಟ ಹನುಮನುದಿಸಿದ ಕಿಷ್ಕಿಂಧೆಯ ನಾಡಾಗಿಯೂ ಹಂಪೆ ಪ್ರಸಿದ್ಧಿ ಪಡೆದಿದೆ. ರಾಮಾಯಣ ಪ್ರಸ್ತಾಪಿತ ಪಂಪಾಕ್ಷೇತ್ರ ಹಂಪೆಯ ಪಂಪಾಕ್ಷೇತ್ರವೆಂದು ನಂಬಿರುವ ಪರಿಣಾಮವಾಗಿ ಧರ್ಮ ರಾಜಕಾರಣದ ಆಧಾರ ಪಠ್ಯವಾಗಿ ಕಿಷ್ಕಿಂಧಾ ಕಾಂಡ ಅನುಕೂಲವಾಗಿ ಒದಗಿದೆ. ಇಲ್ಲಿನ ಅಂಜನಾದ್ರಿ ಬೆಟ್ಟ, ಸುಗ್ರೀವ ಗುಹೆ, ಸೀತೆ ಸೆರಗು ಮೊದಲಾದ ಸ್ಥಳಗಳ ಕುರಿತು ಹಲವಾರು ಐತಿಹ್ಯಗಳು ಹುಟ್ಟಿಕೊಂಡಿವೆ. ಇವು ಮೌಖಿಕ ಪರಂಪರೆಯಲ್ಲಿ ಇಂದಿಗೂ ಕಾರ್ಯ ನಿರ್ವಹಿಸುತ್ತಿವೆ. ಇದನ್ನು ಆಧರಿಸಿ ಹುಯಿಲಗೋಳ ನಾರಾಯಣರಾಯರು ಪಂಪಾಕ್ಷೇತ್ರವನ್ನು 'ಹನುಮನುದಿಸಿದ ನಾಡೆ'ಂದು ಹಾಡಿದ್ದಾರೆ. ಹಂಪೆ ಶೈವ ಪರಂಪರೆಯ ಪ್ರತೀಕವಾಗಲು ಪಂಪಾದೇವಿ ವಿರೂಪಾಕ್ಷರ ಮಿಲನದ ತಾಣವಾಗಿ ಪರಿಣಮಿಸಿದೆ. ಇಲ್ಲಿಯ ಸ್ಥಳೀಯ ಜನಪದ ಪುರಾಣವನ್ನು ಶೈವ ಪುರಾಣ ತನ್ನ ಗಟ್ಟಿನೆಲೆಯನ್ನಾಗಿ ಮಾಡಿಕೊಂಡಿದೆ. ಆನೆಗೊಂದಿ ಪ್ರದೇಶದ ಸರೋವರಕ್ಕೂ ದೈವತ್ವಕ್ಕೇರಿಸಿದ ನದಿಯ ಸ್ತ್ರೀರೂಪವಾದ ಪಂಪಾದೇವಿಗೂ ಸಂಬಂಧ ಕಲ್ಪಿಸಿದೆ. ಹಂಪಮ್ಮ ಮತ್ತು ಆಕೆಯ ಮದುವೆಗೂ ಶಿವನಿಗೂ ಸಂಬಂಧ ಏರ್ಪಡಿಸಿದೆ. ಪಂಪಾತೀರ್ಥ-ಪಂಪಾಕ್ಷೇತ್ರವನ್ನು ಶೈವಕ್ಷೇತ್ರವನ್ನಾಗಿ ಪರಿವರ್ತಿಸಿದೆ. ಹಾಗಾಗಿಯೆ ಪಂಪಾದೇವಿಗೆ ಒಲಿದ ಪಂಪಾಪತಿಯೇ ಇಂದಿಗೂ ಇಲ್ಲಿಯ ಪ್ರಧಾನ ದೈವವಾಗಿ ಪ್ರತಿಷ್ಠಾಪಿತವಾಗಿದೆ. ಶೈವ ಪಂಥದ ಪರವಾಗಿ ಶೈವ ಪುರಾಣಗಳು, ಹರಿಹರನ ಗಿರಿಜಾ ಕಲ್ಯಾಣ ನೆರವಿಗಿವೆ. ಅಲ್ಲದೆ ನಾಡಿನ ಮೂಲೆಮೂಲೆಯಿಂದ ಮಹಾಪೂರ ಸಂಖ್ಯೆಯಲ್ಲಿ ಹರಿದು ಬರುವ ವೀರಶೈವ ಮತಾನುಯಾಯಿಗಳು ಮತ್ತು ಸ್ಥಳೀಯ ಕೆಳಸಮುದಾಯಗಳು ವಿರೂಪಾಕ್ಷ ದೇವಾಲಯದಲ್ಲಿ ಪ್ರತಿವರುಷ ಜರುಗುವ ಸಾಮಾಜಿಕ - ಧಾರ್ಮಿಕ ಆಚರಣೆಗಳಿಗೆ ಸಾಕ್ಷಿಗಳಾಗಿವೆ. ಈ ಅಂಶಗಳು ದೈವ ಕಲ್ಪನೆ ಭಾರತೀಯ ಸಮಾಜದ ಸುಪ್ತ ಮನಸ್ಸಿನ ಚಟುವಟಿಕೆಗಳಿಗೆ ನೇರ ಸಂಬಂಧ ಹೊಂದಿರುವುದನ್ನು ಕಾಣಿಸುತ್ತದೆ.



ಕಮಲ ಮಹಲ್

ಶಿಷ್ಟ ದೈವಗಳೊಂದಿಗೆ ಇಂದಿಗೂ ವಿಜಯನಗರದ ಹಾಳು ಪಟ್ಟಣದಲ್ಲಿರುವ ಮತ್ತು ಬಹಳ ಹಿಂದಿನಿಂದಲೂ ಆರಾಧಿಸಿಕೊಂಡು ಬಂದಿರುವ ಬೇರೆ ಬೇರೆ ಹೆಸರಿನ ಅವೈದಿಕ ಮತ್ತು ಕೆಳ ಸಮುದಾಯಗಳ ಸ್ಥಳೀಯ ಸ್ತ್ರೀ ದೈವಗಳು ಇವೆ. ಒಂದೆಡೆ ಪಂಪಾಪತಿ ಪ್ರಧಾನವಾಗುಳಿದು ಶಿಷ್ಟ ಮತ್ತು ಪರಿಶಿಷ್ಟರ ಆರಾಧನೆಗೆ ಒಳಗಾಗಿದ್ದರೆ ಇನ್ನೊಂದೆಡೆ ಮುಂಚೂಣಿಗೆ ಬಾರದ ಸ್ಥಳೀಯ ಕೆಳ ಸಮುದಾಯಗಳಿಂದ ನಿತ್ಯ ಪೂಜೆಗೆ ಒಳಗಾಗಿರುವ ಸ್ತ್ರೀ ದೈವಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ. ಹಂಪೆ ಪಂಪಾದೇವಿಯ ನೆಲೆಯಾದರೂ ಇಲ್ಲಿ ಕೆಳ ಸಮುದಾಯಗಳ ಪ್ರತಿನಿಧಿಯಂತಿರುವ ಪಂಪಾದೇವಿಯನ್ನು ವರಿಸಿದ ಉನ್ನತ ಸಮುದಾಯದ ದೈವವಾದ ಶಿವನೇ ಪ್ರಧಾನ ದೈವವಾಗಿದ್ದಾನೆ. ಇದು ಸ್ಥಳೀಯ ಜನಸಮುದಾಯಗಳ ಹಾಗೆ ಸ್ಥಳೀಯ ದೈವಗಳು ಅಧೀನಕ್ಕೊಳಪಟ್ಟು ಮೂಲೆಗುಂಪಾಗಿರುವುದನ್ನು ಕಾಣಿಸುತ್ತದೆ.

ವಿಜಯನಗರ ಸ್ಥಾಪನೆಯ ಆರಂಭದಿಂದಲೂ ರಾಜವಂಶದವರಿಂದ ಪೂಜಿಸಲ್ಪಟ್ಟ ಇಲ್ಲಿಯ ಶೈವ ಪರಂಪರೆ ಎಲ್ಲ ಕಾಲಕ್ಕೂ ಮಾನ್ಯವಾಗಿದೆ. ಹಂಪೆಯ ದೈವ ವೈದಿಕಕುಲ ಸಂಜಾತನಾಗಿದ್ದು ಪರಿಶಿಷ್ಟರ ಮನೆಯಳಿಯನಾಗಿದ್ದಾನೆ. ವಿರೂಪಾಕ್ಷ ದೇವಾಲಯದಲ್ಲಿ ವಿರೂಪಾಕ್ಷನ ಪತ್ನಿಯರ ಸಾಲಿನಲ್ಲಿ ಪಾರ್ವತಿ, ಭುವನೇಶ್ವರಿಯೊಂದಿಗೆ ಪಂಪಾದೇವಿಯನ್ನೂ ಇರಿಸಲಾಗಿದೆ. ಇವರು ಶಿವನ ಸಜಾತೀಯ, ಕನ್ನಡ ಮತ್ತು ಕೆಳ ಸಮುದಾಯ ಕುಲಗಳಿಗೆ ಸೇರಿರುವುದು ಮೇಲ್ನೋಟಕ್ಕೆ ಕಾಣುವ ಅಂಶ. ಅಂದರೆ ವೈದಿಕ ಮನುಧರ್ಮಶಾಸ್ತ್ರ ನಿರೂಪಿತ ಮದುವೆ ನಿಯಮಗಳನ್ನು ಚಾಚೂ ತಪ್ಪದೆ ಈ ಶಿಷ್ಟದೈವ ಪಾಲಿಸಿದೆ. ಈ ದೈವ ತನ್ನ ಸ್ವ ಸಮುದಾಯದಲ್ಲಿ ಒಬ್ಬಳನ್ನು, ಕನ್ನಡಿತಿಯೊಬ್ಬಳನ್ನು ಮತ್ತು ಕೆಳಜಾತಿಗಳಲ್ಲಿ ಒಬ್ಬೊಬ್ಬಳನ್ನು ಮದುವೆಯಾಗಿದೆ. ಅನುಲೋಮ ಮದುವೆ ನಿಯಮ ಎತ್ತಿ ಹಿಡಿದಿದೆ. ಇದರಂತೆ ಎಲ್ಲರನ್ನು ಮಡದಿಯರನ್ನಾಗಿ ಮಾಡಿಕೊಂಡು ಪರಂಪರಾಗತ ವೈದಿಕ ಜೀವನ ಮೌಲ್ಯಗಳನ್ನು ಪ್ರಾಯೋಗಿಕವಾಗಿ ಸಾಧಿಸಿ ಮೇಲುಗೈ ಪಡೆದಿದೆ. ಮೇಲುವರ್ಗದ ಪುರುಷಶಾಹಿ ವ್ಯವಸ್ಥೆ ಪರವಾದ ನಿಲುವಿನಂತೆ ಸ್ವಜಾತೀಯ ಮತ್ತು ಅನ್ಯ ಜಾತಿಗಳ ಎಲ್ಲ ವರ್ಗದ ಹೆಣ್ಣುಗಳನ್ನು ಅನುಭೋಗಿಸಲು ಅವಕಾಶ ಕಲ್ಪಿಸಿಕೊಂಡಿದೆ. ಕೆಳವರ್ಗದ ಮಾತೃ ಸಂಸ್ಕೃತಿಯ ಸ್ತ್ರೀ ಸಮುದಾಯವನ್ನು ಶಿಷ್ಟ ತನ್ನ ಅಧೀನದಲ್ಲಿರಿಸಿಕೊಂಡಿದೆ.

ಪಂಪಾದೇವಿಯನ್ನು ವಿರೂಪಾಕ್ಷ ವರಿಸಿರುವುದು - ಹಂಪೆಯ ಸ್ಥಳೀಯ ಸ್ತ್ರೀ ದೈವ ಆರಾಧಕ ಕೆಳ ಸಮುದಾಯಗಳು ಇಂಥ ವಿವಾಹ ವ್ಯವಸ್ಥೆಗೆ ಒಳಪಟ್ಟಿವೆಯೆಂದು ಕಾಣಿಸುತ್ತದೆ. ಬಿಳಿಗಿರಿರಂಗನಲ್ಲಿ ಕುಸುಮಬಾಲೆ ಮತ್ತು ಮಾದೇಶ್ವರನಲ್ಲಿ ಸೋಲಿಗರ ಸಂಕಮ್ಮ ಬಳಕೆಯಾಗಿರುವ ಹಾಗೆಯೆ ವಿರೂಪಾಕ್ಷನಲ್ಲಿ ಪಂಪಾದೇವಿ ಬಳಕೆಯಾಗಿದೆ. ಇದು ಕೆಳವರ್ಗಗಳ ಸ್ವಂತಿಕೆ ರಹಿತ ಸ್ಥಿತಿಯಾಗಿದೆ. ಸೋಲಿಗರೆಲ್ಲ ಮಾದೇಶ್ವರನ ಒಕ್ಕಲು ಮತ್ತು ಬಿಳಿಗಿರಿ ರಂಗನ ಒಕ್ಕಲು ಆದಂತೆ ಹಂಪೆಯಲ್ಲಿ ಸ್ಥಳೀಯ ಕೆಳ ಸಮುದಾಯಗಳು ಶಿವನ ಒಕ್ಕಲಂತೆ ನಡೆದುಕೊಳ್ಳುತ್ತಾರೆ. ಇಲ್ಲಿಯ ಸುತ್ತಲಿನ ಹಳ್ಳಿಗಳ ಬೇಡರ-ಗೊಲ್ಲರ ಸಮುದಾಯಗಳು ತಮ್ಮ ಮನೆಯ ಮದುವೆ ಕಾರ್ಯವಿದ್ದಲ್ಲಿ ಮೊದಲು ಹಂಪೆಯ ಫಲಪೂಜೆಯಲ್ಲಿ ಭಾಗವಹಿಸಿ, ನಂತರ ಮನೆಕಾರ್ಯ ಮಾಡುವ ಸಂಪ್ರದಾಯ ಬೆಳೆಸಿಕೊಂಡಿದ್ದಾರೆ. ಅಲ್ಲದೆ ಜಾತ್ರೆಯ ದಿನ ಪಂಪಾದೇವಿಯನ್ನು ಪಂಪಾಪತಿಗೆ ಮದುವೆ ಮಾಡಿಕೊಟ್ಟು ಸಂಭ್ರಮಿಸಿ ತಮ್ಮ ಮನೆಯ ಮದುವೆಯಂತೆ ಭಾವಿಸುತ್ತಾರೆ. ಇದು ಹಂಪೆಯ ಆಚರಣೆಗಳಲ್ಲಿಯ ಪ್ರಮುಖ ಅಂಶವಾಗಿದ್ದು, ಸ್ಥಳೀಯ ಬಹುಸಂಖ್ಯಾತ ಸಮುದಾಯಗಳು ಮೇಲುಜಾತಿಯ ಪುರುಷಶಾಹಿ ವ್ಯವಸ್ಥೆಗೆ ತಮ್ಮನ್ನು ಒಪ್ಪಿಸಿಕೊಂಡಿವೆ. ಈ ಸಮುದಾಯಗಳು ತಮ್ಮ ಮೂಲ ಸ್ತ್ರೀ ದೈವ ಆರಾಧನೆಯನ್ನು ಮನೆಯ ಮಟ್ಟಿಗೆ ಉಳಿಸಿಕೊಂಡು ಅದರಿಂದ ದೂರವಾಗಿದ್ದಾರೆ. ಇದು ಅವೈದಿಕ ಸ್ತ್ರೀ ಕೇಂದ್ರಿತ ಸಮುದಾಯಗಳು ಶೈವ ಆರಾಧಕ ಸಮುದಾಯದ ಜೀವನ ಮೌಲ್ಯಗಳಿಂದ ಪ್ರಭಾವಿತವಾಗಿರುವುದರ ಪರಿಣಾಮವಾಗಿದೆ.

ಹಂಪೆಯ ಶೈವ ಕೇಂದ್ರಿತ ನೆಲೆ ಪುರುಷ ಪ್ರಧಾನತೆಯನ್ನೂ ಸ್ಥಳೀಯ ಅಧಿದೇವತೆಯ ಅಧೀನತೆಯನ್ನೂ ಸೂಚಿಸುತ್ತಿದೆ. ಇದು ಶಿಷ್ಟ ಸಮಾಜದ ಪುರುಷ ಕೇಂದ್ರಿತ ಕುಟುಂಬ ವ್ಯವಸ್ಥೆಯ ಪ್ರತೀಕ. ಶಿವನು ಸ್ಥಳೀಯ ಪಂಪಾದೇವಿಯನ್ನು ವರಿಸಿ ಅವಳ ನೆಲೆಯಲ್ಲೇ ತನ್ನ ನೆಲೆಯನ್ನು ಕಂಡುಕೊಂಡಿರುವುದು ಮಾತೃ ಸಂಸ್ಕೃತಿ ಕೇಂದ್ರಿತ ಕುಟುಂಬ ವ್ಯವಸ್ಥೆಯ ಮನೆ ಅಳಿಯತನವನ್ನು ತನ್ನ ಅನುಕೂಲಕ್ಕೆ ಬಳಸಿಕೊಂಡಿರುವ ಕ್ರಮ. ಸ್ಥಳೀಯ ಸಮುದಾಯಗಳೆಲ್ಲ ಇನ್ನೂ ಬಡತನಕ್ಕಿಂತ ಕೆಳಮಟ್ಟದಲ್ಲಿ ಇವೆ. ಕೆಳವರ್ಗಗಳ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳಿಗೂ ಮೇಲುವರ್ಗಗಳ ಸಾಂಸ್ಕೃತಿಕ ಯಜಮಾನಿಕೆಗೂ ಸಂಬಂಧ ಏರ್ಪಟ್ಟಿದೆ. ವಿವಾಹ ಸಂಬಂಧದಲ್ಲಿ ಸ್ಥಾಪಿತವಾಗಿರುವ ಪಂಪಾದೇವಿ ಮತ್ತು ಪಂಪಾಪತಿಯ ಕುಟುಂಬ ವ್ಯವಸ್ಥೆ ಅಂದರೆ ಮೇಲುವರ್ಗ ಪತಿ, ಕೆಳವರ್ಗ ಸತಿಯಾಗಿರುವ ಕೌಟುಂಬಿಕ ವ್ಯವಸ್ಥೆಯಾಗಿದೆ. ಸ್ಥಳೀಯ ಪ್ರಾಬಲ್ಯವನ್ನು ಮೇಲುವರ್ಗ ಮುರಿದು ಅದರ ಸ್ಥಾನದಲ್ಲಿ ತನ್ನನ್ನು ಸ್ಥಾಪಿಸಿಕೊಂಡಿದೆ. ಇದು ಸ್ಥಳೀಯ ಕುಟುಂಬ ವ್ಯವಸ್ಥೆಗೆ ಅನುಗುಣವಾಗಿ ಮನೆಯಳಿಯ ಸ್ಥಾನವನ್ನು ಒಪ್ಪಿಕೊಂಡಿರದ, ದೈವಗಳ ಸಂಬಂಧದಲ್ಲಿ ಧಾರ್ಮಿಕ ರಾಜಕಾರಣ ನೆಲೆಗೊಂಡ ಕ್ರಮವನ್ನು ನಿರೂಪಿಸುತ್ತದೆ. ಇಂದಿಗೂ ವಿಜಯನಗರ ಹಾಳು ಪಟ್ಟಣದ ಸ್ತ್ರೀ ದೈವಗಳೆಲ್ಲ ಕೆಳ ಸಮುದಾಯಗಳಿಂದ ಆರಾಧನೆಗೆ ಒಳಪಟ್ಟಿವೆ. ಸ್ತ್ರೀ ದೈವಗಳ ಪ್ರತೀಕವಾದ ಪಂಪಾದೇವಿ ಸ್ಥಳೀಯ ಪ್ರಬಲ ದೈವವಾಗಿದ್ದರೂ ಶಿಷ್ಟ ಪುರುಷ ದೈವದ ಹಿರಿಮೆಯನ್ನು ಒಪ್ಪಿಕೊಂಡಿದೆ. ಅಂದರೆ ಬಹುಪತಿತ್ವ ಕುಟುಂಬ ಸಾಧ್ಯತೆಯ ಮಾತೃ ಸಂಸ್ಕೃತಿಯನ್ನು ಬಹುಪತ್ನಿತ್ವವಾಗಿ ಪರಿವರ್ತಿಸಲಾದ ಪಿತೃ ಸಂಸ್ಕೃತಿಯ ಪ್ರತೀಕವಾಗಿ ಮೂಡಿದೆ.

ಹಂಪಿ ದೈವಗಳ ಮದುವೆ ಮತ್ತು ಧಾರ್ಮಿಕ ಆಚರಣೆಗಳು ತಮ್ಮ ಆಳದಲ್ಲಿ ಸಾಮಾಜಿಕ ವಾಸ್ತವವನ್ನು ಸೂಕ್ಷ್ಮವಾಗಿ ಮನಗಾಣಿಸುತ್ತವೆ. ದೈವಲೀಲೆಯ ಅರಸುವಿಕೆ, ಮನುಷ್ಯ ಸಂಬಂಧಗಳನ್ನು ಪುನರಭಿನಯಿಸಿ ವಾಸ್ತವವನ್ನು ಮರೆಮಾಚುತ್ತದೆ. ಅಲ್ಲದೆ ಬಹು ಸಮುದಾಯಗಳ ಸಮಾಜದಲ್ಲಿ ಈ ಆಚರಣೆಗಳು ಸಾಂಸ್ಕೃತಿಕ ಯಜಮಾನಿಕೆ ರೂಪಿಸುವ ಮತ್ತು ಹೇರುವ ಪರಿಕರವಾಗಿ ಬಳಕೆಯಾಗಿದೆ.

ಶ್ರೀಧರ ಪಿಸ್ಸೆ
೭೩, ದೇಸಾಯಿ ಓಣಿ, ಕಮಲಾಪುರ - ೫೮೩ ೨೨೧
ಹೊಸಪೇಟೆ ತಾಲ್ಲೂಕು

# ಸಂಸಾರವೆಂಬ ಹೆಣ ಬಿದ್ದಿದ್ದಡೆ ತಿನಬಂದ ನಾಯಿಜಗಳವ ನೋಡಿರೇ !

ಗಗನದಾಚೆ ಗಗನಗಳು. ಕಡಲಾಚೆ ಕಡಲುಗಳು. ಬೀಸುವ ಗಾಳಿ... ಈಸುವ ಮೀನು... ಹಾರುವ ಹಕ್ಕಿ... ಕುಣಿವ ನವಿಲು... ಕೂಗುವ ಕೋಗಿಲೆ !

ಆ ಹುಡುಗಿ ಹುಡುಗನನ್ನು ಕೂಗಿ ಕರೆದು ಮರದ ಹಣ್ಣು... ಬೆಟ್ಟದ ಹೂವು... ತಂದುಕೊಡಲು ಹೇಳಿದಳು.

ಆತ ಹೇಳಿದ ''ಬೇಡ... ಬೇಡ ಚಲುವಿ... ಹೂವು ಬಳ್ಳಿಯಲ್ಲೇ ಇರಲಿ... ಹಣ್ಣು ಮರದಲ್ಲೇ ಇರಲಿ... ನಿನಗೆ ಮಾತ್ರ ನಾನಿರಲಿ...'' ಮರಿಗುಬ್ಬಿಯಾಗಿ ಅವಳ ಮುಂದೆ ಬಾಗಿ ಕುಂತ.

ಅವಳು ಅವನ ಹೆಗಲು ಏರಿದಳು. ಇವನು ಅವಳ ಪಾದ ಚುಂಬಿಸಿದ.

ಅವಳು ಕೇಳಿದಳು – ''ಪ್ರಿಯಾ... ನನಗಾಗಿ ಒಂದು ಜೋಪಡಿ ಕಟ್ಟಿಕೊಡುವಿಯಾ ?''

ಅವನೆಂದ – ''ಸಖಿ... ನಿನಗೆ ನಾನೇ ಜೋಡಿ... ನನಗೆ ನೀನೇ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳ ಚಿತ್ತಾರ ಬಿತ್ತಾರದ ಗುಡಿ... ನಮಗೇಕೆ ಬೇರೆ ಗಡಿ ?''

''ಹೌದೇ ಪ್ರಿಯಾ ?''

''ಹೌದು ಸಖಿ... ಕಮಲಮುಖಿ... ಇಗೋ ಈ ಗಗನಕ್ಕೆ ಗೋಡೆ ಕಟ್ಟುವಿಯಾ... ಈ ಗಾಳಿಗೆ ಬೇಲಿ ಹಾಕುವಿಯಾ... ಇಗೋ ಈ ಹಕ್ಕಿ... ಈ ನವಿಲು... ಗುಬ್ಬಿ... ಹಂಸೆ... ಪಾರಿವಾಳ... ಚಿಗರಿ... ಮೊಲ... ಹುಲಿ... ಸಿಂಹ... ಇವಕ್ಕೆಲ್ಲ ಗಗನವೇ ಮಂಚ... ಕಡಲೇ ಪಲ್ಲಕ್ಕಿ... ಹಗಲೇ ಹಬ್ಬ... ರಾತ್ರಿಯೇ ಮೌನ ಮಿಲನ ! ನಾವೇಕೆ ಹಾಗಿರಬಾರದು ಸಖಿ ?''

ಆ ಚಲುವಿ ಚೆಂದುಟಿಯ ಚಿಲುಮೆಯಲ್ಲಿ ಚಿಲ್ಲನೆ ಚಿಮ್ಮಿಬಂದು ಆ ಚಲುವನನ್ನು ಚುಂಬಿಸುತ್ತ ಹೇಳಿದಳು.

''ಸಖಾ... ಊಹುಂ... ನನಗೆ ಗೋಡೆ ಬೇಕು... ನೀನೆ ನನ್ನ ಗೋಡೆ... ನನಗೆ ಮನೆ ಬೇಕು... ನೀನೆ ನನ್ನ ಮನೆ...!''

ಮಂಗಗಳು ಹಣ್ಣು ತಂದುಕೊಟ್ಟವು. ಜಿಂಕೆಗಳು ಜೇನು ಸುರಿದವು. ಗಾಳಿ ಗಂಧ ತೂರಿತು. ಗಗನ ಗಾನ ಸುರಿಯಿತು. ಇಬ್ಬರೂ ಅಗಾಧವಾಗಿ ಅಪ್ಪಿಕೊಂಡದ್ದು ಇಬ್ಬರಿಗೂ ಗೊತ್ತಾಗಲಿಲ್ಲ! ಕನಸು ಕಾವ್ಯವಾಯಿತು. ಬಿಸಿಲು ಬೋರಂಗಿಯಾಯಿತು. ಮಳೆ ಮಲ್ಲಿಗೆ ಸುರಿಯಿತು.

*ಅಹಾ... ಏನು ಸುಖ ಈ ಮುಗಿಲು !*
*ಎಂಥ ಸುಖ ಈ ಹಗಲು !*
*ಎಂಥಾ ಜೋಗುಳ ಈ ಕಡಲು !*

* * *

ಆ ದಾರಿಯಲ್ಲಿ ಸನ್ಯಾಸಿಗಳು ಬಂದರು. ಸ್ವಾಮಿಗಳು ಬಂದರು. ರಾಜರು ಬಂದರು. ಕವಿಗಳು ಬಂದರು. ಶಿಲ್ಪಿಗಳು ಬಂದರು. ಶಿವಯೋಗಿಗಳು ಬಂದರು.

*ಅರಿಯಬಾರದ ಘನವರಿತವರು*
*ಅರಿಯದಂತಿರ್ಪರು ಗುಹೇಶ್ವರಾ !*

ವನವೆಲ್ಲ ತಪೋವನವಾಯಿತು !

ಹಾ... ಹಾ... ಅನ್ನುವಷ್ಟರಲ್ಲಿ ಪರ್ಣಕುಟೀರಗಳು ಎದ್ದವು. ಗವಿಗಳು ಕಂಡವು. ರಥಗಳು ಬಂದವು. ಯುದ್ಧಗಳು ಸಿದ್ಧವಾದವು. ಧರ್ಮಗಳು ಕೂಗಿದವು. ಭಾಷೆಗಳು ನುಗ್ಗಿದವು.

ಗುಡಿಗಳು ನಕ್ಕವು ! ಮೂರ್ತಿಗಳು ಹೊಕ್ಕವು !!

*ಗುಹೇಶ್ವರಾ ನೀನು ಕಲ್ಲಾದೊಡೆ*
*ನಾನೇನಪ್ಪೆನಯ್ಯಾ... ?*

ನಿಗಿನಿಗಿ ಮಲೆಗಳಲ್ಲಿ ಕಾಡು ಕೆಂಡವಾಗಿ ಉರಿಯಿತು. ಮಲೆಯನಾಡಿಗೆ ಕೊಡಲಿ ಕೈಬೀಸಿ ಬಂತು. ರಂಟೆ ಕುಂಟೆಗಳು ಮಣ್ಣು ಕಿತ್ತು ಉತ್ತಿ ಬಿತ್ತಿದವು. ಜೋಳ ಬಂತು. ಗೋಧಿ ಬಂತು. ಅಕ್ಕಿ ಬಂತು. ರಾಗಿ ಬಂತು. ಉದ್ದು - ಅವರೆ - ಅಲಸಂದಿ - ಹೆಸರು - ತೊಗರಿ - ಹುರುಳಿ - ಕಡಲಿ - ಮಡಿಕಿ... ಕುಡಿಕಿ ತುಂಬಿದವು. ಹಾಲು ಬಂತು. ತುಪ್ಪ ಬಂತು. ಹುಗ್ಗಿ ಕುದಿಯಿತು. ಖಾರ - ಹುಳಿ ಬೆಲ್ಲ - ಉಪ್ಪು - ಮಸಾಲಿ - ಈರುಳ್ಳಿ - ಬೆಳ್ಳುಳ್ಳಿ - ಗರಂ ಮಸಾಲಿ - ಉಪ್ಪಿನಕಾಯಿ ಗಮಗಮಿಸಿದವು. ಹಲವಾ ಬಂತು. ಪಲಾವ್ ಬಂತು. ವೈದ್ಯರಿಗೆ ಬುಲಾವ ಬಂತು. ಡಾಕ್ಟರ್ ಬಂದರು. ಸ್ಮಶಾನಗಳು ಬಂದವು. ಜೇಲು - ಕೋರ್ಟು - ಪೊಲೀಸ್ ಸ್ಟೇಶನ್ ಏನೆಲ್ಲ ಬಂದವು.

*ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು*
*ಎತ್ತಣಿಂದೆತ್ತ ಸಂಬಂಧವಯ್ಯಾ ?*

ಎಲ್ಲರೂ ತಮ್ಮ ತಮ್ಮ ನಾಯಿಗಳಿಗೆ ಪಟ್ಟಾಕಟ್ಟಿ ... ''ಇದು ನಮ್ಮ ನಾಯಿ'' ಅಂದರು. ತಮ್ಮ ತಮ್ಮ ಹುಡುಗಿಯರಿಗೆ ಕೊರಳಮಣಿ ಕಟ್ಟಿ ... ''ಇದು ನನ್ನ ಮುತ್ತೈದಿ'' ಅಂದರು. ಭೂಮಿ ಅಳೆದರು. ಹೊಲ ಅಳೆದರು. ಸೀಮಿ ಅಳೆದರು. ಮನೆ ಕಟ್ಟಿದರು. ಕಂಪೌಂಡು ಕಟ್ಟಿದರು. ಕೋಟೆ ಕಟ್ಟಿದರು. ಗಡಿರೇಖೆಗುಂಟ ಬೇಲಿ ಝುಡಿದರು. ಕಾಯಲು ಸೈನ್ಯ ಇಟ್ಟರು. ಸೈನ್ಯಕ್ಕೆ ಟೆಂಟು ಹೊಡೆದರು ! ಸಮುದ್ರವನ್ನೂ ಅಳೆದರು. ಆಕಾಶವನ್ನೂ ಅಳೆದು ಇದು ನನ್ನ ಹಕ್ಕಿನ ಬಯಲು... ಅಂದರು.

*ಬೆಟ್ಟಕ್ಕೆ ಚಳಿಯಾದೊಡೆ ಏನ ಹೊದಿಸುವರಯ್ಯಾ...*
*ಬಯಲು ಬತ್ತಲೆ ಇದ್ದೊಡೆ ಏನನುಡಿಸುವರಯ್ಯಾ... ?*

ಮನೆ ಮೇಲೆ ಮನೆ ಬಂತು. ಧರ್ಮದಲ್ಲಿ ಧರ್ಮಗಳು ಹುಟ್ಟಿದವು. ಆ ಧರ್ಮಗಳಲ್ಲಿ ಜಾತಿಗಳು

**ಪ್ರೊ॥ ಜಿ. ಎಚ್. ಹನ್ನೆರಡುಮಠ**



## ಹನಿಗಳು

ಮಲ್ಲಿಗೆಯಂತೆ ನೀನಿರುವಾಗ
ಮುಡಿಗೆ ಮಲ್ಲಿಗೆ ಏಕೆ ?
ಮಕರಂದ ನಿನ್ನಲ್ಲಿರುವಾಗ
ಚಿಟ್ಟೆ ಸುಳಿತಾವ ಜೋಕೆ.

ನಾನು ಬರೆಯಲು ಕುಂತಿರುವೆ
ಒಂದು ಕವನ
ಅದರ ವಿಷಯ ವಸ್ತು ಹುಡುಗಿ ಯವ್ವನ
ಹುಡುಗಿ ಇರುತ್ತಿದ್ದಳು ಬರಿ ಮೌನ
ಇದರಿಂದ ಸಾಗಲಿಲ್ಲ ಮುಂದೆ
ನನ್ನ ಕವನ.

ನಾಗರಾಜ ಆರ್. ಎಸ್.
C/o ರವಿ ಹೊನ್ನಳಿ, ಮನೆ ನಂ. ೨-೯೦೯/೪೪/೪೧, ಜಾಗೃತಿ ಕಾಲನಿ, ರಿಂಗ್ ರಸ್ತೆ, ಗುಲಬರ್ಗಾ - ೫೮೫ ೧೦೫

ಬಂದವು. ಜಾತಿಗಳಲ್ಲಿ ಉಪಜಾತಿಗಳು... ಉಪಜಾತಿಗಳಲ್ಲಿ ಮರಿಜಾತಿಗಳು... ಮರಿಜಾತಿಗಳಲ್ಲಿ ಕಿರಿ ಜಾತಿಗಳು... ಕಿರಿಜಾತಿಗಳಲ್ಲಿ ಕಿರಿಕಿರಿ ಜಾತಿಗಳು... ಕಿಡಾಡಿ ಕುಟ್ಟಿ ಹೊಕ್ಕವು. ಜಾತಿಗೊಬ್ಬ ಜಗದ್ಗುರು ಬಂದ. ಜಾಗಾಕ್ಕೊಬ್ಬ ವಿಶ್ವಗುರು ಸಿಂಹಾಸನ ಏರಿದ.

ಜ್ಯೋತಿ ಜಾತಿಯಾಯಿತು ! ಶಾಂತಿ ಸಂತಿಯಾಯಿತು !!

ಆನೆ-ಅಂಬಾರಿ - ಕುದುರೆ-ಪಲ್ಲಕ್ಕಿ ಬಂದವು.

''ಆನೆಯನೇರಿಕೊಂಡು ಹೋದಿರೇ ನೀವು... ಕುದುರೆಯನೇರಿಕೊಂಡು ಹೋದಿರೇ ನೀವು... ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೇ ಅಣ್ಣಾ... ಸತ್ಯದ ನಿಲವನರಿಯದೆ ಹೋದಿರಲ್ಲಾ...''

ಈ ''ಚೆಲುವ'' ಥರಥರ ನಡುಗಿದ...

ಆ ''ಚೆಲುವಿ'' ಕಣ್ಣೀರು ಸುರಿಸಿದಳು...

ಅವಳ ಎದೆ ಎದೆಯಲ್ಲಿ ಉಳಿಯಲಿಲ್ಲ. ಕಣ್ಣು ಕಣ್ಣಲ್ಲಿ ನಿಲ್ಲಲಿಲ್ಲ. ಗಾಳಿ ಕೆಟ್ಟಿತ್ತು. ನೀರು ಕೆಟ್ಟಿತ್ತು. ಪರಿಸರ ಕೆಟ್ಟು ಹಳಸಿದ ಹುಳಿಮಜ್ಜಿಗೆ ಸಾರು ಆಯಿತು. ಮೌನ ಒಡೆದು ಹುಳಿಬಿದ್ದ ಮೊಸರಾಯಿತು. ಚಂದ್ರ ಬೆಳಗು ಕೆಂಡದುರಿಯಾಯಿತು. ಕಾಡು ಸುಟ್ಟಿತು. ನಾಡು ಕೆಟ್ಟಿತು.

''ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೇ ಧರೆ ಹತ್ತಿ ಉರಿದಡೆ ನಿಲಲುಬಹುದೇ... ಏರಿ ನೀರುಂಬಡೆ... ಬೇಲಿ ಕೆಯ್ಯ ಮೇವೊಡೆ... ನಾರಿ ತನ್ನ ಮನೆಯಲ್ಲಿ ಕಳುವೊಡೆ... ಇನ್ನಾರಿಗೆ ದೂರುವೆ... ?''

ಬೇಲಿ ಇಲ್ಲದಲ್ಲಿ ಬೇಲಿಗಳು ಎದ್ದವು. ಹೂವಿನ ಬೇಲಿ ಕಿತ್ತು ಕಳ್ಳಿಬೇಲಿ ಹಾಕಿದರು. ಕಳ್ಳಿಬೇಲಿ ಕಿತ್ತು ತಂತಿಬೇಲಿ ಹಾಕಿದರು. ತಂತಿಬೇಲಿ ಕಿತ್ತು ಸಿಮೆಂಟ ಬೇಲಿ ಹಾಕಿದರು. ಕಬ್ಬಿಣದ ಗೇಟು ಇಟ್ಟರು. ವಾಚಮನ್ ಇಟ್ಟರು. ವಾಚಮನ್ನನ ಕೈಯಲ್ಲಿ ಬಂದೂಕು ಕೊಟ್ಟರು.

ಈ ಹುಚ್ಚ-ಹುಚ್ಚಿಯರು ಬದುಕಿದ ಈ ತಪೋವನವೇ ಕರ್ಮಕಾಂಡದ ಜೇಲಾಯಿತು. ಮಂತ್ರಕ್ಕಿಂತ ಉಗುಳು ಹೆಚ್ಚಾಯಿತು. ಪಾವತಿ-ಪಟ್ಟಿ - ತಲಪಟ್ಟಿ - ರಸೀದಿ - ಎಂಟ್ರೀ ಫೀ - ಸ್ಪೇಶಲ್ ದರ್ಶನ ಫೀ - ವ್ಹಿಯಾಯ್ಪಿ ವ್ಹಿಜಿಟಿಂಗ್ ಟಿಕೇಟ ಬಂದವು. ತೇರುಗಳು ನಕ್ಕವು. ಪೂಜಾರಿಗಳು ಕೆಂಪು ಕುಂಬಳಕಾಯಿ ಆದರು.

ಹೊಟ್ಟೆ ತುಂಬಲಾರದ್ದಕ್ಕೆ ಈ ಚಲುವ ವಾಚಮನ್ ಕೆಲಸಕ್ಕೆ ಸೇರಿದ. ಈ ಚಲುವಿ ಭಾರೀ ಶ್ರೀಮಂತರ ಮನೆಯ ಮುಸುರಿ ತಿಕ್ಕುವ ಆಳು ಆದಳು. ''ಲೋಕವೇ ನನ್ನ ಮನೆ'' ಅಂದವರು... ಮನೆ ಮನೆಯ ಮುಂದೆ ಭಿಕ್ಷೆ ಬೇಡಿದರು ! ಹಣ್ಣು ಬೇಡ ಅಂದವರು ತುತ್ತು ಹೊಟ್ಟೆಗೆ ಕಣ್ಣುಬಿಟ್ಟರು.

''ಶಿವ ಶಿವಾ...ಸ್ವಪ್ನ ಬಂದೆರಗಿತ್ತಲ್ಲಾ... !''

ಆದರೂ ಹಸಿವೆ ಕೇಳಲಿಲ್ಲ. ಹಮಾಲರಾದರು. ರೈತ ಕಾರ್ಮಿಕರಾದರು. ಫ್ಯಾಕ್ಟರಿ ಕೂಲಿಗಳಾದರು. ಊಹುಂ... ಹಸಿವೆ ಚೀರಿತು !

ಚೆಲುವಿ ಚೀರಿದಳು : ''ಚಲುವಾ... ನಿನ್ನನ್ನು ನಂಬಿ ನಾ ಕೆಟ್ಟೆ.. ಹೊಟ್ಟೆ ತುಂಬಲೊಲ್ಲದು... ಉಂಡರೂ ಇನ್ನೊಂದು ಹಸಿವೆ ಕಾಡುತ್ತಿದೆ. ಏನು ಮಾಡಲಿ ?''

ಅವಳು ಪ್ರಶ್ನೆ ಕೇಳುವಷ್ಟರಲ್ಲಿ... ಯಾರೋ ಗೂಂಡಾಗಳು ಅವಳನ್ನು ಹಿಡಿದು, ಹೆಡಮುರಿಗೆ ಕಟ್ಟಿ, ಕಾರಿನಲ್ಲಿ ಒಗೆದು, ಮುಂಬಯಿ ಪೇಟೆಗೆ ಸಾಗಿಸಿಬಿಟ್ಟರು ! [illegible] ! ಸುಂದರವಾದ ಕಮಲವನ್ನು ಗೂಳಿಗಳು ಚಪ್ಪರಿಸಿ ತಿಂದವು !

ಅತ್ತ... ಅವಳ ಕೂಗು ಡೀಜೇಲ್ ಪೆಟ್ರೋಲ್ ಎಣ್ಣೆಗಳಲ್ಲಿ ಮುಳುಗಿಹೋಯಿತು. ಇತ್ತ... ಎದೆ ಹರಿದು ಚೀರಿದ ಚಲುವನ ಕೈಯಲ್ಲಿ ಪುಢಾರಿ ಧಣಿಗಳು ನೂರು ರೂಪಾಯಿ ನೋಟು ಇಟ್ಟು... ''ಬಡವಾ... ನಾ ಮಡಗಿದಂಗ ನೀನಿರು... ಬಾಯ್ಬಿಟ್ಟೀ ಕೆಟ್ಟಿ..'' ಅಂದರು !

* * *

ಯೋಗಿಗಳು - ಅಧ್ಯಾತ್ಮವಾದಿಗಳು - ಸಿದ್ಧರು - ಸಾಧುಗಳು - ಋಷಿಮುನಿಗಳು - ಸ್ವಾಮಿಗಳು - ಮಹಾಜ್ಞಾನಿಗಳು ಜಗತ್ತಿನ ಈ ಮಹಾನ್ ಸಂಕಟವನ್ನು ಶಾಶ್ವತವಾಗಿ ಪಾರುಮಾಡಲು ಬಂಗಾರದ ಭವ್ಯ ಶಿವಾಲಯಗಳನ್ನು ಕಟ್ಟಿಸಿದರು.

ಉಳ್ಳವರು ಶಿವಾಲಯ ಮಾಡುವರು ನಾನೇನು
ಮಾಡಲಿ ಬಡವನಯ್ಯಾ... !

ಬೆಳ್ಳಿ - ಬಂಗಾರ - ವಜ್ರಗಳಿಂದ ದೇವರ ಮಹಿಮೆ ಅಳೆದರು. ಅವರವರ ದಕ್ಷಿಣೆಯ ತಾಕತ್ತಿನ ಮೇಲೆ ದೇವರು ಅವರವರಿಗೆಲ್ಲಾ ವರ ಕೊಡತೊಡಗಿದ ! ''ನೂರು ಕೊಟ್ಟವರಿಗೆ ಚೂರು... ಸಾವಿರ ಕೊಟ್ಟವರಿಗೆ ಸಾರು... ಲಕ್ಷ ಕೊಟ್ಟವರಿಗೆ ಹೇರು... ಕೋಟಿ ಕೊಟ್ಟವರಿಗೆ ತೇರು...''

ದೇವರನ್ನು ಕಾಯಲು ಪೂಜಾರಿಗಳು ಬಂದರು !

ಹುಂಡಿಗಳನ್ನು ಕಾಯಲು ಪೊಲೀಸರು ನಿಂತರು !

ಮಂತ್ರಿಗಳನ್ನು ಕರೆಸಿ ದೇವರನ್ನೇ ಅವರ ಉಡಿಯಲ್ಲಿ ಇಟ್ಟರು...

ಈ ನ್ಯೂ ಕಲ್ಯಾಣ ಮಹಾನ್ ಧರ್ಮಾಶ್ರಮಕ್ಕೆ ಅವರು ತಮ್ಮ ಇಂಡೋರ್ ಪಾರ್ಟಿ ಫಂಡಿನಲ್ಲಿ ಪರ್ಸೆಂಟೇಜ ಕೊಟ್ಟರು !

ಇವರ ರಕ್ಷಣೆಗೆ ಬ್ಯಾಂಕುಗಳು ಬಂದವು. ಗುಣಗಾನಕ್ಕೆ ಕವಿಗಳು ಬಂದರು. ಸೊಸೈಟಿಗಳು ಹುಟ್ಟಿದವು. ವೆಲ್ ಫೇರ್ ಟ್ರಸ್ಟ... ಸ್ಪಿರಿಚುಅಲ್ ಅಕ್ಯಾಡೆಮಿ... ಹಿಂಡುಗಟ್ಟಿ ಬಂದವು. ಡಿಗ್ರೀಗಳು ಗುಗ್ರೀ ತಿಂದವು. ಪಿಎಚ್.ಡಿ.ಗಳು ಪಚಡಿಯಾದವು. ಶಿಕ್ಷಣವನ್ನು ಮಾರಿದರು ! ಧರ್ಮವನ್ನು ವ್ಯಾಪಾರಕ್ಕಿಟ್ಟರು ! ದೇವರನ್ನು ಲಿಲಾವಿಗೆ ಹಚ್ಚಿದರು ! !

* * *

ವರ್ಷಗಳು ಉರುಳಿದವು...

ದಶಕಗಳು ಜಾರಿದವು...

ಇವರ ಆ ಸುರಸುಂದರ ಸುಶಾಂತ ತಪೋವನದ ತೋಟದಲ್ಲಿ... ಗಿಡಮರಬಳ್ಳಿಗಳನ್ನು ಕಡಿದು... ''ನ್ಯೂ ಡ್ರೀಂಲ್ಯಾಂಡ ಸೂಪರ್ ಜೆಟ್ ಫಾಯಿವ್ ಸ್ಟಾರ್ ಹೊಟೇಲು'' ಅಬ್ಬರದಿಂದ ಅಂಬರವನ್ನು ಚುಂಬಿಸಿ ಮೇಲೆದ್ದಿತು. ಡ್ಯಾನ್ಸ ಬಾರಿನ ಡ್ರಮ್ಮುಗಳು ಡಮಡಮಿಸಿದವು. ಇವರು ಸಾಕಿದ ನವಿಲುಗಳು ತುಂಡುತುಂಡಾಗಿ ರಸಿಕರ ಬಟ್ಟಲಕ್ಕೆ ಬಿದ್ದು ಹೊಟ್ಟೆ ಸೇರಲು ಸಿದ್ಧವಾದವು.

ಈ 'ಚೆಲುವ' ಕಾವಲು ಇದ್ದ ಈ ಹೊಟೇಲಿನ ಝೀಂ-ಝೂಂ - ಝೂಜ್ ಪ್ಯಾರಲರ್‌ನ ಉದ್ಘಾಟನೆಗೆ ಲಂಡನ್ನಿನಿಂದ ವಿಶ್ವಸುಂದರಿಯೊಬ್ಬಳು ಬಂಗಾರದ ಕಾರಿನಲ್ಲಿ ಅವತರಿಸಿ ಬಂದಳು. ಆ ಐಶ್ವರ್ಯರಾಣಿಯ ಸ್ವಾಗತಕ್ಕೆ ಅಬ್ಜಾಧೀಶ್ವರರು, ರಾಜಮಹಾರಾಜರು, ಮಂತ್ರಿಗಳು, ರಾಜ್ಯಪಾಲರು, ಪೊಲೀಸರು, ಫೌಜು ರೆಡ್ ಕಾರ್ಪೆಟ್ ಸ್ವಾಗತಕ್ಕೆ ಸಿದ್ಧವಾಗಿ ನಿಂತರು. ಡ್ರಮ್ಮುಗಳು ಡಮಡಮಿಸಿದವು. ಬ್ಯಾಂಡ ಸೆಟ್ ಭೂಮಿಯನ್ನೇ ಝೂಂಗೊಳಿಸಿತು ! ೨೧ ತೋಪುಗಳು ಹಾರಿದವು. ಟ್ರಕ್ಕುಗಟ್ಟಲೆ ಹೂಮಾಲೆಗಳು ಸುರಿದವು. ಪುಷ್ಪಕ ವಿಮಾನಿನಂತೆ ಗೇಟಿಗೆ ತೇಲಿಬಂದ ಆ ಭವ್ಯಾತಿಭವ್ಯ ಕಾರಿನ ಬಾಗಿಲನ್ನು ಈ ಲಂಡಚಣ್ಣದ ಗೇಟಕೀಪರ್ ಚಲುವನೇ ಭಕ್ತಿಯಿಂದ ತೆಗೆದ.

ಮಹಾರಾಣಿ ಕಾರಿನಿಂದ ಇಳಿದಳು.

ಚಲುವ ಆ ಮಹಾರಾಣಿಯನ್ನು ಬಾಯಿಬಿಟ್ಟು ನೋಡುತ್ತಾನೆ... ಅಯ್ಯೋ... ಅಯ್ಯೋ... ಅವಳೇ... ಅವಳೇ... ತನ್ನ ಪ್ರಾಣಸಖಿ... ಚಲುವಿ ! ಚಲುವಿ !!

ಈತ ನೆತ್ತಿಯಿಂದ ಜೀವಾ ಬಿಟ್ಟಂತೆ... ''ಹಾಂ... ಹಾಂ... ?'' ಅಂದ !

ಅವಳೆಂದಳು –

''ಹುಚ್ಚಾ... ಈ ಜಗತ್ತಿನಲ್ಲಿ ಹರಕೊಂಡವರು ಹರನಾಗುತ್ತಾರೆ.... ಹಂಚಿದವರು ಹಂಚುತಿನ್ನುತ್ತಾರೆ... ತಿಳಕೊ...''

''ಸಂಸಾರವೆಂಬ ಹೆಣ ಬಿದ್ದಿದ್ದಡೆ ತಿನಬಂದ ನಾಯ ಜಗಳವ ನೋಡಿರೇ... ! !''

ಪ್ರೊ|| ಜಿ. ಎಚ್. ಹನ್ನೆರಡುಮಠ
ನಂ. ೫, 'ಮಾವು ಮಲ್ಲಿಗೆ', ಯೋಗಭವನ, ಇಂದ್ರಪ್ರಸ್ಥ
ಬನ್ನೇರುಘಟ್ಟದ ದಾರಿ, ಗೊಟ್ಟಿಗೆರೆ ಅಂಚೆ, ಬೆಂಗಳೂರು-೫೬೦೦೮೩

# ಸ್ಮೈಲ್ ಪಿಂಕಿ

ಡಾ|| ಎನ್. ಎಸ್. ಲೀಲಾ

೮೧ನೇ ಆಸ್ಕರ್ ಪ್ರಶಸ್ತಿ ಪ್ರಕಟಗೊಂಡಾಗ ಉತ್ತರ ಪ್ರದೇಶದ ಮಿರ್ಜಾಪುರ್ ತಾಲ್ಲೂಕಿನ ರಾಮ್‌ಪುರ್ ದಬಾಹಿ ಎಂಬ ಹಳ್ಳಿಯಲ್ಲಿನ ಜನ ಬೀದಿಬೀದಿಗಳಲ್ಲಿ ಡೋಲು, ಡಂಗೂರ ಬಾರಿಸುತ್ತಾ ಸಂಭ್ರಮಿಸಿದ್ದು ಎಲ್ಲ ಮಾಧ್ಯಮಗಳಲ್ಲೂ ವರದಿಯಾಯಿತು. ಇದಕ್ಕೆ ಕಾರಣ ಈ ಹಳ್ಳಿಯ ಕುವರಿ ಸ್ಮೈಲ್ ಸಾಕ್ಷ್ಯಚಿತ್ರದ ನಾಯಕಿ. ಮೆಗಾನ್ ಮೈಲಾನ್ ತಯಾರಿಸಿದ ಈ ಸಾಕ್ಷ್ಯಚಿತ್ರ ಸೀಳು ತುಟಿಯ ಅವಹೇಳನಕ್ಕೆ ಗುರಿಯಾಗುವ ಮಕ್ಕಳ ಭವಿಷ್ಯ ರೂಪಿಸುವ ವಿಷಯಾಧಾರಿತ. ಈ ಎಲೆಮರೆಯ ನಾಯಕಿ ತನ್ನ ಹುಟ್ಟು ನ್ಯೂನತೆಗೆ ನಾಂದಿ ಹಾಡಿ ಹುಟ್ಟೂರನ್ನು ಜಗತ್ತಿನ ಭೂಪಟದಲ್ಲಿ ದಾಖಲಿಸಿದ್ದಾಳೆ. ಈ ಹಳ್ಳಿಯನ್ನು ಅಂತರರಾಷ್ಟ್ರೀಯ ಮಾದರಿ ಹಳ್ಳಿಯನ್ನಾಗಿ ರೂಪಿಸುವ ಹುನ್ನಾರವೂ ನಡೆಯುತ್ತಿದೆ. ಈ ಕಥಾನಾಯಕಿ ಪಿಂಕಿ, ಜಗತ್ತಿನ ಸೀಳುತುಟಿ ನ್ಯೂನತೆಯಿಂದ ಬಳಲುವ ೪೦ ಲಕ್ಷ ಮಕ್ಕಳಲ್ಲಿ ಒಬ್ಬಳು. ಭಾರತದಲ್ಲೇ ಸುಮಾರು ಹತ್ತು ಲಕ್ಷ ಮಕ್ಕಳು ಸೀಳುತುಟಿ ಪ್ಲಾಸ್ಟಿಕ್ ಸರ್ಜರಿಗಾಗಿ ಹಾತೊರೆಯುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸೀಳುತುಟಿಯ ಕಾರಣ, ಪ್ರಕಾರ, ತೊಂದರೆ ಮತ್ತು ಚಿಕಿತ್ಸೆಗಳ ಬಗೆಗಳನ್ನು ಪರಿಚಯ ಮಾಡಿಕೊಳ್ಳೋಣ.

ಹುಟ್ಟಿನಿಂದಲೇ ಉಂಟಾಗುವ ವಿಕೃತಿಗಳಲ್ಲಿ 'ಸೀಳುತುಟಿ'ಯೂ ಒಂದು. ಇದು ಒಂದು ಅಖಂಡ ರಚನೆಯಾಗಿರದೆ ಮಧ್ಯದಲ್ಲಿ ಸೀಳಿ ಎರಡು ಹೋಳಾಗಿರುವಂತೆ ಕಾಣುತ್ತದೆ. ಇದನ್ನು ನಾನಾ ಹೆಸರುಗಳಿಂದ ಗುರುತಿಸುವುದಿದೆ: ಮೊಲದುಟಿ, ಹರಕುತುಟಿ, ಸೀಳ್ದುಟಿ ಮುಂತಾದವು ಆಡುಭಾಷೆಯಲ್ಲಿ ಬಳಸುವುದಿದೆ. ಈ ವಿಕೃತಿ ಅತ್ಯಂತ ಸರಳ ರೂಪದಿಂದ ಅತ್ಯಂತ ಆಳದ ಸೀಳುವಿಕೆಯವರೆಗೂ ಉಂಟಾಗಬಹುದು. ಅದಕ್ಕನುಗುಣವಾಗಿ ಅದನ್ನು ತುಟಿಗೆ ಸೀಮಿತ ಸೀಳು; ತುಟಿ-ವಸಡಿಗೆ ಸೀಮಿತ ಸೀಳು; ತುಟಿ, ವಸಡು ಮತ್ತು ಬಾಯಂಗಳ ಸೀಳು; ತುಟಿ, ವಸಡು, ಬಾಯಂಗಳ ಮತ್ತು ಗಲ್ಲದವರೆಗಿನ ಸೀಳುಗಳೆಂದು ಗುರುತಿಸಬಹುದು. ಇವೆಲ್ಲವೂ ಭ್ರೂಣ ಬೆಳವಣಿಗೆಯ ಹಂತದ ಏರುಪೇರುಗಳಿಂದ ಬುರುಡೆ, ಮುಖ, ದವಡೆಗಳು ರೂಪುಗೊಳ್ಳುವಾಗ ಉಂಟಾಗುವ ನ್ಯೂನತೆಗಳಿಂದಾಗುತ್ತವೆ. ಹಾಗಾಗಿ ಹುಟ್ಟುವ ಮಗು ಕೆಲವೊಂದು ಬಗೆಯ ಭೌತಿಕ ಲಕ್ಷಣಗಳಲ್ಲಿ ಭಿನ್ನವಾಗುವುದು. ಹರಕು ತುಟಿ ರುಂಡಭಾಗದ ದ್ವಿಪಾರ್ಶ್ವಗಳ ಕೂಡಿಕೆಯನ್ನು ದೋಷಪೂರಿತವಾಗಿ ಮಾಡುವುದು.

ಹುಟ್ಟು ಒಂದು ಆಕಸ್ಮಿಕ ಘಟನೆ. ಅದು ತಂದೆ-ತಾಯಿಯರ ಆನುವಂಶಿಕ ಘಟಕಗಳ ಸಮಾವೇಶದಿಂದ ರೂಪುಗೊಳ್ಳುವ ಕ್ರಿಯೆ. ಈ ಘಟಕಗಳ ಸಮಾವೇಶದ ನಂತರ ಅನುಕೂಲಕರ ಸನ್ನಿವೇಶಗಳು ಕಾಕತಾಳೀಯವಾಗಿ ದೊರೆತಾಗ ಆರೋಗ್ಯಕರ, ಸದೃಢ ಮಗು ಜನಿಸುವುದು. ಅಂಡವು ಭ್ರೂಣವಾಗಿ ರೂಪುಗೊಳ್ಳುವ ಪ್ರಾರಂಭಿಕ ಹಂತದಲ್ಲಿ ಎಂದರೆ ಸುಮಾರು ೩ ತಿಂಗಳುಗಳವರೆಗೆ ಸೂಕ್ತ ವಾತಾವರಣ ಕಲ್ಪಿಸಿದಾಗ ಸಹಜ ಬೆಳವಣಿಗೆ ಸಾಧ್ಯವಾಗುತ್ತದೆ. ಆನುವಂಶಿಕ ನ್ಯೂನತೆ ಅಂಡದ ಹಂತದಲ್ಲಿಯೇ ಇದ್ದಾಗ ಸೂಕ್ತ ವಾತಾವರಣ ದೊರೆತರೂ ವಿಕೃತಿಯನ್ನು ತಡೆಯಲು ಸಾಧ್ಯವಾಗದು. ಹಾಗಾಗಿ ಯಾವುದೇ ಆನುವಂಶಿಕತೆ ರೂಪುಗೊಳ್ಳುವುದು ಆನುವಂಶಿಕ ಲಕ್ಷಣ ಮತ್ತು ಪರಿಸರ ಪ್ರಭಾವಗಳ ಒಟ್ಟಾರೆ ಕಾರ್ಯ ಕಾರಣಗಳಿಂದ. ಇದನ್ನು ಸರಳೀಕರಿಸಿ ಹೇಳಬಹುದಾದರೆ ಈ ಸೂತ್ರವನ್ನು ಪರಿಗಣಿಸಬಹುದು.

$$\text{ಆನುವಂಶಿಕತೆ} = \frac{\text{ಆನುವಂಶಿಕ ಲಕ್ಷಣಗಳು}}{\text{ಆನುವಂಶಿಕ ಲಕ್ಷಣ + ಪರಿಸರ ಪ್ರಭಾವ}}$$

ಮಾನವರಲ್ಲಿ ರುಂಡದ ಬೆಳವಣಿಗೆ ಮಧ್ಯಭಾಗದ ಮೂಗು ಮತ್ತು ಹಣೆ, ದ್ವಿಪಾರ್ಶ್ವದ ಮೇಲು ಮತ್ತು ಕೆಳದುಟಿಗಳು ಕ್ರಮೇಣವಾಗಿ ಒಂದಕ್ಕೊಂದು ಕೂಡಿ ರೂಪುಗೊಳ್ಳುವುದು, ಈ ದ್ವಿಪಾರ್ಶ್ವದ ಅಂದರೆ ಎಡ



ಆಸ್ಕರ್ ರಾಜಕುಮಾರಿ ಪಿಂಕಿ



ಮತ್ತು ಬಲ ಭಾಗಗಳಲ್ಲಿ ಬೆಳವಣಿಗೆ ಕುಂಠಿತವಾದರೆ ಕೂಡುವಿಕೆಗೆ ಭಂಗವಾಗಿ ಸೀಳುಂಟಾಗುತ್ತದೆ. ಅದು ಚರ್ಮದ ಹಂತದಲ್ಲಿನ ಸೀಳಾದರೆ ಸರಳ ರೂಪದ ತುಟಿಯ ವಿಕೃತಿಯಾಗಬಹುದು. ಸ್ನಾಯುವಿನ ಹಂತದ ಸೀಳಾದರೆ ದವಡೆಯೂ ಸೀಳಿ ಆಳಕ್ಕಿಳಿದ ವಿಕೃತಿಯಾಗುವುದು, ಮೂಳೆಯ ಹಂತದಲ್ಲಿನ ಸೀಳಾದರೆ ಇಡೀ ಬಾಯಂಗಳವೇ ಬಿರುಕು ಬಿಟ್ಟಂತಾಗುವುದು. ಈ ಎಲ್ಲಾ ನ್ಯೂನತೆಯ ಆಳಕ್ಕನುಗುಣವಾಗಿ ಹುಟ್ಟಿದ ಮಗು ಹುಟ್ಟಿನಿಂದಲೇ ಸಮಸ್ಯೆಗಳನ್ನನುಭವಿಸಬೇಕಾಗುವುದು. ಮೊದಲಿಗೆ ತಾಯಿಯ ಮೊಲೆಯಿಂದ ಹಾಲನ್ನು ಹೀರಲು ತೊಡಕಾಗಬಹುದು. ನಂತರ ಶಬ್ದಗಳನ್ನು ಹೊರಡಿಸಿ ಮಾತನಾಡಲು ಅಡಚಣೆಯಾಗುವುದು. ಮುಖ್ಯವಾಗಿ ಸಾಮಾಜಿಕ ಕೀಳರಿಮೆ ಬೆಳಸಿಕೊಂಡು ಮಾನಸಿಕ ಆಘಾತಕ್ಕೂ ಒಳಗಾಗಬಹುದು.

ಭೌಗೋಳಿಕ ಹಿನ್ನೆಲೆಯಲ್ಲಿ ಈ ನ್ಯೂನತೆಯ ಅಧ್ಯಯನ ಕೈಗೊಳ್ಳಲಾಗಿತ್ತು. ಅದರನ್ವಯ ಏಷಿಯಾದಲ್ಲಿ ಇದು ೪೦೦ರಲ್ಲಿ ಒಂದು ಮಗುವಿನಲ್ಲಿ ಕಾಣಿಸಿಕೊಂಡರೆ, ಅಮೆರಿಕಾದಲ್ಲಿ ೭೦೦ರಲ್ಲಿ ಒಂದು. ಯೂರೋಪಿನಲ್ಲಿ ಇದು ಅಪರೂಪವೆನಿಸಿದರೆ, ಆಫ್ರಿಕಾ ಜನತೆಯಲ್ಲಿ ಅತ್ಯಂತ ಅಪರೂಪ. ಸುಮಾರು ೧೫೦೦ರಲ್ಲಿ ಒಂದು ಮಗು ನ್ಯೂನತೆಗೊಳಗಾಗುವ ಸಂಭವವಿರಬಹುದು.

ಈ ನ್ಯೂನತೆಯ ಕಾರ್ಯ-ಕಾರಣಗಳನ್ನು ಹುಡುಕುವತ್ತ ಅನೇಕ ಸಂಶೋಧನೆಗಳನ್ನು ಕೈಗೊಳ್ಳಲಾಗಿದೆ. ವೈವಿಧ್ಯಮಯ ಪರಿಣಾಮಗಳ ವಿವರಣೆ ವೈದ್ಯಕೀಯ ಮತ್ತು ಆನುವಂಶಿಕವಾಗಿ ನೀಡಲಾಗಿದೆ. ಏಕಸಾಮ್ಯದ ವಿವರಣೆಯಿಲ್ಲದ ಭಿನ್ನ ಜನ್ಮತಃ ಮಿಶ್ರ ಪ್ರತಿಕ್ರಿಯೆಗಳಿಂದ ಯಾವುದೇ ನಿರ್ದಿಷ್ಟ ಕಾರಣ

ನೀಡಲಾಗುವುದಿಲ್ಲ. ಅವುಗಳಲ್ಲಿ ಪ್ರಮುಖ ಕಾರಣಗಳೆಂದರೆ, ೧೯೬೦ರಲ್ಲಿ ಮಾನವ ಕ್ರೋಮೊಸೋಮ್ ೧೩, ಇಂತಹ ನ್ಯೂನತೆ ತರಬಲ್ಲದೆಂದು ವಿವರಿಸಿತ್ತು. ಇದು ೫೦೦೦ದಲ್ಲಿ ಒಬ್ಬರಿಗೆ ಕಾಣಿಸಕೊಳ್ಳುವಂತಹ ನ್ಯೂನತೆ ಎಂದೂ, ನ್ಯೂನತೆಯ ಮಟ್ಟ ಅತ್ಯಂತ ಆಳದ್ದಾಗಿದ್ದರೆ ಕೆಲವೇ ವಾರದಲ್ಲಿ ಭ್ರೂಣ ಬೆಳೆಯಲಾಗದೆ ನಶಿಸಿಹೋಗುವುದೆಂದೂ ತೋರಿಸಲಾಗಿತ್ತು. ಇತ್ತೀಚಿನ ಅಧ್ಯಯನಗಳಿಂದ ಇದು ಲೈಂಗಿಕ ಕ್ರೋಮೊಸೋಮುಗಳ ದೋಷಯುಕ್ತ ವಂಶವಾಹಿಗಳಿಂದ ಉಂಟಾಗುವುದೆಂದು ನಂಬಲಾಗಿದೆ.

ಆನುವಂಶಿಕ ಕಾರಣಗಳೇ ಅಲ್ಲದೆ ಗರ್ಭಧರಿಸಿದ ತಾಯಿ ಭ್ರೂಣಕ್ಕೆ ನೀಡುವ ಪರಿಸರ, ಆಹಾರ, ವೈರಸ್ ಸೋಂಕುಗಳಿಂದಲೂ ದೋಷಯುಕ್ತ ಭ್ರೂಣ ಬೆಳವಣಿಗೆ ಸಾಧ್ಯ ಎನ್ನುವುದನ್ನು ತೋರಿಸಲಾಗಿದೆ. ವಿಶೇಷವಾಗಿ ಬಿ-ವಿಟಮಿನ್ ಕೊರತೆಯಿಂದಾಗಿ ಸೀಳ್ದುಟಿಯಾಗಬಹುದು. ಎ-ವಿಟಮಿನ್ ಕೊರತೆಯಿದ್ದಾಗಲೂ ಹಾಗೂ ಅತಿಯಾಗಿ ಸೇವಿಸಿದಾಗಲೂ ನ್ಯೂನತೆ ಉಂಟಾಗಬಹುದು. ಗರ್ಭಿಣಿಯರು ಮೂರು ತಿಂಗಳಿಗೆ ಮುಂಚೆ ವೈರಸ್ ಸೋಂಕಿನಿಂದ ಬಳಲಿದರೆ, ಅತಿಯಾದ ಕಾರ್ಟಿಸೋನ್ ಔಷಧಗಳನ್ನು ಸೇವಿಸಿದರೆ, ಕ್ಷ-ಕಿರಣಗಳಿಗೆ ದೇಹವನ್ನು ಒಡ್ಡಿದರೆ, ಆಕ್ಸಿಜನ್ ಕೊರತೆಯಿಂದ ಬಳಲಿದರೆ ಇಲ್ಲವೇ ಅತಿಯಾದ ಮಾನಸಿಕ ಒತ್ತಡಕ್ಕೆ ಒಳಗಾದರೆ ಸೀಳ್ದುಟಿ ವಿಕೃತಿಯ ಮಗುವಿನ ಜನನಕ್ಕೆ ಕಾರಣವಾಗಬಹುದು.

ಸಾಕ್ಷ್ಯಚಿತ್ರದ ನಾಯಕಿ ಪಿಂಕಿ ಮಾಡಿಸಿಕೊಂಡ ಶಸ್ತ್ರಚಿಕಿತ್ಸೆಯಂತೆ ಈ ನ್ಯೂನತೆಯನ್ನು ಪರಿಹರಿಸಿಕೊಳ್ಳುವ ಮಾರ್ಗವನ್ನು ಮೊತ್ತಮೊದಲಿಗೆ ಪರಿಚಯಿಸಿದ ಕೀರ್ತಿ ಭಾರತೀಯರದ್ದು ಎನ್ನುವುದು ಹೆಮ್ಮೆಯ ವಿಷಯ. ಇದೇ ವೈದ್ಯ ಪಿತಾಮಹ ಸುಶ್ರುತ ವಿವರಿಸಿರುವ ಸುರೂಪಿಕ ಚಿಕಿತ್ಸೆ, ಇಂದು ಇದು ಪ್ಲಾಸ್ಟಿಕ್ ಸರ್ಜರಿ. ಸುಶ್ರುತ ಸಂಹಿತೆಯ ನಂತರ ವಾಗ್ಭಟ ಈ ಚಿಕಿತ್ಸೆಯ ಬಗೆಗೆ ಬೆಳಕು ಚೆಲ್ಲಿದ್ದಾನೆ. ಬುದ್ಧನ ಅನುಯಾಯಿಯಾಗಿದ್ದ ಜೀವಕ ಎಂಬ ವೈದ್ಯ ನಾಸಿಕ, ಕಿವಿ ಮತ್ತು ಸೀಳ್ತುಟಿಗಳ ಶಸ್ತ್ರಚಿಕಿತ್ಸೆ ಮಾಡಿದ ದಾಖಲೆ






ಸೀಳ್ದುಟಿ



ತುಟಿ, ವಸಡು ಸೀಳು



ತುಟಿ, ವಸಡು ಮತ್ತು ಬಾಯಂಗಳ ಸೀಳು

ಸಿಗುತ್ತದೆ. ಆ ನಂತರ ಈ ದಿಶೆಯಲ್ಲಿ ನಡೆದ ವರದಿಗಳು ಯಾವುದೂ ಇಲ್ಲ. ಭಾರತದಿಂದ ಆರಂಭಗೊಂಡ ಈ ಚಿಕಿತ್ಸಾ ವಿಧಾನ ಅರಬ್ ಮತ್ತು ಯೂರೋಪ್ ದೇಶಗಳಲ್ಲಿ ಬಳಸಲಾಗಿತ್ತು.

ಮೊದಲನೇ ಜಾಗತಿಕ ಸಮರದಲ್ಲಿ ಸೇನೆಯ ಗಾಯಾಳುಗಳಿಗೆ ಪ್ಲಾಸ್ಟಿಕ್ ಸರ್ಜರಿ ತಂತ್ರಜ್ಞಾನ ಅಳವಡಿಸುವ ಪ್ರಯತ್ನಗಳು ನಡೆದವು. ಎರಡನೇ ಜಾಗತಿಕ ಸಮರದ ವೇಳೆಗೆ ವೈವಿಧ್ಯಮಯ ವಿಧಿ ವಿಧಾನಗಳು ಬಳಕೆಗೆ ಬಂದವು. ಸಂಜಾತ ನ್ಯೂನತೆಗಳು, ಅಪಘಾತಗಳಿಂದ ಕಳೆದುಕೊಂಡ ಅಂಗಾಂಗಳನ್ನು ಜೋಡಿಸುವ, ಕುರೂಪಿಗಳನ್ನು ಸುರೂಪಿಗಳನ್ನಾಗಿಸುವ ಸುರೂಪಿಕ ಚಿಕಿತ್ಸೆ ವೈದ್ಯಕೀಯದಲ್ಲಿ ಭಾರಿ ಉದ್ಯಮವಾಗಿಯೇ ಬೆಳೆಯುತ್ತಿದೆ. ಇಂದು ಇದು ವೈದ್ಯನ ಚಾಕಚಕ್ಯತೆಗೆ ಸವಾಲನ್ನೊಡ್ಡುವ ತಂತ್ರಜ್ಞಾನವಾಗಿ ಭಾರಿ ಬೇಡಿಕೆಯ ಕ್ಷೇತ್ರವಾಗಿ ಬೆಳೆಯುತ್ತಿದೆ. ಜೈವಿಕ ತಂತ್ರಜ್ಞಾನದ ಅಳವಡಿಕೆಯಿಂದ ಕಾಂಡಕೋಶಗಳ ಮೂಲಕ ಅಂಗಾಂಶ, ಅಂಗಗಳ ಕೃಷಿಯೂ ಇದಕ್ಕೆ ಪೂರಕ ಎನಿಸಿದೆ.

ಸೀಳ್ದುಟಿಯ ರೋಗನಿದಾನ ಹುಡುಕುವ ಪ್ರಯತ್ನ ಹುಲ್ಲಿನ ಮೆದೆಯಲ್ಲಿ ಸೂಜಿ ಹುಡುಕುವಂತಾಗಿದ್ದರೂ, ಸಾಮಾಜಿಕ ಮತ್ತು ಮಾನಸಿಕ ಸ್ಥೈರ್ಯ ತುಂಬಬಲ್ಲ ಶಸ್ತ್ರಚಿಕಿತ್ಸೆ ಪಿಂಕಿಯಂತಹ ಹಲವಾರು ಮಕ್ಕಳಿಗೆ ಆಶಾಕಿರಣವಾಗಿದೆ.

ಮಾನವರ ೨೩ ಜೊತೆ ಕ್ರೋಮೊಸೋಮುಗಳ ಜೀನಿ ನಕ್ಷೆ ತಯಾರಿಸುವ ಹುನ್ನಾರದಲ್ಲಿ ಯಶಸ್ವಿ ಸಾಧಿಸಿದ್ದೇವೆ ಎಂದುಕೊಂಡರೂ ದೇಹದ ರಹಸ್ಯಗಳು ಇನ್ನೂ ನಿಗೂಢವೇ. ಅದರಲ್ಲಿ ಸೀಳ್ದುಟಿಯ ಮೂಲ ಪ್ರಶ್ನಾರ್ಥಕವೇ !!


**ಡಾ|| ಎನ್. ಎಸ್. ಲೀಲಾ**

೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ಸ್, ೧೪-ಎ, ಅಡ್ಡಬೀದಿ, ಮಲ್ಲೇಶ್ವರಂ

ಬೆಂಗಳೂರು - ೫೬೦ ೦೦೩

# ಗೋಟು ವಾದ್ಯ: ಅದರ ಸಂಕ್ಷಿಪ್ತ ಪರಿಚಯ

**ಗೋ**ಟುವಾದ್ಯವು ವೀಣೆಯ ಆಕಾರವುಳ್ಳ, ಮನೆಗಳಿಲ್ಲದ, ಒಂದು ಸಣ್ಣ ಮರದ ತುಂಡಿನ ಸಹಾಯದಿಂದ ನಾದವನ್ನು ಹೊರಪಡಿಸುವ ದಕ್ಷಿಣ ಭಾರತದ ಒಂದು ಅಪೂರ್ವ ವಾದ್ಯ. ಈ ವಿಧವಾದ ವಾದ್ಯವನ್ನು ಉತ್ತರಾದಿ ಸಂಗೀತ ಪದ್ಧತಿಯಲ್ಲಿ ಬಡಾ ಅಥವಾ ಬಟ್ಟಾ ಬೀನ್ ಎಂದು ಕರೆಯುತ್ತಾರೆ. ಇದನ್ನು ನುಣುಪಾದ ಗಾಜಿನ ತುಂಡಿನ ಸಹಾಯದಿಂದ ಗೋಟುವಾದ್ಯ ನುಡಿಸಿ ನಾದವನ್ನು ಹೊರಪಡಿಸುವ ಸಂಪ್ರದಾಯವಿದೆ. ಕನ್ನಡ ನಿಘಂಟುಗಳಲ್ಲಿ 'ಗೋಟು'ಯೆಂದರೆ ಚೆನ್ನಾಗಿ ಬಲಿತು ಒಣಗಿದ ಮರದ ತುಂಡು ಎಂಬ ಅರ್ಥವಿದೆ. ವೀಣೆಯನ್ನು ಹೋಲುವ ಈ ವಾದ್ಯವನ್ನು ಸಣ್ಣ ಮರದ ತುಂಡಿನಿಂದ ನುಡಿಸುವುದರಿಂದ ಗೋಟುವಾದ್ಯವೆಂಬ ಹೆಸರು ಬಂದಿರಬಹುದು ಎಂದು ಊಹಿಸಲಾಗಿದೆ.

ದಕ್ಷಿಣಾದಿ ಸಂಗೀತ ಪದ್ಧತಿಯನ್ನು ಅಧ್ಯಯನ ಮಾಡಿ, ಆಶ್ರೇಯ ಸಂಗೀತ ಗ್ರಂಥಗಳ ಸಾರವನ್ನು ಆಂಗ್ಲ ಭಾಷೆಯಲ್ಲಿ ಪುಸ್ತಕಗಳ ರೂಪದಲ್ಲಿ ಪ್ರಕಟಿಸಿದ, ಹತ್ತೊಂಬತ್ತನೇ ಅಂತ್ಯ ಮತ್ತು ಇಪ್ಪತ್ತನೇ ಶತಮಾನದಲ್ಲಿದ್ದ ಹಿರಿಯ ಶಾಸ್ತ್ರಜ್ಞರೂ, ಮಾರ್ಗದರ್ಶಿಗಳೂ ಆದ ಪ್ರೊಫೆಸರ್ ಸಾಂಬಮೂರ್ತಿಯವರು ಆಂಗ್ಲೇಯರಿಗೂ ನಮ್ಮ ಸಂಗೀತ ವೈಭವವನ್ನು ಪ್ರಚಾರ ಮಾಡುವ ಉದ್ದೇಶದಿಂದ ಬರೆದ ಈ ಪುಸ್ತಕಗಳಲ್ಲಿ ಸಂಗೀತ ವಾದ್ಯಗಳ ವಿಷಯವನ್ನು ತಿಳಿಸುವಾಗ, ಗೋಟುವಾದ್ಯವು ಭಾರತದ ಒಂದು ಅಪರೂಪ ವಾದ್ಯ; ಸುಮಾರು ಏಳು ನೂರು ವರ್ಷಗಳ ಹಿಂದಿನಿಂದ ಬಳಕೆಯಲ್ಲಿದ್ದಿರಬಹುದು; ಮತ್ತು ೧೨ನೇ ಶತಮಾನದಲ್ಲಿದ್ದ ವಿಜಯನಗರದ ರಘುನಾಥ ನಾಯಕರೆಂಬ ಸಂಗೀತಾಚಾರ್ಯರು ತಮ್ಮ ಗೇಯನಾಟಕದ ಪದ್ಯಗಳ ಸಮೂಹದ ತೆಲುಗು ಭಾಷೆಯ 'ಶೃಂಗಾರ ಸಾವಿತ್ರಿ' ಎಂಬ ಗ್ರಂಥದಲ್ಲಿ ಗೋಟುವಾದ್ಯವನ್ನು 'ಮಹಾನಾಟಕ ವೀಣೆ' ಎಂದು ಕರೆದಿದ್ದಾರೆ. ಆಗ ಮಹಾನಾಟಕ ವೀಣೆಯು ನಾಟಕ ಮತ್ತು ನೃತ್ಯಗಳಿಗೆ ಸಂಗೀತವನ್ನು ಒದಗಿಸುತ್ತಿದ್ದ ಪ್ರಮುಖ ವಾದ್ಯವಾಗಿರಬಹುದೆಂದು ಊಹಿಸಿದ್ದಾರೆ.

'ಗೋಟು' ಎಂದರೆ ಮರದ ತುಂಡು, 'ಕೋಡು' ಎಂದರೆ ಕೊಂಬಿನ ಚೂರು, ವಾದ್ಯ ಎಂದರೆ ಸ್ವರಗಳನ್ನು ಶ್ರುತಿ ಬದ್ಧವಾಗಿ ನುಡಿಸುವಂತಹ ಉಪಕರಣ. ಈ 'ಗೋಟು' ಅಥವಾ 'ಕೋಡು'ವಿನ ಸಹಾಯದಿಂದ ಸಂಗೀತದ ನಾದವನ್ನು ಹೊಮ್ಮಿಸುವುದರಿಂದ ಈ ವಾದ್ಯವನ್ನು ಮೊದಲು 'ಕೋಡು' ವಾದ್ಯವೆಂದೂ ನಂತರ ಇದನ್ನು 'ಗೋಟು'ವಾದ್ಯವೆಂದೂ ಕರೆದಿರಬಹುದು ಎಂದು ಸಾಂಬಮೂರ್ತಿಯವರು ಅಭಿಪ್ರಾಯಪಡುತ್ತಾರೆ.

ದಂತಕಥೆಗಳ ಒಂದು ಮೂಲದಲ್ಲಿ ಗೋಟುವಾದ್ಯದ ಬಗ್ಗೆ ಪ್ರಸ್ತಾಪಿಸಿದ್ದ ವಿಷಯವನ್ನು ನನ್ನ ಗುರುಗಳಾದ ಸಂಗೀತ ಕಲಾನಿಧಿ ಶ್ರೀ ಬೂದಲೂರು ಕೃಷ್ಣಮೂರ್ತಿ ಶಾಸ್ತ್ರಿಗಳು ತಿಳಿಸಿದ್ದರು. ಶ್ರೀ ಶಾಸ್ತ್ರಿಗಳು ತಮ್ಮ ಇಡೀ ಜೀವನದಲ್ಲಿ ಈ ವಾದ್ಯದ ಬೆಳವಣಿಗೆ ಮತ್ತು ಅಭಿವೃದ್ಧಿಗಳಿಗೆ ದುಡಿದರು.

ಗೋಟುವಾದ್ಯವನ್ನು ನುಡಿಸುವುದರಲ್ಲಿ ಎರಡು ಸಂಪ್ರದಾಯಗಳು ಬೆಳೆದುಬಂದಿವೆ: (೧) ಸಂಗೀತ ಕಲಾನಿಧಿ ಶ್ರೀ ನಾರಾಯಣ ಐಯ್ಯಂಗಾರರ ಸಂಪ್ರದಾಯ ಮತ್ತು (೨) ಸಂಗೀತ ಕಲಾನಿಧಿ ಶ್ರೀ ಬೂದಲೂರು ಕೃಷ್ಣಮೂರ್ತಿ ಶಾಸ್ತ್ರಿಗಳ ಸಂಪ್ರದಾಯ. ಈ ಎರಡು ಸಂಪ್ರದಾಯಗಳಲ್ಲಿ ಗೋಟುವಿನ ಆಕಾರ (ಉದ್ದ), ಅದನ್ನು ಹಿಡಿದು ಜರುಗಿಸುವ ಪದ್ಧತಿ, ತಂತಿಗಳನ್ನು ಜೋಡಿಸಿಕೊಳ್ಳುವ ವಿಧಾನಗಳು ವಿಭಿನ್ನವಾಗಿವೆ. ಈ ಎರಡು ಶೈಲಿಗಳೂ ತಮ್ಮದೇ ಆದ ವೈಶಿಷ್ಟ್ಯವನ್ನು ಪ್ರದರ್ಶಿಸುತ್ತವೆ.

ಗೋಟುವಾದ್ಯದಲ್ಲಿ ಅನುಕಂಪನ ವೇಪನ ತಂತಿಗಳನ್ನು ಅಥವಾ 'ಸ್ವಯಂಭೂ' ಸ್ವರಗಳು ನಾದವುಂಟಾಗುವುದಕ್ಕೆ ಭಾರತೀಯ ಸಂಗೀತ ಪದ್ಧತಿಯ ಹನ್ನೆರಡು ಸ್ವರಸ್ಥಾನಗಳಿಗೆ ಹನ್ನೆರಡು ತಂತಿಗಳನ್ನು (ನಾಲ್ಕು ಅಥವಾ ಐದು ಪ್ರಧಾನ ತಂತಿಗಳು ಮತ್ತು ಮೂರು ತಾಳ, ಶ್ರುತಿ ತಂತಿಗಳ ಜೊತೆಗೆ) ಕುದುರೆ ಅಥವಾ ಬ್ರಿಡ್ಜ್ ಮೂಲಕ ಅಳವಡಿಸಿಕೊಳ್ಳಲಾಗಿದೆ. ಈ ಪದ್ಧತಿ ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಿಂದ ಆಚರಿಸಲಾಗಿರಬಹುದೆಂದು ಊಹಿಸಲಾಗಿದೆ. ಸ್ವಯಂಭೂ ಸ್ವರಗಳನ್ನು ಗೋಟುವಾದ್ಯದಲ್ಲಿ ಹೊಮ್ಮಿಸುವುದರಿಂದ ಈ ವಾದ್ಯದಲ್ಲಿ ಬರುವ ನಾದಕ್ಕೆ ಮೆರುಗು ಕೊಡುವ ಅನುಕಂಪನ ವೇಪನ ತಂತಿಗಳು ಅಂಶವಾಗಿವೆ. ಗೋಟು ವಾದ್ಯವು ಮೆಟ್ಟಿಲ್ಲದ ವಾದ್ಯ; ಹಾಡುವಂತೆಯೇ ಅದನ್ನು ನುಡಿಸಲು ಸಾಧ್ಯವಾದರೂ, ತೀವ್ರ ಏಕಾಗ್ರತೆಯಿಂದ ಮಾತ್ರ ಸ್ವರಸ್ಥಾನ ಶುದ್ಧ ಶ್ರುತಿಗಳನ್ನು ಹಿಡಿದು ನುಡಿಸಲು ಸಾಧ್ಯ. ಗೋಟು ಎಡಗೈ ಚಳಕಕ್ಕೆ ಅನುವು ಮಾಡಿ ಕೊಡುತ್ತದೆ. ಆದ್ದರಿಂದ ಶ್ರುತಿಬದ್ಧವಾಗಿ ನುಡಿಸಲು ಶ್ರಮ ವಹಿಸಬೇಕಾಗುತ್ತದೆ.

ಈ ವಾದ್ಯವನ್ನು ಮೈಸೂರು ಅರಮನೆಯಲ್ಲಿ ಕೃಷ್ಣರಾಜೇಂದ್ರ ಒಡೆಯರ ಕಾಲದಲ್ಲಿ ಆಸ್ಥಾನ ವಿದ್ವಾಂಸರಾಗಿದ್ದ ಡಾ॥ ಮುತ್ತಯ್ಯ ಭಾಗವತರು ನುಡಿಸುತ್ತಿದ್ದರು. ಇವರು ರಚನೆಕಾರರು, ಸಂಗೀತೋಪಾಸಕರು, ಹರಿಕಥಾ ವಿದ್ವಾಂಸರು ಮತ್ತು ಶಿಷ್ಯ ಸಂಪತ್ತನ್ನು ಸಂಪಾದಿಸಿದ ದೊಡ್ಡ ವಿದ್ವಾಂಸರು. ಭಾಗವತರ ಪ್ರಥಮ ಶಿಷ್ಯರು ಬೂದಲೂರು ಕೃಷ್ಣಮೂರ್ತಿ ಶಾಸ್ತ್ರಿಗಳು ಮತ್ತು ನಾರಾಯಣ ಐಯ್ಯಂಗಾರ್ ಅವರು. ನಾರಾಯಣ ಐಯ್ಯಂಗಾರ್ ಅವರು ಗೋಟುವಾದ್ಯ ನಾರಾಯಣ ಐಯ್ಯಂಗಾರರೆಂದೇ ಹೆಸರುವಾಸಿಯಾದವರು. ಅವರ ಶಿಷ್ಯರಾದ ವರಾಹಸ್ವಾಮಿಯವರು ಆಕಾಶವಾಣಿಯಲ್ಲಿ ನುಡಿಸುತ್ತಿದ್ದರು; ಅವರು ಈ ವಾದ್ಯವನ್ನು ನುಡಿಸುತ್ತ ಬೆಳೆಸುತ್ತ ಬಂದಿದ್ದಾರೆ. ನನಗೆ ತಿಳಿಯದ, ಎಲೆಮರೆಕಾಯಿಯಂತಿರುವ ಅನೇಕ ವಿದ್ವಾಂಸರುಗಳು ಈ ವಾದ್ಯವನ್ನು ಪೋಷಿಸಿಕೊಂಡು ಬಂದಿದ್ದಾರೆ.

ಪ್ರಪಂಚದ ಸಂಗೀತ ಪದ್ಧತಿಯ ಅಧ್ಯಯನದಲ್ಲಿ (ಎತ್ನೋಮ್ಯೂಸಿಕಾಲಜಿ) ಪ್ರಪಂಚದ ವಾದ್ಯಗಳನ್ನು ವಿಭಜನೆ ಮಾಡುವ ಪಟ್ಟಿಯಲ್ಲಿ ಗೋಟುವಾದ್ಯವನ್ನು ವೀಣೆಯಾಕಾರದ ಜಿತರ್ ಅಂದರೆ ನೆಲದ ಮೇಲಿಟ್ಟು ಎಡಗೈಯಲ್ಲಿ ಮರ ಅಥವಾ ಗಾಜಿನ ತುಂಡು ಮುಂತಾದುವನ್ನು ತಂತಿಗಳ ಮೇಲೆ ಸರಿಸಿ ನುಡಿಸುವ ವಾದ್ಯವೆಂದು ಪ್ರತ್ಯೇಕವಾಗಿ ಗುರುತಿಸಿದ್ದಾರೆ.

ಅಮೆರಿಕಾ ದೇಶದಲ್ಲಿ ಒಂದು ಪ್ರಾಂತ್ಯವಾದ ಹವಾಯಿ ದ್ವೀಪದಲ್ಲಿ ಸ್ಲೈಡ್ ಗಿಟಾರ್ ಎಂಬ ವಾದ್ಯವನ್ನು ಸಹ ಒಂದು ಉಕ್ಕಿನ ತುಂಡಿನ ಸಹಾಯದಿಂದ ಒಂದು ಸ್ವರಸ್ಥಾನದಿಂದ ಮತ್ತೊಂದು ಸ್ವರಸ್ಥಾನಕ್ಕೆ ಜರುಗಿಸುವ ಪದ್ಧತಿ ಇಂದಿಗೂ ಉಳಿದುಕೊಂಡು ಬಂದಿದೆ. ಈ ವಾದ್ಯವು ಹವಾಯಿ ದ್ವೀಪದಿಂದ ಅಮೆರಿಕಾಗೂ, ಅದರಲ್ಲೂ ಅದರ ದಕ್ಷಿಣ ಭಾಗದ ಪ್ರಾಂತ್ಯಗಳಲ್ಲಿ ಹರಡಿ ಹವಾಯಿಯನ್ ಸ್ಟೀಲ್ ಗಿಟಾರ್ ಎಂಬ ಹೆಸರನ್ನು ಪಡೆದು ಅಮೆರಿಕಾದ ಜನಪ್ರಿಯ ಸಂಗೀತ ವಿಭಾಗದಲ್ಲಿ ಅಗ್ರಸ್ಥಾನವನ್ನು ಗಳಿಸಿದೆ.

ವಾದ್ಯಗಳು ಹರಡುವ ಮತ್ತು ಅದರ ಪ್ರಭಾವ ಬೀರುವ ಕುರಿತ ಅಧ್ಯಯನದಲ್ಲಿ ದಿವಂಗತ ಡಾ॥ ಮೆಂಟಲ್‌ಹುಡ್ ಅವರ ಮಾರ್ಗದರ್ಶನದಲ್ಲಿ,



ಡಾ॥ ಗಾಯತ್ರಿ ರಾಜಾಪುರ



*ಗೋಟು ವಾದ್ಯ ಕಚೇರಿ ನಡೆಸುತ್ತಿರುವ ರವಿಶಂಕರ್*

ಜಾರ್ಜ್ ಕಾನಹೇಲೆ ಹವಾಯಿ ಸಂಗೀತ ಪದ್ಧತಿಯ ಚರಿತ್ರೆಗಾರರು ತಮ್ಮ ಮ್ಯೂಸಿಕ್ ಅಂಡ್ ಮ್ಯುಸಿಷಿಯನ್ಸ್ ಆಫ್ ಹವಾಯ್‌ಯೆಂಬ ಗ್ರಂಥದಲ್ಲಿ (ಸಂ: ಡಾ|| ಎಲಿಜಬತ್ ಟಟಾರ್) ತಿಳಿಸುವುದೇನೆಂದರೆ, ಹವಾಯಿಯನ್ ಸ್ಟೀಲ್ ಗಿಟಾರ್ ಎಂಬ ಜನಪ್ರಿಯ ವಾದ್ಯದ ಮೂಲ ದಕ್ಷಿಣ ಭಾರತದ ಗೋಟುವಾದ್ಯ; ಅಲ್ಲದೆ; ಒಂದು ಸ್ವರಸ್ಥಾನದಿಂದ ಮತ್ತೊಂದು ಸ್ವರಸ್ಥಾನಕ್ಕೆ ಮರದ ತುಂಡು, ಕೊಂಬು ಮುಂತಾದ ಉಪಕರಣಗಳನ್ನು ಉಪಯೋಗಿಸುತ್ತಿದ್ದುದು ಮೊದಲು ಕಂಡುಬಂದದ್ದು ಭಾರತದಲ್ಲಿ. ಇದನ್ನು ಗೋವಾ ಪ್ರದೇಶದ ಪೋರ್ಚುಗೀಸರು ಅನುಕರಣೆ ಮಾಡಿ ನಂತರ ಉಕ್ಕಿನ ತುಂಡನ್ನು ಉಪಯೋಗಿಸಿರಬೇಕು. ಪೋರ್ಚುಗೀಸರ ತಂಡವೊಂದು ಕಬ್ಬು ಬೆಳೆಯುವ ಕೆಲಸಕ್ಕಾಗಿ ಹವಾಯಿ ದ್ವೀಪಕ್ಕೆ ಬಂದು ನೆಲಸಿದಾಗ ಜನಪ್ರಿಯ ಸಂಗೀತವನ್ನು ನುಡಿಸಲು ಈ ವಾದ್ಯವನ್ನು ಅಳವಡಿಸಿಕೊಂಡಿರಬಹುದು ಎಂದು ಊಹಿಸಲಾಗಿದೆ.

ತತ್ಕಾಲದಲ್ಲಿ ಗೋಟುವಾದ್ಯವನ್ನು ಹಲವು ಹೆಸರುಗಳಿಂದ ಕರೆಯಲಾಗಿದೆ. ಪ್ರೊ|| ಸಾಂಬಮೂರ್ತಿಯವರು ಈ ವಾದ್ಯವನ್ನು ವಿಚಿತ್ರ ವೀಣೆಯೆಂದು ಕರೆದು ಜರ್ಮನಿಯಲ್ಲಿ ಜರುಗಿದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಪ್ರದರ್ಶಿಸಿದರೆಂದು ಕೇಳಿದ್ದೇನೆ. ಗೋಟುವಾದ್ಯ ನಾರಾಯಣ ಐಯ್ಯಂಗಾರರ ಮೊಮ್ಮಕ್ಕಳಾದ ರವಿಕಿರಣ್‌ರವರು ಚಿತ್ರವೀಣೆಯೆಂದು ಕರೆದು, ಈ ವಾದ್ಯದ ರೂಪವನ್ನು ಸ್ವಲ್ಪ ಬದಲಿಸಿ ಸ್ಟೈರೋಫೋಮ್‌ನಿಂದ ತಯಾರಾದ ಗೋಟುವನ್ನು ಉಪಯೋಗಿಸುತ್ತಿದ್ದು ಹೆಸರುವಾಸಿಯಾಗಿದ್ದಾರೆ. ಉತ್ತರಾದಿ ಸಂಗೀತ ಪದ್ಧತಿಯಲ್ಲಿ ಗಿಟಾರ್ ವಾದ್ಯವನ್ನು ಗೋಟುವಿನಂತಿರುವ ಉಪಕರಣದಿಂದ ನುಡಿಸುವುದು ಮತ್ತು ತಂತಿಗಳನ್ನು ತಂತಮ್ಮ ಅಗತ್ಯತೆಗಳಿಗೆ ಅನುಗುಣವಾಗಿ ರಾಗಗಳಿಗೆ ಅಳವಡಿಸಿ ಧ್ವನಿಮುದ್ರಿಕೆ ಮಾಡಿದವರು ರಾಜಸ್ಥಾನದ ಬ್ರಿಜ್ ಭೂಷಣ್ ಕಬರಾ ಅವರು. ನಂತರ ವಿಶ್ವಮೋಹನ್ ಭಟ್ ಜೋಡಿ ತಂತಿಗಳು ಮತ್ತು ಅನುಕಂಪನ ವೇಪನ ತಂತಿಗಳನ್ನು ಅಳವಡಿಸಿಕೊಂಡು ಈ ವಾದ್ಯಕ್ಕೆ ಮೋಹನ ವೀಣೆ ಎಂದು ಹೆಸರಿಸಿ ಅವರದೇ ಆದ ಶೈಲಿಯನ್ನು ಪ್ರದರ್ಶಿಸಿದ್ದಾರೆ.

ಈಗ ಕರ್ನಾಟಕದಲ್ಲಿ ಗೋಟುವಾದ್ಯವನ್ನು ನುಡಿಸುವವರು ಇಬ್ಬರೇ ಇಬ್ಬರು ವಿದುಷಿಯರು. ಒಬ್ಬರು ವಿದುಷಿ ಉಷಾ ರಾಮಮೂರ್ತಿ, ಇವರು ಆಕಾಶವಾಣಿಯ 'ಎ' ಗ್ರೇಡ್ ಕಲಾವಿದೆ. ಬೂದಲೂರು ಕೃಷ್ಣಮೂರ್ತಿ ಶಾಸ್ತ್ರಿಗಳ ಶಿಷ್ಯರಾದ ಶ್ರೀ ಪುರುಷೋತ್ತಮ್ ಅವರು ಇವರ ಗುರುಗಳು. ಇನ್ನೊಬ್ಬರು ಗಾಯತ್ರೀ ರಾಜಾಪುರ. ಹನ್ನೆರಡನೇ ಶತಮಾನದಲ್ಲಿ ವಿಜಯನಗರದ ರಘುನಾಥ ನಾಯಕರ ಕಾಲದಲ್ಲಿ ಮಹಾನಾಟಕ ವೀಣೆಯಾಗಿ ಈಗ ಇಪ್ಪತ್ತೊಂದನೇ ಶತಮಾನದಲ್ಲಿ ಅನೇಕ ಬದಲಾವಣೆಗಳನ್ನು ಅಳವಡಿಸಿಕೊಂಡು ಗೋಟುವಾದ್ಯ ಈಗಲೂ ಅಪೂರ್ವ ವಾದ್ಯವಾಗಿಯೇ ಉಳಿದಿದೆ. ಇನ್ನು ಮುಂದಿನ ಪೀಳಿಗೆಗಳು ಈ ವಾದ್ಯವನ್ನು ಉಳಿಸಿಕೊಂಡು ಬರುತ್ತಾರೆಂಬ ನಂಬಿಕೆಯಿದೆ.

**ಡಾ|| ಗಾಯತ್ರಿ ರಾಜಾಪುರ**
೯೯೫/೧೩೭೩, 'ವಾಗ್ದೇವಿ', ೮ನೇ ಮೇನ್, ಗಿರಿನಗರ ೨ನೇ ಹಂತ, ಬೆಂಗಳೂರು - ೫೬೦ ೦೮೫



## ಹ ಸಿ ವು

ಸರ್ವತ್ರ
ಧಾರಾಕಾರ ಮಳೆ
ಗಡಗಡಿಸುವ ಚಳಿ
ಕವಿದ ಕಗ್ಗತ್ತಲು
ಗುಡುಗು - ಸಿಡಿಲು;
ಬೀಸಿದ ಬಿರುಗಾಳಿಗೆ
ತತ್ತರಿಸಿ ಬಿತ್ತೊಂದು ಹಳೇಮರ !

ಕ್ಷಣಾರ್ಧದಲ್ಲೇ
ಕೊಡಲಿ - ಮಚ್ಚು ಹಿಡಿದು
ಹೊರ ಬಂದ, ಹಸಿದ ಜನರು
ತಡಮಾಡದೆ ಕಡಿದು - ಕಡಿದು
ತುಂಡರಿಸಿದರು ಮರದ ರೆಂಬೆ-ಕೊಂಬೆಗಳನ್ನು !

ಸಂತಸದ ನಗೆ ಬೀರಿ
ಕೈಗೆ ಸಿಕ್ಕಷ್ಟು
ತುಂಡರಿಸಿದ ಕಟ್ಟಿಗೆಗಳನ್ನು ಕಟ್ಟಿ
ಹೊತ್ತು ನಡೆದರು ಒಪ್ಪತ್ತಿನ ಗಂಜಿಗಾಯಿತೆಂದು !

ಮಳೆಗೆ ಅಂಜಲಿಲ್ಲ
ಚಳಿಗೆ ನಡುಗಲಿಲ್ಲ
ಗುಡುಗು - ಸಿಡಿಲಿಗೆ ಬೆಚ್ಚಲಿಲ್ಲ
'ಹಸಿವು' ಅದನ್ನೆಲ್ಲವ ಮೆಟ್ಟಿ
ಆಗಾಗ ಮಿಂಚುವ
ಬೆಳಕಿನಲ್ಲೇ ಕಾಯಕವ ಹುಡುಕಿತ್ತು !!

**ಎಚ್. ಕೆ. ಕೊಟ್ರಪ್ಪ**
ಕೊಟಗಿ ನಿಲಯ, ೧೬, ಕೆ.ಹೆಚ್.ಬಿ. ಕಾಲೋನಿ, ಹೈಸ್ಕೂಲ್ ಬಡಾವಣೆ, ಹಂಚರ - ೫೮೨೬೦೧

**ಜನರೊಡನೆ ಮಾತನಾಡುವುದು, ಅವರ ಬದುಕಿನ ರೀತಿಗಳನ್ನು, ದೂರುಗಳನ್ನು ಕೇಳುವುದು, ಅವರಿಂದ ಬಗೆಹರಿಯದ ಸಮಸ್ಯೆಗಳನ್ನು ತಿಳಿದುಕೊಳ್ಳುವುದು – ಈ ಕೆಲಸ ಇಲ್ಲಿಯ ತಾಯಿಗೆ ಇಷ್ಟ. ತುಂಬ ಅತೃಪ್ತನಾದ ಮನುಷ್ಯನನ್ನು ಕಾಣಲು ತಾಯಿಗೆ ಸದಾ ಸಂತಸ. ಆದರೆ ಆಕೆಯ ಅತೃಪ್ತಿ ಇದೆಲ್ಲವೂ ವಿಧಿಯ ಆಟವೆಂಬುದನ್ನು ಪ್ರತಿಭಟಿಸುತ್ತ ನಿರ್ದಿಷ್ಟ ಪ್ರಶ್ನೆಗಳಿಗೆ ಒಂದೇ ಸಮನೆ ಉತ್ತರವನ್ನು ಅಪೇಕ್ಷಿಸುತ್ತಿತ್ತು.**

ಇಂಗ್ಲೆಂಡಿನಲ್ಲಿ ಆರಂಭವಾದ ಕೈಗಾರಿಕಾ ಕ್ರಾಂತಿಯ ಪ್ರಭಾವ ರಷ್ಯಾದ ಮೇಲೂ ಆಯಿತು. ಝಾರ್ ಎರಡನೇ ಅಲೆಗ್ಸಾಂಡರ್ ಜೀತಪದ್ಧತಿಯನ್ನು ನಿಷೇಧಿಸಿದ ಕಾಲದಲ್ಲಿಯೇ ಕೈಗಾರಿಕಾ ಕ್ರಾಂತಿ ರಷ್ಯಾದಲ್ಲಿ ಹರಡಿದ್ದು. ಜೀತಪದ್ಧತಿಯಿಂದ ಬಿಡುಗಡೆಯಾದವರು ಕಾರ್ಖಾನೆಗಳಲ್ಲಿ ಶ್ರಮಿಕರಾಗಿ ಕಾರ್ಯ ನಿರ್ವಹಿಸಲು ನಗರಗಳಿಗೆ ಧಾವಿಸಿದರು. ಆದರ ಪರಿಣಾಮವಾಗಿ ಮಾಸ್ಕೋದಂತಹ ನಗರಗಳಲ್ಲಿ ಕೈಗಾರಿಕೆಗಳು ಜನ್ಮ ತಾಳಿದವು. ಕೆಲಸಗಾರರ ಸಮಸ್ಯೆಗಳೂ ಅಂತಹ ಸ್ಥಳಗಳಲ್ಲಿ ದಿನೇ ದಿನೇ ಹೆಚ್ಚಿದವು. ಆದರಿಂದಾಗಿ ತಮ್ಮ ಹಕ್ಕುಬಾಧ್ಯತೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಕಾರ್ಮಿಕರು ತಮ್ಮವೇ ಆದ ಸಂಘಗಳನ್ನು ಕಟ್ಟಿಕೊಂಡರು, ಆ ಮೂಲಕ ಚಳುವಳಿಗಳನ್ನು ಆರಂಭಿಸಿದರು. ರಷ್ಯಾದಲ್ಲಿ ಕಮ್ಯುನಿಸ್ಟ್ ಕ್ರಾಂತಿಗೆ ಬುನಾದಿಯನ್ನು ಹಾಕಿದ್ದು ಈ ಬಗೆಯ ಚಳುವಳಿಗಳೇ.

ಕಾರ್ಮಿಕ ಹೋರಾಟ ಮೊದಲು ಆರಂಭಗೊಂಡದ್ದೇ ರಷ್ಯಾದಲ್ಲಿ. ಹದಿನೇಳನೇ ಶತಮಾನದಲ್ಲಿ ನಡೆದ ಕೈಗಾರಿಕಾ ಕ್ರಾಂತಿ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಉಂಟುಮಾಡಿದ ಪರಿಣಾಮಗಳು ಅಂತಿಂಥವಲ್ಲ. ಈ ಕೈಗಾರಿಕಾ ಕ್ರಾಂತಿಯ ಪರಿಣಾಮವನ್ನು ಮ್ಯಾಕ್ಸಿಂ ಗಾರ್ಕಿ ತಮ್ಮ 'ತಾಯಿ' ಕಾದಂಬರಿಯಲ್ಲಿ ಅದ್ಭುತವಾಗಿ ಚಿತ್ರಿಸಿದರು. ಕೈಗಾರಿಕಾ ಪ್ರಧಾನವಾದ ರಷ್ಯಾ, ವ್ಯವಸಾಯ ಪ್ರಧಾನವಾದ ಇಂಡಿಯಾ ಈ ಎರಡೂ ಮಾತೃಪ್ರಧಾನ ಸಂಸ್ಕೃತಿಯವೇ. ಎರಡೂ ದೇಶಗಳಲ್ಲಿಯೂ ತಾಯಿಯ ಪಾತ್ರವೇ ಮುಖ್ಯ.

ಪ್ರಥಮ ರಷ್ಯಾ ಕ್ರಾಂತಿಯ ಸಮಯದಲ್ಲಿ ರಚಿತವಾದ (೧೯೦೫-೧೯೦೭) ಗಾರ್ಕಿಯ 'ತಾಯಿ' ಕಾದಂಬರಿಯಲ್ಲಿ ಬರುವ ಕೂಲಿಕಾರರದೇ ಒಂದು ಜಗತ್ತು. ಅವರ ಬದುಕು ಏಕೆ ಅಧೋಗತಿಯಲ್ಲಿದೆ ಎಂಬುದನ್ನು ಅರಿಯುವ ಪ್ರಯತ್ನವೇ ಕಾದಂಬರಿಯ ಮುಖ್ಯ ಉದ್ದೇಶ. ಕಾರ್ಮಿಕರ ಜೀವನವನ್ನು ವರ್ಣಿಸುವ ರೀತಿ, ಅವರ ಬದುಕಿನ ಸಂಕಷ್ಟಗಳನ್ನು ಹೊರಹಾಕುವ ಸಂದರ್ಭೋಚಿತವಾಗಿ ಬರುವ ವಿಶೇಷ ಮಾತುಗಾರಿಕೆ, ಗಾದೆ ಮಾತುಗಳು, ನಂಬಿಕೆ, ಆಚರಣೆ, ಸಂಪ್ರದಾಯಗಳು, ಆಹಾರ ಪದ್ಧತಿ– ಇವನ್ನೆಲ್ಲ ಗಮನಿಸಿದರೆ ರಷ್ಯಾದ ಕೈಗಾರಿಕಾ ಜಾನಪದವೇ ಕಾದಂಬರಿಯ ಸ್ವರೂಪದಲ್ಲಿ ಮೈವೆತ್ತಂತಿರುವುದನ್ನು ಗಮನಿಸಬಹುದು. ಜೀವನ ಒಂದು ಬೀಸುವ ಕಲ್ಲು ಆಗುತ್ತೆ, ಯಾರದ್ದು ನ್ಯಾಯ ಅನ್ನೋದನ್ನ ದೇವರು ನೋಡುತ್ತಾನ್ನೆ, ಕಣ್ಣುಮುಚ್ಚಿ ಜಪಿಸಿದಾಕ್ಷಣಕ್ಕೆ ಭಕ್ತನಾಗುವುದಿಲ್ಲ, ಬುದ್ಧಿ

# ಗಾರ್ಕಿ 'ತಾಯಿ' ಆಲಿಸಿದ ಕಾರ್ಮಿಕರ ಬದುಕು

**ಕಥೆಗಳ ನಿರೂಪಕರೆಲ್ಲ ಯಾವುದೋ ಅನಿವಾರ್ಯವಾದುದನ್ನೇ ಹೇಳುವವರಂತೆ ಕಾಣಿಸಿದರೂ ಏಕೆ ಶಾಂತವಾಗಿ ಇರುತ್ತಿದ್ದರೆಂಬುದು ಮಾತ್ರ ಆಕೆಗೆ ಅರ್ಥವಾಗಿರಲಿಲ್ಲ, ಅದೇನೇ ಇರಲಿ, ಜನರೊಂದಿಗೆ ಮಾತನಾಡುವುದು, ಅವರ ಕಥೆಗಳನ್ನು ಕೇಳಿಸಿಕೊಳ್ಳುವುದು, ಬಗೆಹರಿಯದ ಸಮಸ್ಯೆಗಳನ್ನು ಅರಿತುಕೊಳ್ಳುವುದು – ಈ ಕೆಲಸ ತಾಯಿಗೆ ತುಂಬ ಪ್ರಿಯವಾಗಿತ್ತು, ಇದನ್ನು ಪ್ರಸ್ತುತ ಕಾದಂಬರಿ ಅತ್ಯಂತ ಸಮರ್ಥವಾಗಿ ನಿರೂಪಿಸುತ್ತದೆ.**

**ಡಾ|| ಜಿ. ಆರ್. ತಿಪ್ಪೇಸ್ವಾಮಿ**



ಕಡಿಮೆಯಾದಷ್ಟು ನಿದ್ದೆ ಹೆಚ್ಚು, ಮೀನು ಹುಟ್ಟಿದ್ದೇ ಬಲೆಗೆ ಬೀಳೋಕೆ ಅಂತ, ಹುಳಿ ದ್ರಾಕ್ಷಾರಸದಲ್ಲಿ ನಾಯಿಕೊಡೆ ಇದ್ದಹಾಗೆ, ಗುಳ್ಳೇನರಿನ ಪ್ರಾಣಿಗಳ ನಾಯಕನನ್ನಾಗಿ ಮಾಡಿದ್ರೆ ಹಕ್ಕಿಗಳ ಬದಲು ಪುಕ್ಕಗಳೇ ಮಾತಾಡ್ತವೆ, ಶ್ರೀಮಂತರೂ ರೈತರೂ ಎಣ್ಣೆ ಸೀಗೇಕಾಯಿ ಇದ್ದ ಹಾಗೆ, ನೀರಿನಿಂದ ಹೊರಗೆ ತೆಗೆದ ಮೀನಿನ ಹಾಗೆ – ಮುಂತಾದ ಗಾದೆ ಮಾತುಗಳು ಕಾದಂಬರಿಯಲ್ಲಿ ಸನ್ನಿವೇಶವನ್ನು ಪರಿಣಾಮಕಾರಿಯಾಗಿಸಲು ಬಳಕೆಗೊಂಡಿವೆ. ಕಾರ್ಖಾನೆಯಲ್ಲಿ ಸೈರನ್ ಕೂಗುವುದು, ಮೇ ಆಚರಣೆ, ತಮ್ಮ ಹಕ್ಕುಗಳ ಈಡೇರಿಕೆಗಾಗಿ ನಡೆಸುವ ಚಳುವಳಿಗಳಲ್ಲಿ ಕಾರ್ಮಿಕರು ಸಿಳ್ಳುಹಾಕಿ, ಘೋಷಣೆಗಳನ್ನು ಕೂಗುವುದು, ಬಾವುಟ ಹಿಡಿದು ಬೀದೀಲಿ ಮೆರವಣಿಗೆ ಹೋಗುವುದು ಕಾರ್ಮಿಕರ ಬದುಕಿನ ಭಾಗವೇ ಆಗಿರುವ ಇವೆಲ್ಲವನ್ನು ಒಳಗೊಂಡಂತೆ ಗಾರ್ಕಿಯ 'ತಾಯಿ' ಕಾದಂಬರಿ ಶ್ರಮಜೀವಿಗಳ ಹೋರಾಟದ ಸಿದ್ಧತೆ ಮತ್ತು ಅದರ ಯಶಸ್ಸಿನ ಬಗೆಗೆ ವಿಶೇಷ ಕಾಳಜಿಯನ್ನು ವಹಿಸುವುದರಲ್ಲಿಯೇ ಶ್ರಮಸಂಸ್ಕೃತಿಯ ಹೋರಾಟಗಳಿಗೆ ಪ್ರೇರಣೆ ನೀಡುತ್ತದೆ.

ಈ ಕಾದಂಬರಿಯಲ್ಲಿ ಅಪರಿಚಿತ ಜನರು ಕಾರ್ಖಾನೆಯ ವಸತಿ ಪ್ರದೇಶಕ್ಕೆ ಆಗಾಗ ಬಂದು ತಾವು ಕೆಲಸ ಮಾಡಿದ ಜಾಗಗಳ ಕಥೆಗಳನ್ನು ಹೇಳಿಕೊಳ್ಳುವ ಚಿತ್ರಣವಿದೆ. ಆ ಕಥೆಗಳಿಂದ ಅವರ ಹಾಗೂ ಅವರ ಜೀವನದ ಬಗೆಗೆ ಇತರರಲ್ಲಿ ಆಸಕ್ತಿ ಹುಟ್ಟುವುದು ಸಹಜ. ಇದರಿಂದ ಜಗತ್ತಿನಲ್ಲಿ ದುಡಿಯುವವರ ಜೀವನವೆಲ್ಲ ಒಂದೇ ರೀತಿ ಎಂಬ ಭಾವನೆ ಮೂಡುತ್ತದೆ. ಕಾದಂಬರಿಯ ಕೇಂದ್ರ ಪಾತ್ರವಾದ ತಾಯಿಗೂ ಈ ಅನುಭವವಾಗುತ್ತದೆ. ಆಕೆ ಆಲಿಸಿದ ಬದುಕಿನ ಕತೆಗಳು ಹಲವಾರು. ಆಕೆಯ ಕೌಟುಂಬಿಕ ಜೀವನವೂ ಸುಖದಾಯಕವಾದುದೇನಲ್ಲ. ಗಂಡ ಮಿಖಾಯಿಲ್ ವ್ಲಾಸೋವ್. ಕಾರ್ಖಾನೆಯಲ್ಲಿ ಒಬ್ಬ ಮೆಕ್ಯಾನಿಕ್, ಬಲಶಾಲಿ, ಮೇಲಧಿಕಾರಿಗಳೊಂದಿಗೆ ಒರಟಾಗಿ ವರ್ತಿಸುವವ. ಹಾಗಾಗಿ ಹೆಚ್ಚು ಸಂಪಾದನೆ ಇರಲಿಲ್ಲ. ಪ್ರತಿ ರಜಾದಿನದಲ್ಲೂ ಯಾರನ್ನಾದರೂ ಹೊಡೆಯುತ್ತಿದ್ದ. ಹಾಗಾಗಿ ಆತ ಯಾರಿಗೂ ಬೇಕಾದವನಾಗಿರಲಿಲ್ಲ. ಯಾರಾದರೂ ಹೊಡೆಯಲು ಬಂದರೆ ಕೈಯಲ್ಲಿ ಕಲ್ಲನ್ನು ಎತ್ತಿ ಹಿಡಿಯುತ್ತಿದ್ದ. ಆತನದು ಯುದ್ಧೋನ್ಮುಖ ಚಹರೆಯಾದ್ದರಿಂದ ಎಲ್ಲರೂ ಆತನಿಗೆ ಹೆದರುತ್ತಿದ್ದರು. ರಜಾದಿನಗಳಲ್ಲಿ ಸದಾ ಹೆಂಡದಂಗಡಿಯ ಬಳಿ ಇರುತ್ತಿದ್ದ ಈತನ ಬಳಿ ಒಂದು ನಾಯಿ ಇತ್ತು. ತನ್ನ ತಟ್ಟೆಯಿಂದಲೇ ಅದಕ್ಕೂ ತಿನ್ನಿಸುತ್ತಿದ್ದ. ನಾಯಿ ಮತ್ತು ಆತನ ಸಂಬಂಧ ಚೆನ್ನಾಗಿತ್ತು. ಆದರೆ ಅವನು ತೀರಿಕೊಂಡಾಗ ಹೆಂಡತಿಯಾದವಳಿಗೇನೋ ದುಃಖವಾಯಿತು. ಮಗ (ಪಾವೆಲ್) ಮಾತ್ರ ಅಳಲೇ ಇಲ್ಲ. 'ಅವನು ಬಾಳಿದ್ದು ನಾಯಿಯಂತೆ, ಸತ್ತದ್ದೂ ನಾಯಿಯಂತೆ' ಎಂಬ ಅಭಿಪ್ರಾಯ ಹೊರಬೀಳುತ್ತದೆ. ಶವವನ್ನು ಹೂತಿಟ್ಟ ಮೇಲೆ ಜನರು ಹೊರಟು ಹೋದರು. ಆದರೆ ನಾಯಿ ಮಾತ್ರ ಮೌನವಾಗಿ ಗೋರಿಯನ್ನು ಮೂಸುತ್ತ ಆ ಹಸಿಮಣ್ಣಿನ ಮೇಲೆ ಹಾಗೆಯೇ ಕುಳಿತಿತ್ತು. ಕೆಲವು ದಿನಗಳ ನಂತರ ಆ ನಾಯಿಯನ್ನು ಯಾರೋ ಕೊಂದರಂತೆ. ಇದು ಕಾದಂಬರಿಯ ಪ್ರಮುಖ ಪಾತ್ರವಾದ ಪಾವೆಲ್‌ನ ತಂದೆಯ ಕತೆ.

ಪಾವೆಲ್ ತಾಯಿಯ ಹಣೆಯ ಮೇಲಿನ ಹೊಡೆತವನ್ನು ನೋಡಿ ಒಬ್ಬ ತನ್ನ ಸಾಕುತಾಯಿಗಾದ ವ್ಯಥೆಯನ್ನು ನೆನಪಿಸಿಕೊಳ್ಳುವ ದೃಶ್ಯ ಹೀಗಿದೆ : ''ನನ್ನ ಸಾಕುತಾಯಿಗೂ ನಿನ್ನಂಥದೇ ಗಾಯದ ಕಲೆ ಇತ್ತು. ಅದಕ್ಕಾಗಿಯೇ ಕೇಳಿದೆ. ಆ ಏಟು ಕೊಟ್ಟವನು ಆಕೆಯ ಸಹವಾಸಿ. ಒಬ್ಬ ಚಮ್ಮಾರ ಆತ. ಆ ಮನುಷ್ಯ ತನ್ನ ಮರದ ಮೊಟ್ಟೆಯ ಅಚ್ಚಿನಿಂದ ಹೊಡೆದಿದ್ದ. ಆಕೆ ಅಗಸರವಳು. ಆತ ಮೋಚಿ. ನನ್ನನ್ನು ದತ್ತು ತೆಗೆದುಕೊಂಡ ನಂತರ ಅವನು ಎಲ್ಲೋ ಆಕೆಗೆ ಗಂಟುಬಿದ್ದ. ಮಹಾಕುಡುಕ! ಪಾಪ! ಆಕೆ ಕೊನೆತನಕ ಗೋಳು ಅನುಭವಿಸಬೇಕಾಯಿತು. ಆಕೆಗೆ ಎಂಥ ಏಟು ಕೊಡುತ್ತಿದ್ದ! ಹುಂ, ಹೆದರಿಕೆಯಿಂದಲೇ ನನ್ನ ಚರ್ಮ ಬಿರುಕುಬಿಡುತ್ತಿತ್ತು.''

ಕಾದಂಬರಿಯಲ್ಲಿ ಸಮಾನತೆಗಾಗಿ ಹೋರಾಡುವ ಸಂಗಾತಿಗಳಲ್ಲಿ ನತಾಶ ಒಬ್ಬಳು. ಈಕೆ ತನ್ನ ತಾಯಿಯ ಬದುಕನ್ನು ಕಂಡದ್ದು ಹೀಗೆ : ''ನಮ್ಮಪ್ಪ ಒರಟು ಮನುಷ್ಯ, ನನ್ನಣ್ಣನೂ ಅಷ್ಟೆ, ಸಾಲದ್ದಕ್ಕೆ ಕುಡುಕ ಬೇರೆ. ನನ್ನ ಅಕ್ಕನಿಗೂ ಸುಖವಿಲ್ಲ. ತನಗಿಂತ ಬಹಳ ವಯಸ್ಸಾದವನೊಡನೆ ಅವಳ ಮದುವೆಯಾಯ್ತು. ಆತ ತುಂಬಾ ಧನಿಕ. ಆದರೆ ನೀಚ ಮತ್ತು ಲೋಭಿ. ತಾಯಿಯನ್ನು ನೆನೆಸಿಕೊಂಡರೆ ನನಗೆ ಕನಿಕರವಾಗುತ್ತೆ. ನಿಮ್ಮ ಹಾಗೆಯೇ ಅವಳೂ ಸರಳ ಹೆಂಗಸು. ಸುಂಡಲಿಯ ಹಾಗೆ. ಅಷ್ಟೇ ವೇಗದ ಓಟ. ಅಷ್ಟೇ ಹೆದರಿಕೆ – ಯಾವುದನ್ನು ಕಂಡರೂ'' (ಪುಟ ೪೭). ನತಾಶಳ ತಂದೆ ಶ್ರೀಮಂತ. ಕಬ್ಬಿಣದ ವ್ಯಾಪಾರಿ. ಅನೇಕ ಕಟ್ಟಡಗಳ ಮಾಲೀಕ. ವ್ಯವಸ್ಥೆಯನ್ನು ಸರಿಪಡಿಸುವ ಹಾದಿಯನ್ನು ಮಗಳು ಆಯ್ದುಕೊಂಡದ್ದರಿಂದ ಆತ ಆಕೆಯನ್ನು (ನತಾಶ) ಹೊರಹಾಕಿದ. ಶ್ರೀಮಂತ ಕುಟುಂಬದಲ್ಲಿ ಬೆಳೆದ ಆಕೆ ಅದನ್ನು ತ್ಯಜಿಸಿ ರಾತ್ರಿಯ ಹೊತ್ತು ಒಬ್ಬಳೇ ಐದು ಮೈಲಿ ನಡೆಯುತ್ತಾಳೆ. ಅವಳ ಈ ಸುದ್ದಿಯನ್ನು ಕೇಳಿದ ತಾಯಿಯ ಕಂಠ ಉಮ್ಮಳಿಸಿಬರುತ್ತದೆ.




ಮರೀಯಾ ಕೊರ್ಸುನೋವ ಎಂಬಾಕೆ ವ್ಲಾಸೋವ್‌ರ ನೆರೆಯವಳು. ಕಮ್ಮಾರನೊಬ್ಬನ ವಿಧವೆ. ಕಾರ್ಖಾನೆಯ ಬಾಗಿಲ ಬಳಿ ತಿಂಡಿ ಮಾರಿ ಜೀವನ ನಡೆಸುತ್ತಿದ್ದವಳು. ಅದೇ ರೀತಿ ವೆಸೊವ್‌ಶ್ಚಿಕೋವ್‌ಗೆ ಕಾರ್ಖಾನೆಯಲ್ಲಿ ಪುನಃ ಕೆಲಸ ದೊರಕದಿರುವಾಗ ಅವನು ಮರದ ವ್ಯಾಪಾರಿಯ ಹತ್ತಿರ ಸೇರುತ್ತಾನೆ. ಮರ, ಹಲಗೆ, ಸೌದೆ ಸಾಗಿಸುವ ಕಾಯಕ ಆತನದು. ಈ ಕೆಲಸ ಮಾಡುವುದನ್ನೆಲ್ಲ ಪ್ರತಿನಿತ್ಯ ತಾಯಿ ಗಮನಿಸುತ್ತಿದ್ದಳು. ಆಕೆಗೆ ಮೊದಲು ಕಾಣಿಸುತ್ತಿದ್ದದ್ದು ಎಲುಬು ಎದ್ದು ನಿಂತಿದ್ದ ಜೋಡಿ ಕರಿಕುದುರೆಗಳು. ನಿರಂತರ ಶ್ರಮದ ಫಲವಾಗಿ ಅವುಗಳ ಕಾಲುಗಳು ಕಂಪಿಸುತ್ತಿದ್ದವಂತೆ (ಪುಟ ೧೨೬-೧೨೭). ಶ್ರಮಜೀವಿಗಳ ಜೊತೆಯಲ್ಲಿ ಶ್ರಮಕ್ಕೆ ಕಾರಣವಾದ ಜೀವರಾಶಿಗಳ ಬಗೆಗೆ ಅನುಕಂಪವನ್ನು ವ್ಯಕ್ತಪಡಿಸುತ್ತಿದ್ದ ತಾಯಿಯ ಹೃದಯ ವೈಶಾಲ್ಯಕ್ಕೆ ಇನ್ನು ಹಲವು ಉದಾಹರಣೆಗಳು ಗಾರ್ಕಿಯ ಈ ಕಾದಂಬರಿಯಲ್ಲಿ ಲಭ್ಯವಾಗುತ್ತವೆ.

ಯೆಗಿಲ್‌ದೇಯವೂ ಎಂಬುದೊಂದು ಗ್ರಾಮ. ಸುಮಾರು ಎರಡು ಸಾವಿರ ನಿವಾಸಿಗಳು ವರ್ಷಕ್ಕೆರಡು ಜಾತ್ರೆಗಳನ್ನು ಅಲ್ಲಿ ನಡೆಸುತ್ತಾರೆ. ಅಲ್ಲಿರುವವರಿಗೆ ಸ್ವಂತ ಜಮೀನಿಲ್ಲ. ಗೇಣಿಗೆ ಮಾಡಿಕೊಂಡಿರುವವರೇ ಹೆಚ್ಚು. ಇದ್ದಿಲು ಸುಡುವುದು, ಟಾರು ಮಾಡುವುದು – ಇತ್ಯಾದಿ ಕೆಲಸಗಳಲ್ಲಿ ತೊಡಗಿದವನೊಬ್ಬ ತನ್ನ ಯಜಮಾನನ ಬಗ್ಗೆ ''ಅಲ್ಲಿ ರಕ್ತ ಹೀರೋ ಒಂದು ಜಂತುವಿನ ಕೈ ಕೆಳಗೆ ನಾನು ಕೆಲಸ ಮಾಡುತ್ತಿದ್ದೆ'' ಎನ್ನುತ್ತಾನೆ. (ಪುಟ ೧೪೭) ಇದನ್ನು ಕೇಳಿದ ಮೇಲೆ ತನ್ನ ಯೌವನದಲ್ಲಿ ತಾನು ನೋಡಿದ್ದ ಸಂಗತಿಯೊಂದು ತಾಯಿಯ ನೆನಪಿಗೆ ಬರುತ್ತದೆ : ''ಆಕೆಯ ಹಳ್ಳಿಯ ಜಮೀನ್ದಾರ ಜವುಸಾಯ್‌ಲವ್‌ನ ಹಳೆಯ ಉದ್ಯಾನದಲ್ಲೊಂದು ಸಣ್ಣ ಕೆರೆ ಇತ್ತು. ಅದರಲ್ಲಿ ಯಾವಾಗಲೂ ನೈದಿಲೆಗಳು ಹೇರಳವಾಗಿರುತ್ತಿದ್ದವು. ಚಳಿಗಾಲಕ್ಕೆ ಮುಂಚೆಯೊಂದು ಸಂಜೆ ತಾಯಿ ಆ ಕೆರೆಯ ಏರಿಯ ಮೇಲೆ ನಡೆದು ಬಂದಿದ್ದಳು. ಕೆರೆಯ ನಡುವೆ ಒಂದು ದೋಣಿ ಇದ್ದುದು ಆಕೆಯ ಕಣ್ಣಿಗೆ ಬಿತ್ತು. ಕೆರೆ ಕಪ್ಪಗಿತ್ತು, ಶಾಂತವಾಗಿತ್ತು, ದೋಣಿ ಚಲಿಸುತ್ತಿರಲಿಲ್ಲ. ಕರಿ ನೀರಿಗೆ ಅದನ್ನ ಅಂಟಿಸಿದ್ದಂತೆ ತೋರುತ್ತಿತ್ತು. ಅದರ ಸುತ್ತಲೂ ಒಣಗಿದ್ದ ಹಳದಿ ಎಲೆಗಳಿದ್ದವು. ಒಂಟಿ ದೋಣಿ, ಮನುಷ್ಯನಿಲ್ಲ, ಚುಕ್ಕಾಣಿ ಇಲ್ಲ, ಸ್ತಬ್ಧ ನೀರಿನ ಮೇಲೆ ನಿರ್ಜೀವ ಎಲೆಗಳ ನಡುವೆ ಅದು ನಿಂತಲ್ಲೇ ನಿಂತಿತ್ತು. ಆ ದೃಶ್ಯ ಯಾವುದೋ ಅರಿಯದ ಯಾತನೆಯ ಆಳವಾದ ದುಃಖವನ್ನು ಸೂಚಿಸುತ್ತಿತ್ತು. ಯಾರು ಯಾತಕ್ಕಾಗಿ ಈ ದೋಣಿಯನ್ನು ನೀರೊಳಕ್ಕೆ ತಳ್ಳಿರಬಹುದು, ಎಂದು ಆಶ್ಚರ್ಯಪಡುತ್ತ ತಾಯಿ ಬಹಳ ಹೊತ್ತು ದಂಡೆಯ ಮೇಲೆ ನಿಂತಳು... ಆ ತೋಟದ ಮೇಸ್ತ್ರಿಯೊಬ್ಬನ ಹೆಂಡತಿ. ಕರಿಯ ಗುಂಗುರು ಕೂದಲಿದ್ದ ತೀವ್ರ ನಡಿಗೆಯ ಪುಟ್ಟ ಹೆಂಗಸೊಬ್ಬಳು ಆ ಕೆರೆಯಲ್ಲಿ ಮುಳುಗಿ ಸತ್ತಳೆಂಬ ವಿಷಯ ಆ ಸಂಜೆ ತಾಯಿಗೆ ತಿಳಿಯಿತು'' (ಪುಟ ೧೪೩).

ನಿಕೊಲಾಯ್ ಎಂಬುವವ ತನ್ನ ಅನುಭವದ ಮಾತನ್ನು ಬಿಚ್ಚಿಡುವ ರೀತಿ ಹೀಗಿದೆ: ''ಮೊದಲು ಕೈಗೊಂಡ ವೃತ್ತಿ ಉಪಾಧ್ಯಾಯನದು. ನನ್ನ ತಂದೆ ವ್ಯಾತ್ಕದಲ್ಲಿ ಒಂದು ಕಾರ್ಖಾನೆಯ ಮ್ಯಾನೇಜರು. ನಾನು ಶಿಕ್ಷಕ ವೃತ್ತಿ ಕೈಕೊಂಡೆ. ಹಳ್ಳಿಯಲ್ಲಿ ನಾನು ರೈತರಿಗೆ ಓದೋಕ್ಕೆ ಪುಸ್ತಕ ಕೊಟ್ಟೆ. ಅದಕ್ಕಾಗಿ ನನ್ನನ್ನು ಜೈಲಿಗೆ ಕಳಿಸಿದ್ರು. ಜೈಲುವಾಸ ಮುಗಿದ್ಮೇಲೆ ಒಂದು ಪುಸ್ತಕದಂಗಡಿಯಲ್ಲಿ ಕೆಲಸಕ್ಕೆ ನಿಂತೆ. ಆದರೆ ನನ್ನ ಅಜಾಗರೂಕತೆಯಿಂದ ಮತ್ತೊಮ್ಮೆ ಜೈಲು ಸುಖ ದೊರೀತು. ಕೊನೇಲಿ ಅರ್ಕೆಂಜಲಿಕಗೆ ಗಡಿಪಾರು ಮಾಡಿದ್ರು. ಅಲ್ಲಿಯ ಗವರ್ನರರ ಕೋಪಕ್ಕೆ ತುತ್ತಾದೆ. ಹಡಗನ್ನು ಹತ್ತಿಸಿ ಶ್ವೇತಸಮುದ್ರ ದಡದಲ್ಲಿ ಒಂದು ಸಣ್ಣ ಹಳ್ಳಿಗೆ ನನ್ನನ್ನ ಸಾಗಹಾಕಿದ್ರು. ಅಲ್ಲಿ ಐದುವರ್ಷ ಇದ್ದೆ''

ರೈತರಿಗೂ ಕೂಲಿಕಾರರಿಗೂ ಇರುವ ವ್ಯತ್ಯಾಸವನ್ನು ರೀಬಿನ್ ಗುರುತಿಸುವ ಬಗೆ ಹೀಗಿದೆ : ''ರೈತ ಸದ್ದಿಲ್ಲದೆ ನಿಲ್ತಾನೆ. ಹೊಲ ತನ್ನದಲ್ಲವಾದರೂ ಪಾದದಿಂದ ಮೆಟ್ಟಿ ನೋಡ್ತಾನೆ. ಆದರೆ ಕೆಲಸಗಾರ ಹಕ್ಕಿಯ ಹಾಗೆ. ಹುಟ್ಟು ಭೂಮಿಯಿಲ್ಲ, ಮನೆಯಿಲ್ಲ, ಇಂದು ಇಲ್ಲಿ, ನಾಳೆ ಇನ್ನೊಂದು ಕಡೆ. ಅವನನ್ನು ಒಂದೇ ಕಡೆ ಕಟ್ಟಿಹಾಕೋದು ಒಂದು ಹೆಂಗಸಿಂದ ಕೂಡ ಸಾಧ್ಯವಿಲ್ಲ. ಏನಾದರೂ ಹೆಚ್ಚು ಕಡಿಮೆಯಾದರೆ ಅವಳನ್ನ ಬಿಟ್ಟು ಬೇರೇನಾದರೂ ಒಳ್ಳೇದನ್ನೇ ಹುಡುಕಿಕೊಂಡು ಹೊರಟುಬಿಡ್ತಾನೆ. ರೈತನಾದರೆ ಇದ್ದಲ್ಲೇ ಇದ್ದುಕೊಂಡು ಬೇರೆಡೆಗೆ ಹೋಗಲು ಬಯಸದೆ ಪರಿಸ್ಥಿತಿ ಸುಧಾರಿಸಲು ಯತ್ನಿಸುತ್ತಾನೆ'' (ಪುಟ ೧೫೨). ಅಂತಹ ರೈತರಲ್ಲಿ ವಸ್ಯುಕೋವ್ ಒಬ್ಬ. ಸಾಲ ತೀರಿಸೋಕಾಗಲಿಲ್ಲ, ಆತನ ಹೊಲವನ್ನ ಹರಾಜುಹಾಕುತ್ತಾರೆ. ಆಗ ಹಳ್ಳಿಯ ಮುಖ್ಯಸ್ಥನ ಮುಖಕ್ಕೆ ಏಟುಕೊಡುತ್ತಾ 'ತಗೋ ಸಾಲ' ಎಂದನಂತೆ. ಇನ್ನೊಂದು ಪ್ರಸಂಗವನ್ನು ರೇಬಿನ್ ತಾಯಿಯ ಗಮನಕ್ಕೆ ತರುತ್ತಾನೆ.: ''ನಾನು ನೆಫ್ಯೊದೊವ್ ಕಾರ್ಖಾನೇಲಿ ಕೆಲಸ ಮಾಡ್ದೆ. ನಮ್ಮ ಮಾಲೀಕ ಯಾವಳೋ ಸಂಗೀತಗಾರಳಿಗೆ ಚಿನ್ನದ ಒಂದು ಪಾತ್ರೆಯನ್ನು ಕೊಟ್ಟ; ಮುಖ ತೊಳೆಯೋಕೆ ಅಂತ. ಮಂಚದ ಕೆಳಗೆ ಇಟ್ಟುಕೊಳ್ಳೋಕೆ ಒಂದು ಚಿನ್ನದ ಗಡಿಗೇನೂ ಕೊಟ್ಟ. ನನ್ನ ಶಕ್ತಿ ಜೀವಮಾನವೆಲ್ಲ ಆ ಗಡಿಗೆಯ ತಯಾರಿಕೆಗಾಗಿ ವ್ಯಯವಾಯ್ತು! ನಾನು ಪ್ರಾಣವನ್ನರ್ಪಿಸಿದ್ದು ಅದಕ್ಕೋಸ್ಕರ! ನನ್ನ ಜೀವನದ ರಕ್ತ ಬಸಿದು ತಾನು ಇಟ್ಟುಕೊಂಡವಳನ್ನು ಸಂತೋಷ ಪಡಿಸುವುದಕ್ಕೋಸ್ಕರ ಒಬ್ಬ ಮನುಷ್ಯ ನನ್ನನ್ನು ದುಡಿಸಿ ದುಡಿಸಿ ಕೊಂದ! ನನ್ನ ಜೀವನದ ರಕ್ತದ ಬೆಲೆಗೆ ಆತ ಅವಳಿಗೊಂದು ಚಿನ್ನದ ಗಡಿಗೆ ಕೊಂಡುಕೊಟ್ಟ'' (ಪುಟ ೨೧೨). ಒಬ್ಬ ಅಮಲ್ದಾರನ ಕುದುರೆ ಹಳ್ಳಿಯನ್ನು ಹಾದುಹೋಗಿದ್ದಾಗಲೆಲ್ಲ ರೈತರು ಆ ಕುದುರೆಗೆ ಬಾಗಿ ವಂದಿಸೋ ಹಾಗೆ ಮಾಡುತ್ತಿದ್ದನಂತೆ. ಹಾಗೆ ಮಾಡದಿದ್ದರೆ ದಸ್ತಗಿರಿಯಾಗುತ್ತಿತ್ತು. ಜರ್ಮನಿಯಲ್ಲಿ ರೈತರ ಬಂಡಾಯ, ಐರ್ಲೆಂಡಿನಲ್ಲಿ ಜನರ ನರಕ ಜೀವನ, ಸ್ವಾತಂತ್ರ್ಯಕ್ಕೋಸ್ಕರ ಫ್ರೆಂಚ್ ಜನತೆ ನಡೆಸುವ ಆಗಾಗಿನ ಹೋರಾಟಗಳು – ಹೀಗೆ ದುರಾಸೆಯ ಶ್ರೀಮಂತರ ಜಗತ್ತನ್ನ ನಡುಗಿಸಿದಂತಹ ಘಟನಾ ವಿವರಗಳನ್ನು ಸೋಫಿಯಾ ನೀಡುವುದನ್ನು (ಪುಟ ೨೧೪) ಗಮನಿಸಿದರೆ ಬದುಕುವ ಹಕ್ಕಿಗಾಗಿ ಜಗತ್ತಿನ ಜನರೆಲ್ಲಾ ಹೋರಾಟ ನಡೆಸುತ್ತಾರೆಂಬುದರ ವಿವರಗಳು ಲಭ್ಯವಾಗುತ್ತವೆ.

ಮೆರವಣಿಗೆ ಏರ್ಪಾಟಿನ ಸಂದರ್ಭದಲ್ಲಿ ಸಂಗಾತಿಗಳೆಲ್ಲ ಒಂದೆಡೆ ಸೇರಿದಾಗ ಆಂದ್ರೇಯ್ ಚಹಾದಲ್ಲಿ ಪ್ರತಿಬಿಂಬಿತವಾಗುತ್ತಿದ್ದ ಸೂರ್ಯರಶ್ಮಿಯೊಂದು ಗೋಡೆಯ ಮೇಲೂ ಮಾಡಿನಲ್ಲೂ ಕುಣಿಯುತ್ತಿದ್ದುದನ್ನು ನೋಡುತ್ತ ಕುಳಿತ್ತಿದ್ದ. ಆಗ ಆತನಿಂದ ಬಂದ ಮಾತುಗಳಿವು : ''ನಾನು ಹತ್ತು ವರ್ಷದ ಹುಡುಗನಾಗಿದ್ದಾಗ ಒಮ್ಮೆ ಗ್ಲಾಸಿನಲ್ಲಿ ಸೂರ್ಯನನ್ನು ಹಿಡೀಬೇಕೂಂತ ಆಸೆಯಾಯ್ತು, ಒಂದು ಗಾಜಿನ ಲೋಟವನ್ನೆತ್ತಿ ಸೂರ್ಯನಿಗೆ ಅಡ್ಡಹಿಡಿದೆ. ಒಡೀತು ಗ್ಲಾಸು! ಕೈಗೆ ಗಾಯವಾಯ್ತು. ಮನೆಯಲ್ಲಿ ಏಟೂ ಬಿತ್ತು. ಏಟು ಬಿದ್ಮೇಲೆ ನಾನು ಹಿತ್ತಲಿಗೆ ಹೋದೆ. ಅಲ್ಲಿ ಒಂದು ಕಡೆ ಕೆಸರಿನಲ್ಲಿ ಸೂರ್ಯ ಇದ್ದುದನ್ನು ಕಂಡೆ. ಎಲ್ಲ ಶಕ್ತಿ ಪ್ರಯೋಗಿಸಿ ಅವನನ್ನ ತುಳಿದೆ. ಕೆಸರಿನ ಸ್ನಾನ ಆಗಿಯೇ ಆಯ್ತು ನನಗೆ. ಅದಕ್ಕಾಗಿ ಮತ್ತೊಂದು ಸಾರಿ ಏಟು ಬಿತ್ತು. ಸೂರ್ಯನ ಕಡೆ ತಿರುಗಿ ನಾಲಿಗೆ ಚಾಚಿ 'ನೋವಾಗಿಲ್ಲ ನಂಗೆ, ಕೆಂಪು ತಲೆಯ ಸೈತಾನ! ನೋವಾಗಿಲ್ಲ!' ಎಂದು ಬೊಬ್ಬಿಟ್ಟೆ. ಅದೊಂದೇ ನನ್ಕೈಲಿ ಸಾಧ್ಯವಾದ ಪ್ರತೀಕಾರ. ಹಾಗೆ ಹೇಳಿದ್ದರಿಂದ ನನಗೆ ಸ್ವಲ್ಪ ಸಮಾಧಾನವಾಯ್ತು.'' ಸೂರ್ಯನನ್ನು ಕೆಂಪು ತಲೆಯವನೂಂತ ಯಾಕೆ ಕರೆಯುತ್ತಿದ್ದನೆಂದರೆ ಅವನ ಬೀದಿಯಾಚೆಗೆ ದೊಡ್ಡ ಕೆಂಪು ಮುಖದ, ಕೆಂಪು ಗಡ್ಡದ ಕಮ್ಮಾರನೊಬ್ಬನಿದ್ದನಂತೆ. ಆತ ರಸಿಕನೂ ಹೃದಯವಂತನೂ ಆಗಿರುವುದರ ಜೊತೆಗೆ ಸೂರ್ಯನನ್ನು ಹೋಲುತ್ತಿದ್ದನಂತೆ. ಸತ್ಯದ ಅನ್ವೇಷಣೆಯಲ್ಲಿರುವ, ಸಾಮಾಜಿಕ ನ್ಯಾಯದ ಹಾದಿಯಲ್ಲಿರುವ, ಕ್ರಾಂತಿಕಾರಿ ಮನಸ್ಸುಗಳ ಧ್ವನಿಪೂರ್ಣವಾದ ಮಾತುಗಳಿವು.

ಜನರೊಡನೆ ಮಾತನಾಡುವುದು, ಅವರ ಬದುಕಿನ ರೀತಿಗಳನ್ನು, ದೂರುಗಳನ್ನು ಕೇಳುವುದು, ಅವರಿಂದ ಬಗೆಹರಿಯದ ಸಮಸ್ಯೆಗಳನ್ನು ತಿಳಿದುಕೊಳ್ಳುವುದು



– ಈ ಕೆಲಸ ಇಲ್ಲಿಯ ತಾಯಿಗೆ ಇಷ್ಟ. ತುಂಬಾ ಅತೃಪ್ತನಾದ ಮನುಷ್ಯನನ್ನು ಕಾಣಲು ತಾಯಿಗೆ ಸದಾ ಸಂತಸ. ಆದರೆ ಆಕೆಯ ಅತೃಪ್ತಿ ಇದೆಲ್ಲವೂ ವಿಧಿಯ ಆಟವೆಂಬುದನ್ನು ಪ್ರತಿಭಟಿಸುತ್ತ ನಿರ್ದಿಷ್ಟ ಪ್ರಶ್ನೆಗಳಿಗೆ ಒಂದೇ ಸಮನೆ ಉತ್ತರವನ್ನು ಅಪೇಕ್ಷಿಸುತ್ತಿತ್ತು. ಕಥೆಗಳ ನಿರೂಪಕರೆಲ್ಲ ಯಾವುದೋ ಅನಿವಾರ್ಯವಾದುದನ್ನೇ ಹೇಳುವವರಂತೆ ಕಾಣಿಸಿದರೂ ಏಕೆ ಶಾಂತವಾಗಿ ಇರುತ್ತಿದ್ದರೆಂಬುದು ಮಾತ್ರ ಆಕೆಗೆ ಅರ್ಥವಾಗಿರಲಿಲ್ಲ. ಅದೇನೇ ಇರಲಿ, ಜನರೊಂದಿಗೆ ಮಾತನಾಡುವುದು, ಅವರ ಕಥೆಗಳನ್ನ ಕೇಳಿಸಿಕೊಳ್ಳುವುದು, ಬಗೆಹರಿಯದ ಸಮಸ್ಯೆಗಳನ್ನು ಅರಿತುಕೊಳ್ಳುವುದು – ಈ ಕೆಲಸ ತಾಯಿಗೆ ತುಂಬ ಪ್ರಿಯವಾಗಿತ್ತು. ಇದನ್ನು ಪ್ರಸ್ತುತ ಕಾದಂಬರಿ ಅತ್ಯಂತ ಸಮರ್ಥವಾಗಿ ನಿರೂಪಿಸುತ್ತದೆ.

ಡಾ॥ ಜಿ. ಆರ್. ತಿಪ್ಪೇಸ್ವಾಮಿ
ರೀಡರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು



ನಭಾವಲೋಕನ

# ಜ್ಯೇಷ್ಠಾದ ಕಣ್ಣುಮುಚ್ಚಾಲೆ !

ಇದುವರೆಗೂ ಶುಭ್ರವಾಗಿ ಕಾಣುತ್ತಿದ್ದ ಆಕಾಶದ ಬಣ್ಣ ನೀಲಿ. ಇನ್ನು ಮೇಲೆ ಅದು ಬಹುಶಃ ಬೂದುಬಣ್ಣಕ್ಕೆ ಕಾಣುವುದು. ತೆಳ್ಳನೆಯ ದೂಳು ಮತ್ತು ಮೋಡಗಳ ಮುಸುಕು ಈ ಭ್ರಮೆ ಉಂಟು ಮಾಡುತ್ತದೆ. ಆದ್ದರಿಂದ ನಕ್ಷತ್ರಗುಚ್ಛಗಳು, ನೀಹಾರಿಕೆಗಳು ಮತ್ತು ಆಕಾಶಗಂಗೆಯ ನೋಟ ಇನ್ನು ದುರ್ಲಭವೇ ಎನ್ನಬಹುದು. ಆದರೆ ಅದರಿಂದ ನಿರಾಶರಾಗಬೇಕಿಲ್ಲ. ಒಂದು ಮಳೆಯ ನಂತರ ಪುನಃ ಸ್ವಚ್ಛ ನೀಲಾಕಾಶ ಸ್ವಲ್ಪ ಹೊತ್ತಾದರೂ ನೋಡಲು ಸಿಗುತ್ತದೆ. ಅಂತಹ ಅವಕಾಶಗಳನ್ನು ಬಳಸಿಕೊಳ್ಳಿ.

ಮೇ ೧೦ರಂದು ನಡೆಯುವ ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆ ಇಂತಹ ಒಂದು ಸ್ವಾರಸ್ಯಕರ ಘಟನೆ. ಇದರ ಆರಂಭ ಮತ್ತು ಮುಕ್ತಾಯ ಎರಡೂ ನಮಗೆ ಅನುಕೂಲಕರವಾಗಿವೆ. ೧೦ರ ನಡುರಾತ್ರಿಯ ನಂತರ ಅಂದರೆ ೧೧ ರ ಬೆಳಗಿನ ಜಾವ ಅದು ಚಂದ್ರನ ಹಿಂದೆ ೦೨:೨೧ಕ್ಕೆ ಮಾಯವಾಗುವುದನ್ನು ನೋಡಬಹುದು. ಸುಮಾರು ಎರಡು ಗಂಟೆಗಳ ನಂತರ ೦೪:೦೨ಕ್ಕೆ ಚಂದ್ರನ ಹಿಂದಿನಿಂದ ಹೊರ ಬರುವುದು. ಈ ಘಟನೆ ನೋಡಲು ಬಹಳ ಕುತೂಹಲಕಾರಿಯಾಗಿರುತ್ತದೆ; ಕ್ಯಾಮೆರಗಳಿಗೆ ಸವಾಲು ಎನ್ನಬಹುದು. ಹುಣ್ಣಿಮೆ ಚಂದ್ರನ ಬೆಳಕು ದೊಡ್ಡ ಅಡಚಣೆ.




ಬೂದು ಬಣ್ಣದ ಆಕಾಶದಲ್ಲಿ ಕಾಣುವ ಕೆಲವೇ ಪ್ರಖರ ನಕ್ಷತ್ರಗಳಲ್ಲಿ ಮುಖ್ಯವಾದದ್ದು ಲುಬ್ಧಕ (ಸಿರಿಯಸ್) ಮತ್ತು ದಕ್ಷಿಣದ ಅಗಸ್ತ್ಯ (ಕೆನೋಪಸ್). ಇವೆರಡನ್ನು ಸೇರಿಸುವ ಕಾಲ್ಪನಿಕ ರೇಖೆಗೆ ಲಂಬವಾಗಿ ಊಹಿಸಿಕೊಳ್ಳಬಹುದಾದ ರೇಖೆಯ ಮೇಲಿದೆ ಕೆಂಪುಬಣ್ಣದ ನಕ್ಷತ್ರ ಆರಿದ್ರಾ (ಬಿಟಲ್‌ಗೀಸ್). ಆರಿದ್ರಾದ ಸಹಾಯದಿಂದ ಮಹಾವ್ಯಾಧ (ಒರೈಯನ್) ಮತ್ತು ಲುಬ್ಧಕದ ಸಹಾಯದಿಂದ ಮಹಾಶ್ವಾನ (ಕ್ಯಾನಿಸ್ ಮೇಜರ್) ಇವುಗಳನ್ನು ಗುರುತಿಸಬಹುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ ಸ್ಫುಟವಾಗಿ ಕಾಣುವುದು. ನೆತ್ತಿಯ ಮೇಲೆ ಕಾಣುವ ಶನಿ, ಸಿಂಹದ ಬಾಲದಲ್ಲಿದೆ. ಅಷ್ಟೇನೂ ಪ್ರಕಾಶಮಾನವಾಗಿಲ್ಲದ ಕಾರಣ ಚಂದ್ರನ ಸಹಾಯ ಪಡೆದು ಖಚಿತಪಡಿಸಿಕೊಳ್ಳಬಹುದು. ನಾಲ್ಕರ ಸಂಜೆ ಅರ್ಧಾಧಿಕ ಚಂದ್ರನ ಪಕ್ಕ ಕಾಣುವ ಚಿಕ್ಕೆಯೇ ಶನಿ. ಹೀಗೆ ಗುರುತಿಸಿ ಆದ ಮೇಲೆ, ಚಂದ್ರನಿಲ್ಲದಾಗಲೂ ಗುರುತಿಸಬಹುದು. ಪುನಃ ೩೧ರ ಸಂಜೆ ಶನಿ ಮತ್ತು ಚಂದ್ರ ಜೊತೆಗೂಡುತ್ತವೆ. ತಿಂಗಳ ಪೂರ್ವಾರ್ಧದಲ್ಲಿ ಸಂಜೆ ಬುಧ ಪಶ್ಚಿಮದಂಚಿನಲ್ಲಿ ಕಾಣುವುದು. ಅದರ ಅತಿ ಸನಿಹದಲ್ಲಿ ಕೃತಿಕಾ ನಕ್ಷತ್ರ ಗುಚ್ಛ ಇರುವುದಾದರೂ ಸಂಜೆಗೆಂಪಿನಲ್ಲಿ ಗುರುತಿಸುವುದು ಬಹಳ ಕಷ್ಟ.

ಬೆಳಗಿನ ಜಾವ ಮಂಗಳ, ಶುಕ್ರ ಮತ್ತು ಗುರು ಗ್ರಹಗಳು ಕಾಣುತ್ತವೆ. ಗುರು ಸಾಕಷ್ಟು ಎತ್ತರದಲ್ಲಿ ಕಾಣುವುದರಿಂದ ಮತ್ತು ಶುಕ್ರ ಅತಿ ಪ್ರಕಾಶಮಾನವಾಗಿರುವುದರಿಂದ ಗುರುತಿಸಬಹುದು. ೧೮ರಂದು ಚಂದ್ರನ ಪಕ್ಕ ಕಾಣುವುದು ಗುರು. ಮಂಗಳವನ್ನು ಗುರುತಿಸುವುದು ಕಷ್ಟ. ೨೨ರಂದು ಚಂದ್ರ ಮಂಗಳ ಮತ್ತು ಶುಕ್ರದ ಸಮೀಪ ಕಾಣುವುದನ್ನು ಉಪಯೋಗಿಸಿ ಗುರುತಿಸಬಹುದು.

ಈ ತಿಂಗಳಲ್ಲಿ ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ಹ್ಯಾಲೀ ಧೂಮಕೇತುವಿನ ಬಾಲದ ತುಣುಕುಗಳು ಅದರ ಕಕ್ಷೆಯ ಉದ್ದಕ್ಕೂ ಹರಡಿಕೊಂಡಿವೆ. ಪ್ರತಿ ವರ್ಷ ಮೇ ೪ರಂದು ಭೂಮಿ ಕಕ್ಷೆಯ ಸಮೀಪ ಹಾದು ಹೋದಾಗ ಈ ತುಣುಕುಗಳು ದೂಳಿನಂತೆ ಉದುರುವುವು. ಭೂಮಿಯ ವಾತಾವರಣದಲ್ಲಿ ಆಕ್ಸಿಜನ್ ದೊರೆತ ಕೂಡಲೇ ಹೊತ್ತಿ ಉರಿಯುವುವು. ಹೀಗೆ ದೂಳಿನಂತಹ ಸಣ್ಣ ಕಣ ಉರಿಯುತ್ತಾ ಬೀಳುವುದು ನಮಗೆ ನಕ್ಷತ್ರವೇ ಬಿದ್ದ ಹಾಗೆ ಕಾಣುತ್ತದೆ. ಇವೇ ಉಲ್ಕೆಗಳು. ಗಂಟೆಗೆ ೩೦-೪೦ ಉಲ್ಕೆಗಳು ಬೀಳುವ ಕಾರಣ ಇದಕ್ಕೆ ವೃಷ್ಟಿ ಎಂಬ ಹೆಸರಿದೆ. ಈ ಎಲ್ಲಾ ಉಲ್ಕೆಗಳು ಕುಂಭ ಅಥವಾ ಅಕ್ವೇರಿಯಸ್ ಎಂಬ ಪುಂಜದಿಂದ ಹೊರಟಂತೆ ಕಾಣುತ್ತವೆ. ಆದ್ದರಿಂದ ಅಕ್ವಾರಿಡ್ಸ್ ಎಂಬ ಹೆಸರಿದೆ. ಈ ಪುಂಜ ಕಾಣುವುದು ಬೆಳಗಿನ ಜಾವದಲ್ಲಿ - ಗುರುತಿಸುವುದು ಕಷ್ಟ; ಆದರೆ ಗುರುಗ್ರಹದ ಸ್ಥಾನವೇ ಎನ್ನಬಹುದು. ಪ್ರತಿವರ್ಷದ ಏಪ್ರಿಲ್ ೨೨ರಂದು ವೃಷ್ಟಿಯ ಚಟುವಟಿಕೆ ಆರಂಭವಾಗಿ ಮೇ ೪ರಂದು ಗರಿಷ್ಠವಾಗುವುದು. ಮೇ ೧೦ರ ವರೆಗೂ ಮುಂದುವರೆಯುವುದು. ಮೇ ತಿಂಗಳ ಮೊದಲ ವಾರದಲ್ಲಿ ಬೆಳಗಿನ ಜಾವ ಚಂದ್ರನ ಬೆಳಕು ಹೆಚ್ಚಾಗಿ ಇರುವುದಿಲ್ಲ; ಆದ್ದರಿಂದ ಆಕಾಶ ಶುಭ್ರವಾಗಿದ್ದರೆ ಉಲ್ಕೆಗಳನ್ನು ಕಾಣಬಹುದು.



ಮೇ ೪ರ ಸಂಜೆ ಶನಿ ಮತ್ತು ಚಂದ್ರ



ಮೇ ೧೦ರ ನಡುರಾತ್ರಿ ಜ್ಯೇಷ್ಠಾ ಮತ್ತು ಚಂದ್ರ - ಆಚ್ಛಾದನೆಯ ಆರಂಭಕ್ಕೆ ಮುನ್ನ

**ಖಗೋಳ ದಿನಚರಿ**

ಮೇ ೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೪ ಶನಿ - ಚಂದ್ರ ಜೋಡಿ *
೫ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೯ ಹುಣ್ಣಿಮೆ ೦೯:೩೧ಕ್ಕೆ
೧೦ ಚಂದ್ರ - ಜ್ಯೇಷ್ಠಾ ಜೋಡಿ (ಬೆಳಗಿನ ಜಾವ ಆಚ್ಛಾದನೆಯ ಆರಂಭ ೦೨:೨೧ಕ್ಕೆ; ಮುಕ್ತಾಯ ೦೪:೦೨ಕ್ಕೆ) *
೧೭ ಚಾಂದ್ರಮಾಸದ ಕೊನೆಯ ಪಾದ
೧೮ ಚಂದ್ರ - ಗುರು ಜೋಡಿ *
೨೧ ಚಂದ್ರ - ಶುಕ್ರ - ಮಂಗಳ ಪುಟ್ಟ ಗುಂಪು *
೨೪ ಅಮಾವಾಸ್ಯೆ ೧೭:೪೧ಕ್ಕೆ
ಚಂದ್ರ - ಬುಧ ನಡುವೆ ಕನಿಷ್ಠ ಕೋನ
೩೧ ಶನಿ - ಚಂದ್ರ ಜೋಡಿ *

(* ಛಾಯಾಗ್ರಹಣಕ್ಕೆ ಅತ್ಯುತ್ತಮ ಅವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧




# ಪಾಕಿಸ್ತಾನ: ಹೆಚ್ಚುತ್ತಿರುವ ತಾಲಿಬಾನ್ ಉಪಟಳ

ಸೀಯಾರ್ಕೆ

**ಪಾ**ಕಿಸ್ತಾನದ ಅಧ್ಯಕ್ಷ ಅಸಿಫ್ ಅಲಿ ಜರ್ದಾರಿ ತಾಲಿಬಾನ್‌ಗಳ ಒತ್ತಾಯಕ್ಕೆ ಮತ್ತೊಮ್ಮೆ ಮಣಿದಿದ್ದಾರೆ. ದೇಶದ ಈಶಾನ್ಯ ಭಾಗದಲ್ಲಿರುವ ಸ್ವಾತ್ ಕಣಿವೆಯಲ್ಲಿ ಷರಿಯತ್ ಕಾನೂನನ್ನು ಜಾರಿಗೆ ತರಲು ಒಪ್ಪಿದ್ದಾರೆ. ಇದಕ್ಕೆ ಮುನ್ನ ಅವರು ತಾಲಿಬಾನ್‌ಗಳ ವಿರುದ್ಧ ಸೈನಿಕ ಕಾರ್ಯಾಚರಣೆ ನಿಲ್ಲಿಸಿ, ಅವರ ಚಟುವಟಿಕೆಗಳಿಗೆ ಮುಕ್ತ ಅವಕಾಶ ಕಲ್ಪಿಸಿಕೊಟ್ಟು ಒಪ್ಪಂದಕ್ಕೆ ಸಹಿ ಹಾಕಿದ್ದರು. ಈ ಎರಡೂ ಘಟನೆಗಳು ಪಾಕಿಸ್ತಾನದಲ್ಲಿ ಹೆಚ್ಚುತ್ತಿರುವ ತಾಲಿಬಾನ್‌ನ ಪ್ರಾಬಲ್ಯಕ್ಕೆ ಉದಾಹರಣೆ. ಸ್ವಾತ್ ಕಣಿವೆಯಲ್ಲಷ್ಟೇ ಅಲ್ಲದೆ ತಾಲಿಬಾನ್ ಉಗ್ರಗಾಮಿಗಳು ಪಾಕಿಸ್ತಾನದ ಇತರ ಕಡೆಗಳಲ್ಲಿ ತಮ್ಮ ಪ್ರಭಾವವನ್ನು ಬೀರುತ್ತಿದ್ದಾರೆ. ಮಧ್ಯಯುಗದ ಕ್ರೌರ್ಯವನ್ನು ಪ್ರತಿನಿಧಿಸುವ ಈ ತಾಲಿಬಾನ್ ಉಗ್ರರು ಇಸ್ಲಾಮಿಕ್ ಷರಿಯತ್ ಕಾಯಿದೆ ಜಾರಿಗೆ ತರುವ ಹೆಸರಿನಲ್ಲಿ ದೌರ್ಜನ್ಯ ಎಸಗುತ್ತಿದ್ದಾರೆ. ಇವರ ದೌರ್ಜನ್ಯಕ್ಕೆ ಬಲಿಯಾಗುತ್ತಿರುವವರು ಮೊದಲು ಮಹಿಳೆಯರು. ಇತ್ತೀಚೆಗೆ ಯುವತಿಯೋರ್ವಳ ಮೇಲೆ ಅನೈತಿಕ ಸಂಬಂಧದ ಆಪಾದನೆ ಹೊರಿಸಿ ಛಡಿ ಏಟು ಶಿಕ್ಷೆಯನ್ನು ಬಹಿರಂಗವಾಗಿ ನೀಡಿದ ವಿಡಿಯೋ ದೃಶ್ಯಗಳನ್ನು ನಾವು ನೋಡಿದ್ದೇವೆ. ಇಡೀ ಪ್ರಪಂಚದ ಜನ ಈ ಭೀಕರ ದೃಶ್ಯದಿಂದ ಗಾಬರಿಗೊಂಡಿದ್ದಾರೆ. ಆದರೆ ಪಾಕಿಸ್ತಾನ ಸರಕಾರ ಅಂಥವರ ಮೇಲೆ ಕ್ರಮ ಕೈಗೊಳ್ಳುವ ಬದಲು ಅವರೊಂದಿಗೆ ಶಾಮೀಲಾಗುತ್ತಿದೆ.

ಇತ್ತೀಚೆಗೆ ಪಾಕಿಸ್ತಾನ ತಾಲಿಬಾನ್ ಕಮಾಂಡರ್ ಮುಲ್ಲಾ ನಜೀರ್ ಅಹ್ಮದ್ ಇಸ್ಲಾಮಾಬಾದ್ ತಾಲಿಬಾನ್‌ಗಳ ವಶವಾಗುವ ದಿನ ದೂರವಿಲ್ಲ ಎಂದು ಸಂದರ್ಶನವೊಂದರಲ್ಲಿ ಹೇಳಿಕೊಂಡಿದ್ದಾರೆ. ಪಾಕಿಸ್ತಾನದಲ್ಲಿರುವ ಬೇರೆ ಬೇರೆ ಉಗ್ರಗಾಮಿ ತಂಡಗಳನ್ನು ಒಂದುಗೂಡಿಸುವ ಕಾರ್ಯ ನಡೆಯುತ್ತಿದೆ ಎಂದೂ ಆತ ತಿಳಿಸಿದ್ದಾನೆ. ಸುಮಾರು ೪೦೦-೫೦೦ ಮಂದಿ ತಾಲಿಬಾನ್‌ಗಳು ಇಸ್ಲಾಮಾಬಾದಿಗೆ ನೂರು ಕಿಲೋಮೀಟರು ದೂರದಲ್ಲಿರುವ ಕೆಲವು ಗ್ರಾಮಗಳನ್ನು ಆಕ್ರಮಿಸಿಕೊಂಡಿದ್ದಾರೆ. ಕೆಲವು ಮಾಧ್ಯಮದ ವರದಿಗಳ ಪ್ರಕಾರ ಅವರು ನಿಧಾನವಾಗಿ ಇಸ್ಲಾಮಾಬಾದಿನತ್ತ ಮುಂದುವರಿಯುತ್ತಿದ್ದಾರೆ. ಪಾಕಿಸ್ತಾನದಲ್ಲಿ ಉಗ್ರಗಾಮಿಗಳ ಅಟ್ಟಹಾಸವನ್ನು, ಆಗಾಗ್ಗೆ ಸಂಭವಿಸುತ್ತಿರುವ ಆತ್ಮಾಹುತಿದಾಳಿಯನ್ನು, ಈ ಹಿನ್ನೆಲೆಯಲ್ಲಿ ಪರಿಗಣಿಸಬೇಕು. ಲಾಹೋರಿನಲ್ಲಿ ಪೊಲೀಸ್ ತರಬೇತಿ ಕೇಂದ್ರದ ಮೇಲೆ ಉಗ್ರಗಾಮಿಗಳು ನಡೆಸಿದ ದಾಳಿ, ಶ್ರೀಲಂಕಾ ಕ್ರಿಕೆಟಿಗರ ಮೇಲೆ ಜರುಗಿದ ದಾಳಿ ಹಾಗೂ ಇತರ ಘಟನೆಗಳು ಒಂದಕ್ಕೊಂದು ಸಂಬಂಧ ಹೊಂದಿವೆ. ಅದೂ ಕೂಡ ಈ ದಾಳಿಗಳು ಅಮೆರಿಕಾದ ಅಧ್ಯಕ್ಷ ಬರಾಕ್ ಒಬಾಮಾ ಆಫ್ಘಾನಿಸ್ತಾನ-ಪಾಕಿಸ್ತಾನಕ್ಕೆ ಸಂಬಂಧಿಸಿದಂತೆ ಹೊಸ ನೀತಿ ಪ್ರಕಟಿಸಿದ ಕೆಲವೇ ದಿನಗಳಲ್ಲಿ ನಡೆದಿವೆ. ಚುನಾವಣೆಯ ಸಮಯದಲ್ಲಿ ಹಾಗೂ ಈಗ ಅಧಿಕಾರ ವಹಿಸಿಕೊಂಡಮೇಲೆ ಅಮೆರಿಕಾದ ಅಧ್ಯಕ್ಷರು ಆಫ್ಘಾನಿಸ್ತಾನದಲ್ಲಿ ಯುದ್ಧವನ್ನು ವಿಸ್ತರಿಸುವ ಯೋಜನೆ ಹೊಂದಿದ್ದಾರೆ. ತಾಲಿಬಾನ್ ಉಗ್ರಗಾಮಿಗಳು ಮತ್ತು ಅಲಖೈದಾ ತೀವ್ರಗಾಮಿಗಳನ್ನು ಸದೆಬಡಿಯಲು ೧೭,೦೦೦ ಅಮೆರಿಕನ್ ಸೈನ್ಯವನ್ನು ರವಾನಿಸುವ ಯೋಜನೆಯನ್ನು ಪ್ರಕಟಿಸಿದ್ದಾರೆ. ಅದೇ ಸಮಯದಲ್ಲಿ ಪಾಕಿಸ್ತಾನಕ್ಕೆ ಆರ್ಥಿಕ ನೆರವಿನ ಪ್ಯಾಕೇಜನ್ನು ಪ್ರಕಟಿಸಿದ್ದಾರೆ. ಆಫ್ಘಾನಿಸ್ತಾನದಲ್ಲಿ ತಾಲಿಬಾನ್‌ಗಳ ಕೈಮೇಲಾಗಿರುವುದೇ ಅಮೆರಿಕಾದ ಕಳವಳಕ್ಕೆ ಮುಖ್ಯಕಾರಣ. ಹೆಚ್ಚು ಕಡಿಮೆ ಮುಕ್ಕಾಲು ಭಾಗ ದೇಶದಲ್ಲಿ ತಾಲಿಬಾನ್‌ಗಳ ಪ್ರಭಾವ ಹೆಚ್ಚಾಗಿದೆ. ಪಾಕಿಸ್ತಾನದ ಈಶಾನ್ಯ ಗಡಿಯಲ್ಲಿ ತಾಲಿಬಾನ್‌ಗಳದೇ ಕಾರುಬಾರು. ಮುಂದೆ ಆಫ್ಘಾನಿಸ್ತಾನ ಮತ್ತು ಪಾಕಿಸ್ತಾನಗಳೆರಡರಲ್ಲೂ ತಾಲಿಬಾನ್ ಆಡಳಿತ ಸ್ಥಾಪಿಸುವುದೇ ಉಗ್ರವಾದಿಗಳ ಗುರಿ. ಇದನ್ನು ಅವರು ಬಹಿರಂಗವಾಗಿಯೇ ಹೇಳುತ್ತಿದ್ದಾರೆ. ಕಳೆದ ಎಂಟು ವರ್ಷಗಳಿಂದ ಅಮೆರಿಕಾ ಮತ್ತು ನ್ಯಾಟೊ ಸೇನೆಗಳು ಆಫ್ಘಾನಿಸ್ತಾನದಲ್ಲಿ ಬೀಡುಬಿಟ್ಟು ಕಾರ್ಯಾಚರಣೆ ನಡೆಸುತ್ತಿದ್ದರೂ ಅದು ಫಲಕಾರಿಯಾಗಿಲ್ಲ. ಆಫ್ಘಾನಿಸ್ತಾನ ಮತ್ತು ಪಾಕಿಸ್ತಾನಗಳಲ್ಲಿ ಜನರಲ್ಲಿ ಅಮೆರಿಕಾದ ವಿರೋಧಿ ಭಾವನೆ ಈಚಿನ ದಿನಗಳಲ್ಲಿ ಹೆಚ್ಚಾಗಿದೆ. ಆಕ್ರಮಣಕಾರರ ವಿರುದ್ಧವಾಗಿರುವ ಜನತೆಯ ಆಕ್ರೋಶದ ಲಾಭವನ್ನು ಉಗ್ರಗಾಮಿಗಳು ಸುಲಭವಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ಎರಡೂ ದೇಶಗಳಲ್ಲಿ ಸರಕಾರದ ದೌರ್ಬಲ್ಯ ಉಗ್ರಗಾಮಿಗಳಿಗೆ ಅನುಕೂಲಕರವಾಗಿದೆ. ಪಾಕಿಸ್ತಾನಿ ಸೇನೆಯ ಒಂದು ವಿಭಾಗ ತಾಲಿಬಾನ್‌ಗಳ ಪರ ವಾಗಿರುವುದು ವ್ಯಕ್ತಗೊಂಡಿದೆ. ಕುಖ್ಯಾತ ಗೂಢಚರ್ಯೆ ಸಂಸ್ಥೆ ಪಾಕಿಸ್ತಾನದ ಐಎಸ್‌ಐ ಸಂಪೂರ್ಣವಾಗಿ ಉಗ್ರಗಾಮಿಗಳಿಗೆ ಪೋಷಣೆ ನೀಡುತ್ತಿದೆ.

ಆಫ್ಘಾನಿಸ್ತಾನದ ಮುಲ್ಲಾ ಮಹಮ್ಮದ್ ಒಮರ್ ನೇತೃತ್ವದಲ್ಲಿ ತಾಲಿಬಾನ್‌ಗಳು ೧೯೯೪ರಿಂದ ಕ್ರಿಯಾಶೀಲ ರಾಗಿದ್ದಾರೆ. ಈ ತಾಲಿಬಾನ್‌ಗಳು ಹುಟ್ಟಿಕೊಂಡದ್ದು ೧೯೮೦ರಲ್ಲಿ ಆಫ್ಘಾನಿಸ್ತಾನದಲ್ಲಿ ಸೋವಿಯತ್ ಸೇನೆ ವಿರುದ್ಧವಾಗಿ ಹೋರಾಟ ನಡೆಸಲು. ಸ್ವಾತಂತ್ರ್ಯ ಹೋರಾಟಗಾರರು ಎಂದು ಕರೆದುಕೊಂಡ ಮುಜಾಹಿದ್ದೀನ್‌ಗಳ ಒಂದು ತಂಡವೇ ಈ ತಾಲಿಬಾನ್‌ಗಳು. ಪುಷ್ತು ಭಾಷೆಯ ಈ ಶಬ್ದದ ಅರ್ಥ ವಿದ್ಯಾರ್ಥಿಗಳು ಎಂದು. ಅಂದರೆ ಧಾರ್ಮಿಕ ಬೋಧನೆ ನೀಡುವ ಮದ್ರಸಾಗಳಲ್ಲಿನ ವಿದ್ಯಾರ್ಥಿಗಳು. ಇವರೇ ಈ ಉಗ್ರಗಾಮಿಗಳ ತರಬೇತಿಗೆ ಆಕರ. ಇವರಿಗೆ ಅರಬ್



ರಾಷ್ಟ್ರಗಳ ಹಣದ ಬೆಂಬಲ ಒಂದು ಕಡೆಯಾದರೆ, ನಿಜವಾಗಿ ಅವರನ್ನು ಬೆಳೆಸಿದ್ದು ಅಮೆರಿಕಾದ ಗೂಢಚರ್ಯೆ ಸಂಸ್ಥೆ ಸಿಐಎ. ಇವರ ಕೃಪೆಯಿಂದ ಶೀತ ಯುದ್ಧ ಕಾಲದಲ್ಲಿ ಬಲಿತುಗೊಂಡ ಉಗ್ರಗಾಮಿಗಳು ಈಗ ಅಮೆರಿಕಾದ ಮೇಲೆ ತಿರುಗಿಬಿದ್ದಿದ್ದಾರೆ. ಸುಮಾರು ಒಂದು ದಶಕದ ಕಾಲ ಸೆಣಸಿ ಸೋವಿಯತ್ ಸೇನೆ ಸ್ವದೇಶಕ್ಕೆ ಮರಳಿದ ನಂತರ ಆಫ್ಘಾನಿಸ್ತಾನದಲ್ಲಿ ಅರಾಜಕತೆ, ಮುಜಾಹಿದ್ದೀನ್‌ಗಳ ವಿವಿಧ ತಂಡಗಳ ಆಡಳಿತದಲ್ಲಿ ಪ್ರಬಲವಾಗಿ ಹೊಮ್ಮಿದ ತಾಲಿಬಾನ್‌ಗಳು ೧೯೯೬ರಿಂದ ೨೦೦೧ರವರೆಗೆ ಆಫ್ಘಾನಿಸ್ತಾನದಲ್ಲಿ ಆಡಳಿತ ನಡೆಸಿದರು. ಈ ಅವಧಿ ಅತ್ಯಂತ ದೌರ್ಜನ್ಯದ ದಿನಗಳಾಗಿದ್ದವು. ಆಫ್ಘಾನಿಸ್ತಾನದಲ್ಲಿ, ೨೦೦೧ರ ಸೆಪ್ಟೆಂಬರ್ ೧೧ರ ಘಟನೆಯ ನಂತರ ಭಯೋತ್ಪಾದನೆ ವಿರುದ್ಧದ ಸಮರಕ್ಕೆ ಮೊದಲು ಬಲಿಯಾದದ್ದು ಆಫ್ಘಾನಿಸ್ತಾನ. ಅಮೆರಿಕಾ ದಾಳಿ ನಡೆಸಿ ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಂಡು ತಾಲಿಬಾನ್ ಸರಕಾರವನ್ನು ಪದಚ್ಯುತಗೊಳಿಸಿತು. ಆಗ ಛಿದ್ರಗೊಂಡು ಬೆಟ್ಟ ಗುಡ್ಡಗಳಲ್ಲಿ ಮುಖ್ಯವಾಗಿ ಪಾಕಿಸ್ತಾನದ ಗಡಿ ಪ್ರದೇಶದಲ್ಲಿ ಅಡಗಿಕೊಂಡಿದ್ದ ತಾಲಿಬಾನ್‌ಗಳು ಈಗ ಸಂಘಟಿತರಾಗಿ ಹೆಡೆ ಎತ್ತಿದ್ದಾರೆ. ಮೊದಲಿನಿಂದಲೂ ಪಾಕಿಸ್ತಾನದ ಐಎಸ್ಐ ಜೊತೆ ಸಂಬಂಧ ಹೊಂದಿದ್ದ ತಾಲಿಬಾನ್‌ಗಳು ಈಗ ಸಂಬಂಧವನ್ನು ದೃಢಪಡಿಸಿಕೊಂಡಿದ್ದಾರೆ. ಮಾದಕ ದ್ರವ್ಯಗಳ ವ್ಯವಹಾರದಲ್ಲಿ ತೊಡಗಿರುವ ತಾಲಿಬಾನ್‌ಗಳಿಂದ ಸಾಕಷ್ಟು ಭ್ರಷ್ಟಗೊಂಡಿರುವ ಐಎಸ್ಐ ಈಗ ಈ ಪುಂಡರ ಬೆಂಬಲಕ್ಕೆ ನಿಂತಿದೆ. ಹಾಗಾಗಿ ಪಾಕಿಸ್ತಾನದ ದುರ್ಬಲ ಸರಕಾರ ಒಂದು ಕಡೆ ತಾಲಿಬಾನ್ ಮತ್ತು ಉಗ್ರಗಾಮಿಗಳ ಒತ್ತಡ, ಇನ್ನೊಂದೆಡೆ ಈ ಭಯೋತ್ಪಾದಕರ ವಿರುದ್ಧ ಕಾರ್ಯಾಚರಣೆಗೆ ಹೆಚ್ಚುತ್ತಿರುವ ಅಂತರರಾಷ್ಟ್ರೀಯ ಒತ್ತಡ, ಇದರಿಂದಾಗಿ ಇಕ್ಕಟ್ಟಿನ ಸ್ಥಿತಿಯಲ್ಲಿದೆ. ಮುಂದಿನ ದಿನಗಳಲ್ಲಿ ಈ ಒತ್ತಡಗಳಿಂದಾಗಿ ಪರಿಸ್ಥಿತಿ ಇನ್ನಷ್ಟು ಹದಗೆಡಲಿದೆ.

ಪಾಕಿಸ್ತಾನದಲ್ಲಿ ಹೆಚ್ಚುತ್ತಿರುವ ತಾಲಿಬಾನ್ ಪ್ರಾಬಲ್ಯ, ಉಗ್ರಗಾಮಿಗಳ ವಿರುದ್ಧ ಕಾರ್ಯ ಜರುಗಿಸಲು ಪಾಕಿಸ್ತಾನ ಸರಕಾರದ ಹಿಂದೇಟು ಭಾರತಕ್ಕೆ ಆತಂಕಕಾರಿಯಾಗಿದೆ. ನ್ಯೂಕ್ಲಿಯರ್ ಶಕ್ತರಾಷ್ಟ್ರವಾಗಿರುವ ಪಾಕಿಸ್ತಾನ ಉಗ್ರಗಾಮಿಗಳ ಪರವಾದರೆ ಇಡೀ ಜಗತ್ತಿಗೇ ಅಪಾಯಕಾರಿ. ಮುಂಬಯಿಯಲ್ಲಿ ಉಗ್ರಗಾಮಿಗಳ ದಾಳಿಯ ನಂತರ ಭಾರತ ಸರಕಾರ ಎಷ್ಟೇ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದರೂ ಪಾಕಿಸ್ತಾನ ಸರಕಾರ ಕ್ರಮ ಕೈಗೊಳ್ಳದೆ ಸಮಯ ಕಳೆಯುತ್ತಿದೆ. ಇದಕ್ಕೆ ಮುಖ್ಯ ಕಾರಣ ಉಗ್ರರ ಒತ್ತಡ. ಪಾಕಿಸ್ತಾನದ ಬೆಳವಣಿಗೆಗಳ ಬಗ್ಗೆ ಭಾರತ ಸರಕಾರ ಕಟ್ಟೆಚ್ಚರ ವಹಿಸಬೇಕಾಗಿದೆ. ಅಂತರರಾಷ್ಟ್ರೀಯ ಸಮುದಾಯ ಪಾಕಿಸ್ತಾನ ಸರಕಾರದ ಮೇಲೆ ಒತ್ತಡ ತಂದು ಉಗ್ರರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುವಂತೆ ಮಾಡಬೇಕಾಗಿದೆ. ಅಮೆರಿಕಾವನ್ನೇ ನಂಬಿಕೊಂಡು ಭಾರತ ಸರಕಾರ ಕೈಕಟ್ಟಿ ಕೂತರೆ ಆಪತ್ತು ಕಟ್ಟಿಟ್ಟ ಬುತ್ತಿ. ಪಾಕಿಸ್ತಾನದಲ್ಲಿ ಉಗ್ರರ ಮೇಲುಗೈ ಎಂದಿದ್ದರೂ ಭಾರತಕ್ಕೆ ಹೆಚ್ಚು ಅಪಾಯಕಾರಿ.

# ಇಸ್ರೇಲಿ ಪಾತಕಿಗಳೊಂದಿಗೆ ವ್ಯವಹಾರ ನಮಗೇಕೆ ?

**ಭಾ**ರತ ಸ್ವಾತಂತ್ರ್ಯ ಪಡೆದ ಮೊದಲ ದಿನಗಳಿಂದಲೂ ಪಶ್ಚಿಮ ಏಶಿಯಾದ ಅರಬ್ ರಾಷ್ಟ್ರಗಳೊಂದಿಗೆ ಒಳ್ಳೆಯ ಮೈತ್ರಿ ಸಂಬಂಧ ಬೆಳೆಸಿಕೊಂಡು ಬಂದಿದೆ. ಆದರೆ ಈಚೆಗೆ ಇಸ್ರೇಲಿನೊಂದಿಗೆ ಭಾರತ ಸಂಬಂಧಗಳನ್ನು ಹೆಚ್ಚಿಸುತ್ತಿರುವುದರಿಂದ ಅರಬ್ ದೇಶಗಳೊಂದಿಗೆ ಮೈತ್ರಿ ಶಿಥಿಲಗೊಳ್ಳುವ ಆತಂಕವಿದೆ. ಎರಡನೇ ಮಹಾಯುದ್ಧದ ನಂತರ ಇಸ್ರೇಲ್ ಅಸ್ತಿತ್ವಕ್ಕೆ ಬಂದಾಗಿನಿಂದ ಭಾರತ ಸರಕಾರ ಅದಕ್ಕೆ ಮಾನ್ಯತೆ ನೀಡದೆ, ರಾಯಭಾರಿ ಸಂಬಂಧಗಳನ್ನು ಸ್ಥಾಪಿಸದೆ ಸ್ಪಷ್ಟವಾದ ಧೋರಣೆ ಅನುಸರಿಸುತ್ತ ಬಂದಿತು. ಪ್ಯಾಲೆಸ್ಟೈನ್ ರಾಜ್ಯ ಸ್ಥಾಪನೆಗೆ ಪೂರ್ಣ ಬೆಂಬಲ ನೀಡುತ್ತಬಂದ ಭಾರತ, ಸ್ವತಂತ್ರ ಪ್ಯಾಲಸ್ಟೈನ್ ಸ್ಥಾಪನೆಯಾಗುವವರೆಗೆ ಇಸ್ರೇಲಿನೊಂದಿಗೆ ಯಾವುದೇ ವ್ಯವಹಾರ ಸಂಬಂಧಗಳನ್ನೂ ಸ್ಥಾಪಿಸದಿರುವ ನೀತಿ ಅನುಸರಿಸಿಕೊಂಡು ಬಂದಿತ್ತು, ಅರಬ್ ದೇಶಗಳೊಂದಿಗೆ ದೃಢವಾದ ಮೈತ್ರಿ ಸಂಬಂಧಗಳನ್ನೂ ಬೆಳೆಸಿಕೊಂಡು. ಆದರೆ ಜಾಗತೀಕರಣ, ಉದಾರೀಕರಣದ ಒತ್ತಡಗಳಿಗೆ ಮಣಿದು ಭಾರತ ಸರಕಾರ ಇಸ್ರೇಲಿನೊಂದಿಗೆ ರಾಯಭಾರಿ ಸಂಬಂಧ ಸ್ಥಾಪಿಸಿತು. ಇದು ಆದದ್ದು ಎನ್‌ಡಿಎ ಸರಕಾರ ಅಧಿಕಾರಕ್ಕೆ ಬಂದ ಮೇಲೆ. ಭಾರತದಲ್ಲಿ ಭಯೋತ್ಪಾದನೆಯನ್ನು ಎದುರಿಸಲು ಅಂದಿನ ಗೃಹಸಚಿವ ಅಡ್ವಾನಿ ಇಸ್ರೇಲಿ ಮೊಸ್ಸಾದ್‌ಗಳ ಸಹಕಾರ ಅಪೇಕ್ಷಿಸಿದರು. ಇದರ ಹಿಂದಿನ ಮತೀಯ ರಾಜಕಾರಣವನ್ನು ವಿವರಿಸಿ ಹೇಳಬೇಕಾಗಿಲ್ಲ. ಆಗಿನಿಂದ ನಿಧಾನವಾಗಿ ಇಸ್ರೇಲಿನೊಂದಿಗೆ ಸಂಬಂಧಗಳು ಹೆಚ್ಚು ಹೆಚ್ಚು ಬೆಳೆಯುತ್ತಿವೆ.

ಎನ್‌ಡಿಎ ಸರಕಾರವೇನೋ ತನ್ನ ರಾಜಕೀಯ ಸಿದ್ಧಾಂತಕ್ಕೆ ಅನುಗುಣವಾಗಿ, ಅಮೆರಿಕಾದ ಒತ್ತಡಕ್ಕೆ ಮಣಿದು ಇಸ್ರೇಲಿನೊಂದಿಗೆ ಸಂಬಂಧ ಬೆಳೆಸಿತು. ಆದರೆ ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಸರಕಾರ ಅದನ್ನೇ ಮುಂದುವರಿಸುತ್ತಿರುವುದು ಏಕೆ ? ಅಮೆರಿಕಾ ಅಣ್ಣನನ್ನು ತೃಪ್ತಿಪಡಿಸುವುದಕ್ಕಾಗಿಯೇ ? ಇದು ಮುಖ್ಯಪ್ರಶ್ನೆ. ರಾಯಭಾರಿ ಸಂಬಂಧವೇನೋ ಸ್ಥಾಪನೆಯಾಯಿತು. ಆದರೆ ಆ ದೇಶದೊಂದಿಗೆ ವ್ಯವಹಾರಗಳನ್ನು ಗಟ್ಟಿಗೊಳಿಸಬೇಕೆಂದೇನಿಲ್ಲವಲ್ಲ. ಈಚಿನ ವರ್ಷಗಳಲ್ಲಿ ಇಸ್ರೇಲ್ ಪ್ಯಾಲಸ್ಟೈನ್ ಸರಕಾರದ ಮೇಲೆ, ಜನತೆಯ ಮೇಲೆ ನಡೆಸುತ್ತ ಬಂದಿರುವ ದೌರ್ಜನ್ಯಗಳು ಎಲ್ಲರಿಗೂ ತಿಳಿದಿದೆ, ಯುಪಿಎ ಸರಕಾರಕ್ಕೂ ತಿಳಿದಿದೆ. ಹಾಗಿದ್ದಾಗ್ಯೂ, ಯುಪಿಎ ಸರಕಾರ ಇಸ್ರೇಲಿನೊಂದಿಗೆ ಸ್ನೇಹ ಸಂಬಂಧಗಳನ್ನು, ಮುಖ್ಯವಾಗಿ ಶಸ್ತ್ರಾಸ್ತ್ರಗಳ ಖರೀದಿಯನ್ನು ಹೆಚ್ಚಿಸುತ್ತಿರುವುದು ಆತಂಕಕಾರಿ. ಇದು ನಿಜವಾಗಿಯೂ ಪ್ಯಾಲೆಸ್ತೇನಿಯನ್ನರ ಸ್ವಾತಂತ್ರ್ಯ ಹೋರಾಟಕ್ಕೆ ಎಸಗುತ್ತಿರುವ ಮಹಾದ್ರೋಹ. ಇತ್ತೀಚೆಗೆ ಇಸ್ರೇಲಿನ ಸೇನೆಯು ಗಾಜಾಪಟ್ಟಿಯಲ್ಲಿ ನಡೆಸಿದ ನರಹತ್ಯೆಯನ್ನು ನಾಗರಿಕ ಜಗತ್ತು ತೀವ್ರವಾಗಿ ಖಂಡಿಸಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗ ಕೂಡ ಅದನ್ನು ಖಂಡಿಸಿದೆ. ಇಸ್ರೇಲನ್ನು ಯುದ್ಧಾಪರಾಧಿ ಎಂದು ಘೋಷಿಸಬೇಕು ಹಾಗೂ ಅದು ನಡೆಸಿರುವ ದೌರ್ಜನ್ಯದ ಬಗ್ಗೆ ಅಂತರರಾಷ್ಟ್ರೀಯ ನ್ಯಾಯಾಲಯದಲ್ಲಿ ವಿಚಾರಣೆಯಾಗಬೇಕು ಎಂಬ ಕೂಗು ಪ್ರಪಂಚದ ನಾನಾ ಕಡೆ ಕೇಳಿಬರುತ್ತಿದೆ. ಇಸ್ರೇಲ್ ನಡೆಸಿರುವ ಹೇಯ ಕೃತ್ಯಗಳು ಪ್ಯಾಲೆಸ್ಟೈನಿನ ಅಮಾಯಕ ಜನರನ್ನು ಭಯಭೀತರನ್ನಾಗಿಸಿದೆ. ಈ ಎಲ್ಲ ಘಟನೆಗಳು ಜರುಗಿದಾಗ ಭಾರತದ ಮನಮೋಹನ್ ಸಿಂಗ್ ಸರಕಾರ ಮೌನ ತಾಳಿದ್ದು ನಿಜವಾಗಿಯೂ ಖಂಡನೀಯ. ಹೋಗಲಿ ಎಂದರೆ ಈಚೆಗೆ ಮನಮೋಹನ್ ಸಿಂಗ್ ಸರಕಾರ ಯಾವ ಹೇಸಿಗೆಯೂ ಇಲ್ಲದೆ ಇಸ್ರೇಲಿನೊಂದಿಗೆ ವ್ಯವಹಾರಗಳನ್ನು ಮುಂದುವರಿಸಿರುವುದು ನಾಚಿಕೆಗೇಡು. ಚುನಾವಣೆಗಳು ಘೋಷಣೆಯಾದ ಮೇಲೆ, ಚುನಾವಣಾ ನೀತಿ ಸಂಹಿತೆ ಉಲ್ಲಂಘಿಸಿ, ಸರಕಾರದ ರಕ್ಷಣಾ ಇಲಾಖೆ ಇಸ್ರೇಲಿನಿಂದ ಹತ್ತು ಸಾವಿರ ಮಿಲಿಯನ್ ಡಾಲರುಗಳ ಆಯುಧ ಸಾಮಗ್ರಿ ಖರೀದಿಸಲು ಒಪ್ಪಂದಕ್ಕೆ ಸಹಿ ಹಾಕಿದೆ. ಇಸ್ರೇಲಿನ ಏರೋಸ್ಪೇಸ್ ಇಂಡಸ್ಟ್ರೀಸ್‌ನೊಂದಿಗೆ ಕ್ಷಿಪಣಿಗಳ ಆಮದಿಗೆ ಸಂಬಂಧಪಟ್ಟ ವ್ಯವಹಾರಕ್ಕೆ ಸಹಿಹಾಕಲಾಗಿದೆ. ರಕ್ಷಣಾ ಸಚಿವ ಎ. ಕೆ. ಅಂಟೋನಿಯವರು ಇದು ಕಳೆದ ಐದು ವರ್ಷಗಳಿಂದ ನಡೆದುಕೊಂಡು ಬಂದಿರುವ ವ್ಯವಹಾರಗಳಿಗೆ ಸಂಬಂಧಪಟ್ಟಿದ್ದು ಎಂದು ಸಮರ್ಥಿಸಿಕೊಂಡಿದ್ದಾರೆ. ಚುನಾವಣೆಗಳು ಘೋಷಣೆಯಾದ ಮೇಲೆ ಅಧಿಕಾರದಲ್ಲಿರುವ ಸರಕಾರವು ಹಂಗಾಮಿ ಸರಕಾರ ಎನಿಸಿಕೊಳ್ಳುತ್ತದೆ. ಹಾಗಾಗಿ ಮನಮೋಹನ್ ಸಿಂಗ್ ಸರಕಾರ ಪ್ರಮುಖ ನಿರ್ಧಾರಗಳನ್ನು ಕೈಗೊಳ್ಳುವಂತಿಲ್ಲ. ಅಂಥದ್ದರಲ್ಲಿ ಇಸ್ರೇಲಿನೊಂದಿಗೆ ಇಷ್ಟು ದೊಡ್ಡ ವ್ಯವಹಾರಕ್ಕೆ ಸರಕಾರ ಕೈ ಹಾಕಿದ್ದೇಕೆ ? ಈ ವ್ಯವಹಾರದಲ್ಲಿ ಅಕ್ರಮ ನಡೆದಿದೆ ಎಂಬ ಸಂದೇಹವೂ ಇದೆ. ರಕ್ಷಣಾ ಸಚಿವರು ಏನೇ ಸಮಜಾಯಿಷಿ ನೀಡಿದರೂ ಇಸ್ರೇಲಿನೊಂದಿಗೆ ಸಹಿಹಾಕಿರುವ ಒಪ್ಪಂದ ಅಕ್ರಮ ಹಾಗೂ ಖಂಡನೀಯ. ಹೊಸ ಸರಕಾರ ಅಧಿಕಾರಕ್ಕೆ ಬರುವವರೆಗೆ ಅದನ್ನು ತಡೆಹಿಡಿಯಬೇಕು. ಇಸ್ರೇಲಿ ಪಾತಕಿಗಳೊಂದಿಗೆ ಕೈ ಜೋಡಿಸುತ್ತಿರುವ ಮನಮೋಹನ ಸಿಂಗ್ ಸರಕಾರ ಕೂಡ ಆ ಪಾತಕದೊಂದಿಗೆ ಪಾಲ್ಗೊಂಡಂತೆಯೇ. ಭಾರತದ ಜನತೆ ಇದನ್ನು ಎಂದಿಗೂ ಒಪ್ಪುವುದಿಲ್ಲ.

ಸೀಯಾರ್ಕೆ
'ಚೌಬೀನ', ೪೮೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫



## ಒಡಲ ತುಡಿತಕ್ಕೆ ಕೇಡು

**ಹೆಣ್ಣು ಭ್ರೂಣ ಹತ್ಯೆ**

**ಒಂದು ಅಧ್ಯಯನ**

ಮಂಜುನಾಥ ಅದ್ದೆ

ಸ್ತ್ರೀಲೇಖ ಪ್ರಕಟಣೆ. 2008.
ರೂ 150/-



ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯು ಮಹಿಳೆಯರು ಪಡೆದ ಮತ್ತೊಂದು ವೈದ್ಯಕೀಯವಾಗಿ ಕೃತಕ ಗರ್ಭಪಾತದ ಹಕ್ಕಿನ ಜತೆಗೆ ತಳುಕು ಹಾಕಿಕೊಂಡಿರುವುದು. ಮಹಿಳೆಯರು ತಮ್ಮ ದೇಹದ ಮೇಲೆ ಹಕ್ಕು ಹಾಗೂ ಅಧಿಕಾರವನ್ನು ಸ್ಥಾಪಿಸಿಕೊಳ್ಳಲು ಅಗತ್ಯವೆಂದು ಗುರುತಿಸುವ ಈ ಕಾಯಿದೆಯ ಒಂದು ದುಷ್ಪರಿಣಾಮ ಹೆಣ್ಣು ಶಿಶು ಹತ್ಯೆ.

**ಡಾ|| ಸುಧಾ ಸೀತಾರಾಮನ್**

# ಸಂಖ್ಯೆಗಳಾಚೆಗಿನ ನೋಟ

ಮಂಜುನಾಥ ಅದ್ದೆಯವರ 'ಒಡಲ ತುಡಿತಕ್ಕೆ ಕೇಡು' ಲಿಂಗ ರಾಜಕಾರಣದ ಭಾಗವಾಗಿ ಮಹಿಳೆಯ ಬದುಕನ್ನು ಭ್ರೂಣದ ಹಂತದಲ್ಲೇ ಮೊಟಕುಗೊಳಿಸುವ ಪ್ರಯತ್ನಗಳ ಕುರಿತ ಕ್ಷೇತ್ರಕಾರ್ಯಾಧಾರಿತ ತಳಸ್ಪರ್ಶಿ ಅಧ್ಯಯನ. ಈ ಸಮಸ್ಯೆಗೆ ಇರಬಹುದಾದ ರಾಜಕೀಯ, ಆರ್ಥಿಕ ಹಾಗೂ ಧಾರ್ಮಿಕ ಕಾರಣಗಳನ್ನು ಇಲ್ಲಿ ಚರ್ಚಿಸುತ್ತಾರೆ. ಮಹಿಳೆಯ ಮೇಲೆ ನಡೆಸುತ್ತಿರುವ ಲಿಂಗ ಆಯ್ಕೆಯ ನಂಬಿಕೆಯಲ್ಲಿರುವ ತಾರತಮ್ಯತೆಯ ದುರಂತವನ್ನು ಈ ಕೃತಿ ತಿಳಿಸುತ್ತದೆ. ಲಿಂಗ ಆದ್ಯತೆ, ಲಿಂಗ ಆಯ್ಕೆ, ಲಿಂಗತಾರತಮ್ಯದ ಸ್ವರೂಪ ರೂಢಿಗತ ಪಿತೃಪ್ರಧಾನ ವ್ಯವಸ್ಥೆಯ ಮುಂದುವರಿಕೆ ಎಂದೂ ಗುರುತಿಸುತ್ತದೆ. ಗಂಡುಮಕ್ಕಳಿಗೆ ಆದ್ಯತೆ, ಕುಟುಂಬದಲ್ಲಿ ರೂಢಿಗತ ಪುರುಷನ ಅಧಿಕಾರದ ಮುಂದುವರಿಕೆ, ಮಹಿಳೆಯರ ವಿರುದ್ಧ ಹೇಗೆ ಸಂಚು ಹೂಡಿವೆ ಎನ್ನುವುದು ಅಂಕಿಅಂಶಗಳ ಮೂಲಕ ದಾಖಲಿಸುವ ಒಂದು ಸಫಲ ಪ್ರಯತ್ನ ಈ ಅಧ್ಯಯನ. ಅವರು ಗುರುತಿಸಿರುವ ಹಾಗೆ, ಭಾರತದಲ್ಲಿ ಪ್ರತಿ ಸಾವಿರ ಪುರುಷರಿಗೆ ಸ್ತ್ರೀಯರ ಸಂಖ್ಯೆ ಕೇವಲ ೯೩೩ ಇರುವುದನ್ನು ೨೦೦೧ರ ಜನಗಣತಿ ತಿಳಿಸುತ್ತದೆ. ಇದು ಬೆಚ್ಚಿಬೀಳಿಸುವ ಸಂಗತಿ!

ಈ ವಿಷಯಕ್ಕೆ ಸಂಬಂಧಿಸಿದಂತೆ ನಮಗೆ ಹೇರಳವಾಗಿ ಅಂಕಿಅಂಶಗಳು ಲಭ್ಯವಾಗುತ್ತವೆ. ಆದರೆ, ಕೃತಿಯ ಮಹತ್ವವೆಂದರೆ, ಮಂಡ್ಯ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಭ್ರೂಣಲಿಂಗದ ಆಯ್ಕೆಯನ್ನು ಕುರಿತಂತೆ ಈ ಅಂಕಿ ಅಂಶಗಳ ಆಚೆಗೂ ನಡೆಸಿರುವ ವೈವಿಧ್ಯಮಯ ಸಂದರ್ಶನ. ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿನ ಸಿಬ್ಬಂದಿ, ವೈದ್ಯರು, ಪೊಲೀಸರು, ಅಂಗನವಾಡಿ ಕಾರ್ಯಕರ್ತರು, ಮಹಿಳಾ ಹಾಗೂ ಮಕ್ಕಳ ಕ್ಷೇಮಾಭಿವೃದ್ಧಿ ಇಲಾಖೆಯ ಅಧಿಕಾರಿಗಳು, ಗರ್ಭಪಾತ ಮಾಡಿಸಿಕೊಂಡಿರುವ ಮಹಿಳೆಯರು ಹಾಗೂ ಅವರ ಸಂಬಂಧಿಕರು, ಆಸ್ಪತ್ರೆಗಳಲ್ಲಿ ದಾಖಲಾದ ಜನನದ ಅಂಕಿ ಅಂಶಗಳು, ಜನಗಣತಿ ವರದಿ - ಹೀಗೆ ಹಲವು ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಈ ಅಧ್ಯಯನವನ್ನು ನಡೆಸಲಾಗಿದೆ. ಈ ಅಧ್ಯಯನ ಕಳೆದ ಮೂರು ದಶಕಗಳಿಂದ ಮಹಿಳಾ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಿರುವ ಬೆಂಗಳೂರಿನ ವಿಮೋಚನಾ ಸಂಸ್ಥೆಯು ಭ್ರೂಣ ಆಯ್ಕೆಯಿಂದಾಗುವ ಗರ್ಭಪಾತಗಳ ವಿರುದ್ಧ ನಾಟಕ, ಶಿಬಿರ, ಸಂವಾದ ಕಾರ್ಯಕ್ರಮಗಳ ಮೂಲಕ ಮಂಡ್ಯ ಹಾಗೂ ಇತರ ಜಿಲ್ಲೆಯಲ್ಲಿ ನಡೆಸಿದ ಆಂದೋಲನ ಹಾಗೂ ಸಂಶೋಧನೆಯನ್ನು ಈ ಅಧ್ಯಯನವು ಆಧರಿಸಿದೆ.

ಒಂಬತ್ತು ಅಧ್ಯಾಯಗಳ ಹರಹನ್ನು ಒಳಗೊಂಡ ಈ ಕೃತಿಯು, ಹೆಣ್ಣುಶಿಶು ಭ್ರೂಣ ಹತ್ಯೆಗೆ ಸುದೀರ್ಘವಾದ ಇತಿಹಾಸವಿದೆ ಎನ್ನುತ್ತದೆ. ಈ ಇತಿಹಾಸವನ್ನು ಒಂದು ಸರಳ ರೇಖಾತ್ಮಕವಾಗಿರುವ ಗತಿಯ ಮೂಲಕ ಗುರುತಿಸಲಾಗಿದೆ. ಅಂದರೆ, ಅನಾದಿ ಕಾಲದಿಂದ ಆಧುನಿಕ ಕಾಲದ ತನಕವೂ ಹೆಣ್ಣು ಭ್ರೂಣ ಹತ್ಯೆ ಹಾಗೂ ಹೆಣ್ಣು ಶಿಶು ಹತ್ಯೆ ಒಂದಲ್ಲಾ ಒಂದು ರೂಪದಲ್ಲಿ ಇದ್ದೇ ಇವೆ ಎಂದು ಲೇಖಕರು ಹೇಳುತ್ತಾರೆ. ರೋಮ್ ಗಣಕೂಟದಿಂದ ಹಿಡಿದು ಇಂದಿನ ಆಧುನಿಕ ವಿಜ್ಞಾನ ತಂತ್ರಜ್ಞಾನ ಕಾಲದವರೆಗೂ, ನೇರವಾಗಿ ಹಾಗೂ ಸತತವಾಗಿ ಅದು ಹೇಗೆ ನಡೆಯುತ್ತಲೇ ಬಂದಿದೆ ಎಂದು ಗುರುತಿಸುತ್ತಾರೆ. ಆದರೂ, ಇಸ್ಲಾಮ್ ಹಾಗೂ ಬೌದ್ಧ ಧರ್ಮ ಹೊರತಾಗಿ ಬುಡಕಟ್ಟುಗಳು ಸೇರಿದಂತೆ, ಎಲ್ಲ ಧರ್ಮಗಳೂ ಯಾವ ''ಪಾಪಕಲ್ಪನೆಯೂ'' ಇಲ್ಲದೆ ಇದನ್ನು ಆಚರಿಸುತ್ತವೆ ಎಂದು ತಿಳಿಸುತ್ತಾರೆ. ಕ್ರಿಸ್ತಶಕದ ಆರಂಭದ ದಿನಗಳಲ್ಲಿ ಪಶ್ಚಿಮ ದೇಶಗಳಲ್ಲಿ ಗಂಭೀರ ಸ್ವರೂಪ ಹೊಂದಿದ್ದ ಹೆಣ್ಣು ಶಿಶು ಭ್ರೂಣಹತ್ಯೆ ಏಷ್ಯಾ ಖಂಡದ ದೇಶದಲ್ಲಿ ಇರಲಿಲ್ಲ ಎನ್ನುತ್ತಾರೆ. ಏಕೆಂದರೆ, ''ಆಗೆಲ್ಲ ಪೂರ್ವದೇಶಗಳಲ್ಲಿ ಪ್ರಕೃತಿಯನ್ನು ಪ್ರಬಲವಾಗಿ ಆಶ್ರಯಿಸಿ ಜನ ಜೀವನ ನಡೆಸಬೇಕಾದ ಅನಿವಾರ್ಯತೆ ಇದ್ದದ್ದರಿಂದ ಪ್ರಕೃತಿ ಧರ್ಮವೇ ಎಲ್ಲಕ್ಕಿಂತ ಮಿಗಿಲಾಗಿತ್ತು. ಹೆಣ್ಣಿನ ಮೇಲೆ ಇಲ್ಲಿಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ವಿಚಾರಗಳು ಅಷ್ಟಾಗಿ ಮೇಲಾಟ ನಡೆಸಿರಲಿಲ್ಲ'' ಆದರೆ, ಇಂಗ್ಲೆಂಡ್, ಅಮೇರಿಕಾ, ಕೆನಡಾ, ಭಾರತ, ಚೀನಾ, ಕೊರಿಯಾ ದೇಶಗಳ ಸ್ಥಿತಿ ಹಾಗಲ್ಲ, ಈ ದೇಶಗಳಲ್ಲಿ ಬುಡಕಟ್ಟು ಕುಲಸಮುದಾಯಗಳ ಸಾಂಪ್ರದಾಯಿಕ ಆಚರಣೆಯ ಭಾಗವಾಗಿಯೇ ಹೆಣ್ಣು ಶಿಶು-ಭ್ರೂಣ ಹತ್ಯೆ ಅವ್ಯಾಹತವಾಗಿ ನಡೆಯಲು ಕಾರಣವಾಗಿವೆ ಎನ್ನುತ್ತಾರೆ. ಇದೇನೇ ಇರಲಿ, ವಿಕಾಸಮುಖಿಯಾಗಿ ಚಲಿಸುವ ಈ ಇತಿಹಾಸ, ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಲ್ಲಿ ನಾಗರಿಕ ಹಕ್ಕುಗಳ ವಿಚಾರದಲ್ಲಿ ಕೊಂಚ ಮಟ್ಟಿಗೆ ಜಾಗೃತಿ ಕಂಡ ನಂತರ ಹಾಗೂ ವ್ಯಾಪಕ ಬೆಳವಣಿಗೆ ಕಂಡಿದ್ದ ಅಲೋಪತಿ ವೈದ್ಯಕೀಯ ಪದ್ಧತಿ ಬಹುಬೇಗ ತಂತ್ರಜ್ಞಾನವನ್ನು ಬಳಸಿಕೊಂಡಿತು ಎನ್ನುತ್ತಾರೆ.

ಆಧುನಿಕ ಭಾರತದಲ್ಲಿ ಸ್ತ್ರೀ ಭ್ರೂಣ ಹತ್ಯೆಯ ಇತಿಹಾಸವೇ ಬೇರೆ. ೧೯೭೪ರಲ್ಲಿ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯು ಭ್ರೂಣಗಳಿಗೆ ಇರಬಹುದಾದ ಅಸಹಜತೆಯನ್ನು ಪತ್ತೆಹಚ್ಚಲು ಅಮೀನೋಸಿಂಥಸಿಸ್ ಎಂಬ ಪ್ರಯೋಗಗಳನ್ನು ಆರಂಭಿಸಿತು. ಭ್ರೂಣದ ಲಿಂಗದ ಬಗೆಗಿನ ಮಾಹಿತಿ ಇದರ ಉಪ ಪ್ರಯೋಗವಾಯಿತು. ಅನೇಕ ದಂಪತಿಗಳು, ಗರ್ಭದೊಳಗಿನ ಭ್ರೂಣ ಹೆಣ್ಣು ಶಿಶುವಿನದು ಎಂದು ಅರಿತು ಗರ್ಭಪಾತವನ್ನು ಮಾಡಿಸಿಕೊಂಡರು. ೧೯೯೪ರಲ್ಲಿ ಸರಕಾರವು ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯನ್ನು ಜಾರಿಗೊಳಿಸಿತು. ಇದರ ಅನುಸಾರ ಹುಟ್ಟಲಿರುವ ಮಗುವಿನ ಲಿಂಗವನ್ನು ಬಹಿರಂಗ ಪಡಿಸುವುದು ದಂಡಾರ್ಹ ಅಪರಾಧ ಎಂದು

ಘೋಷಿಸಿತು. ವಿಪರ್ಯಾಸವೆಂದರೆ, ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯು ಮಹಿಳೆಯರು ಪಡೆದ ಮತ್ತೊಂದು ವೈದ್ಯಕೀಯವಾಗಿ ಕೃತಕ ಗರ್ಭಪಾತದ ಹಕ್ಕಿನ ಜತೆಗೆ ತಳಕು ಹಾಕಿಕೊಂಡಿರುವುದು. ಮಹಿಳೆಯರು ತಮ್ಮ ದೇಹದ ಮೇಲೆ ಹಕ್ಕು ಹಾಗೂ ಅಧಿಕಾರವನ್ನು ಸ್ಥಾಪಿಸಿಕೊಳ್ಳಲು ಅಗತ್ಯವೆಂದು ಗುರುತಿಸುವ ಈ ಕಾಯಿದೆಯ ಒಂದು ದುಷ್ಪರಿಣಾಮ ಹೆಣ್ಣು ಶಿಶು ಹತ್ಯೆ. ಭ್ರೂಣಲಿಂಗ ಪತ್ತೆ ನಿಷೇಧ ಕಾಯಿದೆಯ ಒಂದು ಸಮಸ್ಯೆ ನಾವು ನಮ್ಮ ದೇಹದ ಮೇಲಿನ ಅಧಿಕಾರವನ್ನು ಕಳೆದುಕೊಳ್ಳುವುದೂ ಆಗಿದೆ.

ಉತ್ತರ ಭಾರತದಲ್ಲಿ ಹೆಣ್ಣು ಶಿಶು-ಭ್ರೂಣ ಹತ್ಯೆ ಇತಿಹಾಸವನ್ನು ತಿಳಿಸುತ್ತಾ ಲೇಖಕರು ಒಂದು ಕುತೂಹಲಕರ ಪ್ರಸಂಗವನ್ನು ನಮ್ಮ ಮುಂದೆ ಇಡುತ್ತಾರೆ. ಇಡೀ ದೇಶದಲ್ಲಿ ಮೊಟ್ಟಮೊದಲು ಹೆಣ್ಣು ಭ್ರೂಣ ಹತ್ಯೆ ಶುರುವಾಗಿದ್ದೇ ಪಂಜಾಬಿನ ಅಮೃತಸರದಲ್ಲಿ. ೧೯೨೭ರಲ್ಲೇ ಡಾ|| ಭಂಡಾರಿ ಎಂಬ ವೈದ್ಯ ''ಇಲ್ಲಿ ಭ್ರೂಣ ಲಿಂಗ ಪತ್ತೆ ಮಾಡಲಾಗುತ್ತದೆ'' ಎಂದು ತನ್ನ ಕ್ಲಿನಿಕ್‌ನ ಎದುರು ಬೋರ್ಡ್ ಹಾಕಿಕೊಂಡಿದ್ದ. ಆಗೆಲ್ಲಾ, ಭ್ರೂಣಲಿಂಗ ಪತ್ತೆಯನ್ನು ಗರ್ಭಜಲದ ತಪಾಸಣೆಯ ಮೂಲಕ ಮಾಡಲಾಗುತ್ತಿತ್ತು. ಇದೆಲ್ಲದರ ಪರಿಣಾಮವೇ ಇಂದು ಪಂಜಾಬಿನಲ್ಲಿ ಮಹಿಳೆಯರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದು. ಇನ್ನೂ ದುರಂತವೆಂದರೆ, ಫತೇಪುರ ಸಾಹಿಬ್ ಜಿಲ್ಲೆಯಲ್ಲೇ ಶಿಶುಲಿಂಗ ಅನುಪಾತ ೧೦೦೦ ಗಂಡುಮಕ್ಕಳಿಗೆ ೭೫೬ ಹೆಣ್ಣು ಮಕ್ಕಳು, ಎಂದು ಇಲ್ಲಿ ಬೆಳಕು ಚೆಲ್ಲುತ್ತಾರೆ. ಉತ್ತರ ಭಾರತಕ್ಕೆ ಹೋಲಿಸಿದರೆ ದಕ್ಷಿಣದ ಪ್ರಮುಖ ರಾಜ್ಯಗಳಾದ ಆಂಧ್ರಪ್ರದೇಶ, ಕರ್ನಾಟಕ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ಹೆಣ್ಣು ಶಿಶು ಹಾಗೂ ಭ್ರೂಣ ಹತ್ಯೆಯ ಪ್ರಮಾಣ ಕಡಿಮೆ ಎಂದು ಹೇಳಬಹುದು ಎನ್ನುತ್ತಾರೆ.

ಕಬ್ಬು ಮತ್ತು ಭತ್ತ ಬೆಳೆಯುವ ನೀರಾವರಿ ಪ್ರದೇಶಗಳಲ್ಲಿ ಹೆಣ್ಣು ಭ್ರೂಣ ಹತ್ಯೆ ಪ್ರಮಾಣ ಹೆಚ್ಚು ಎನ್ನುವ ವಿಷಯ ತಿಳಿದುಬರುತ್ತದೆ. ಈ ಅಧ್ಯಯನದಲ್ಲಿ ಹೆಸರಿಸಬಹುದಾದ ಮತ್ತೊಂದು ಅಂಶವೇನೆಂದರೆ, ವಿವಿಧೆಡೆ ಅದರಲ್ಲೂ ತಮಿಳುನಾಡು, ಬಿಹಾರ ರಾಜ್ಯಗಳಲ್ಲಿ, ಹೆಣ್ಣು ಶಿಶುವನ್ನು ಕೊಲ್ಲುವ ಅಮಾನುಷ ಕ್ರಿಯೆಯ ವಿಧಾನದ ವಿವರಣೆ ಹಾಗೂ ಈ ಪ್ರಕ್ರಿಯೆಗಳಲ್ಲಿ ದಾಯಿಗಳ ಪಾತ್ರವನ್ನು ತುಂಬ ಸೂಕ್ಷ್ಮವಾಗಿ ವಿವರಿಸಿರುವುದು.

ಸಮಾಜಶಾಸ್ತ್ರೀಯ ನಿಲುವಿನಿಂದ, ಲೇಖಕರು, ಭಾರತದಲ್ಲಿ ಹೆಣ್ಣು ಭ್ರೂಣಹತ್ಯೆಯಲ್ಲಿ ಜಾತಿ, ಧರ್ಮ, ವರ್ಗ, ಆರ್ಥಿಕತೆ, ತಳಕುಹಾಕಿಕೊಂಡಿರುವುದುನ್ನು ಸವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ. ಶ್ರೀಮಂತ ಜಿಲ್ಲೆಗಳಾದ ಬೆಳಗಾವಿ ಹಾಗೂ ಮಂಡ್ಯದಲ್ಲಿ ಮಹಿಳೆಯರ ಸಂಖ್ಯೆ ಕ್ರಮವಾಗಿ ೯೨೪ ಹಾಗೂ ೯೩೪ ಇದ್ದು, ಅದು ಅಸಮತೋಲನವಾದುದು ಎಂದು ಗುರುತಿಸಿದ್ದಾರೆ. ಉತ್ತಮ ಆರ್ಥಿಕ ಸ್ಥಿತಿಗೂ, ನೀರಾವರಿ ಯೋಜನೆಗಳಿಂದ ಪಡೆದ ಸವಲತ್ತುಗಳಿಗೂ, ಕೃಷಿಯಲ್ಲಿ ತಂತ್ರಜ್ಞಾನದ ಬಳಕೆಗೂ, ವಾಣಿಜ್ಯ ಬೆಳವಣಿಗೆಗೂ ಹಾಗೂ ಲಿಂಗ ಅನುಪಾತದ ಅಸಮಾನತೆಗೂ ಇರುವ ಸಂಬಂಧವನ್ನು ಚರ್ಚಿಸುತ್ತಾರೆ. ಬೃಹತ್ ನೀರಾವರಿಗೆ ಒಂದು ರೀತಿಯ ಗಂಡುಗುಣವಿರುತ್ತದೆ ಎಂದು ಅವರ ಅಭಿಪ್ರಾಯ (ಪು.೩೮). ಗಂಡು ಗುಣವನ್ನು ಹೀಗೆ ವಿವರಿಸುತ್ತಾರೆ – ನೀರಾವರಿ ಬೇಸಾಯದಲ್ಲಿ ಯಂತ್ರಗಳ ಭರಾಟೆ ಅಧಿಕವಾಗಿದ್ದು ಜನಸಮುದಾಯವನ್ನು ಭೂಮಾಲೀಕರು ಹಾಗೂ ಭೂರಹಿತರನ್ನಾಗಿ ವಿಂಗಡಿಸಿ, ಭೂಮಾಲೀಕರ ಮನೆಯಲ್ಲಿ ಹೆಣ್ಣು ಕೇವಲ ಗೃಹಕೃತ್ಯಗಳ ಬಂಧಿಯಾಗಿದ್ದಾಳೆ. ಹಾಗೂ ಭೂರಹಿತರ ಮನೆಯಲ್ಲಿ ದುಡಿದು ಮಕ್ಕಳಿಗೆ ಗಂಜಿ ತಂದು ಹಾಕುವ ಯಂತ್ರವಾಗಿದ್ದಾಳೆ. ಮಂಡ್ಯದಲ್ಲಿ ನಡುಮಧ್ಯಾಹ್ನಗಳು ಅಲ್ಲಿಯ ಹೆಂಗಸರ ಬದುಕಿನ ಪರಿಸ್ಥಿತಿಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಸೂಚಿಸುತ್ತವೆ ಎಂದು ಹೇಳುತ್ತಾ ಮಹಿಳೆಯರು ಹೇಗೆ ಟಿ.ವಿ.ಗೆ ಜೋತುಬಿದ್ದು ಮಂಕುಹಿಡಿದವರಾಗಿದ್ದಾರೆ ಎಂದು ತಿಳಿಸುತ್ತಾರೆ.




ಅದ್ದೆಯವರು ಹೇಳುವಂತೆ ಮಂಡ್ಯದ ಎರಡು ತಾಲ್ಲೂಕುಗಳು ಹೊರತುಪಡಿಸಿ ಉಳಿದಂತೆ ಮಳವಳ್ಳಿ, ಶ್ರೀರಂಗಪಟ್ಟಣ, ಮಂಡ್ಯ, ಮದ್ದೂರು, ಪಾಂಡವಪುರ ತಾಲ್ಲೂಕುಗಳು ನೀರಾವರಿಗೆ ಒಳಗಾಗಿವೆ. ಈ ಜಿಲ್ಲೆಗಳಲ್ಲಿ ಅದ್ದೆಯವರೆ ಗುರುತಿಸುವ ಹಾಗೆ, ಒಂದು ಹೆಕ್ಟೇರ್‌ಗಿಂತ ಕಡಿಮೆ ಭೂಮಿಯನ್ನು ಹೊಂದಿರುವ ಅತಿ ಸಣ್ಣ ರೈತರ ಸಂಖ್ಯೆ ೩, ೩೩, ೭೧೬ ಇದ್ದಾರೆ. ಇವರು ಹೊಂದಿರುವ ಭೂಮಿಯ ಪ್ರಮಾಣ ೧, ೨೭, ೦೪೬ ಹೆಕ್ಟೇರ್. ಮೂರು ಲಕ್ಷ ಚಿಲ್ಲರೆ ಹಿಡುವಳಿದಾರರಿಗೆ ಈ ಒಂದು ಲಕ್ಷ ಚಿಲ್ಲರೆ ಹೆಕ್ಟೇರ್ ಭೂಮಿ ಸರಾಸರಿ ಹಂಚಿದರೂ ಅದು ಗುಂಟೆಗಳ ಲೆಕ್ಕದಲ್ಲಿ ಇದೆ. ಅಂದರೆ, ೧೦ ಹೆಕ್ಟೇರ್ ಪಡೆದಿರುವವರ ಪ್ರಮಾಣ ಕೇವಲ ೩೨೧ ರೈತರು. ಇದೇ ಕುಟುಂಬಗಳಲ್ಲಿ ಹೆಣ್ಣು ಭ್ರೂಣಹತ್ಯೆ ಅತಿ ಹೆಚ್ಚಿನದಾಗಿ ನಡೆಯುತ್ತಿರುವುದು ಎಂದು ಕೂಡ ವಾದಿಸುತ್ತಾರೆ (ಪು. ೪೮). ಜತೆಗೆ, ಕಬ್ಬು ಹೆಚ್ಚು ಶ್ರಮವನ್ನು ಬೇಡುವ ಬೆಳೆ ಅಲ್ಲವೇ ? ಅತಿ ಸಣ್ಣ ಹಿಡುವಳಿಗಳಾಗಿ ಇರುವುದರಿಂದ ಕೃಷಿಯಲ್ಲಿ ಯಂತ್ರಗಳು, ರಸಗೊಬ್ಬರ, ಉಪಕರಣಗಳ ಬಳಕೆ ಸಾಧ್ಯವಾಗದಿರುವ ಪರಿಸ್ಥಿತಿ ಉಂಟಾಗಿದೆ. ಈ ಎಲ್ಲ ಪರಿಸ್ಥಿತಿಗಳನ್ನು ಗಮನಿಸಿದರೆ ಗಂಡು ಗುಣವನ್ನು ಸಮರ್ಥಿಸುವುದು ಕಷ್ಟ ಎಂದೆನಿಸುತ್ತದೆ. ಜತೆಗೆ, ಈ ನಿರಾಯಾಸವಾಗಿ ಟಿ.ವಿ ನೋಡುವ ಮಹಿಳೆಯರು ಯಾರು ಮತ್ತು ಅವರ ಪ್ರಮಾಣ ಎಷ್ಟು ಎಂದು ಕೇಳಿಕೊಳ್ಳುವುದು ಮುಖ್ಯ ಎಂದನಿಸುತ್ತದೆ. ಬೆಳಿಗ್ಗೆ ಹೊರಡುವ ಮೈಸೂರು- ಬೆಂಗಳೂರು ಟ್ರೈನ್‌ಗಳಲ್ಲಿ ಸಂಚರಿಸುವ ನೂರಾರು ಮಹಿಳೆಯರು ಬೆಂಗಳೂರಿನ ಗಾರ್ಮೆಂಟ್ಸ್ ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುತ್ತಾರೆ ಎಂದು ಎಲ್ಲರಿಗೂ ತಿಳಿದಿರುವ ಸಂಗತಿ. ಈ ಮಹಿಳೆಯರು ಯಾವ ವರ್ಗಕ್ಕೆ ಸೇರಿರಬಹುದು ಎಂದು ಊಹಿಸುವುದು ಕಷ್ಟವೇನೂ ಅಲ್ಲ!

ಅದ್ದೆ ಅವರು ಜಾತಿ/ಧರ್ಮ ಮತ್ತು ಭ್ರೂಣಹತ್ಯೆ ನಡುವೆ ಬೆಸೆಯುವ ಸಂಬಂಧವನ್ನು ಗಮನಿಸೋಣ. ವೈದಿಕ ಧರ್ಮಕ್ಕೆ ಹೊರತಾದ ಕೊಡವ ಮತ್ತು ಪರಿಶಿಷ್ಟ ಜಾತಿಗಳು ಹೆಚ್ಚಿರುವ ಕೋಲಾರದಲ್ಲಿ ಹೆಂಗಸರ ಸಂಖ್ಯೆ ಅತಿ ಹೆಚ್ಚಾಗಿರುವುದು ಸಾಮಾಜಿಕವಾಗಿ ಅತಿ ಮಹತ್ವದ ವಿಚಾರವಾಗಿದೆ ಎಂದು ತಿಳಿಸುತ್ತಾರೆ. ಮೇಲ್ಜಾತಿಯವರ ಲಿಂಗ ಆಯ್ಕೆ ಹಾಗೂ ತರತಮತೆಯ ಪದ್ಧತಿಯು ನಿಧಾನವಾಗಿ ಭೂರಹಿತ ರೈತರು, ಸಣ್ಣ ಪ್ರಮಾಣದ ರೈತರು ಹಾಗೂ ಕೆಳ ಜಾತಿಯ ಜನರಿಗೂ ಹಬ್ಬಿರುವುದನ್ನು ಗುರುತಿಸುತ್ತಾರೆ. ಅವರು, ಅಧಿಕ ಬಡ್ಡಿಗೆ ಸಾಲವನ್ನು ಪಡೆದು ಭ್ರೂಣ ಲಿಂಗದ ತಪಾಸಣೆ ಮಾಡಿಸಿಕೊಳ್ಳುತ್ತಿರುವುದರ ಬಗ್ಗೆ ಖೇದ ವ್ಯಕ್ತಪಡಿಸುತ್ತಾರೆ. ''ಭಾರತದ ಮಟ್ಟಿಗೆ ಹೇಳುವುದಾದರೆ, ಹೆಣ್ಣು ಶಿಶು ಹಾಗೂ ಭ್ರೂಣಹತ್ಯೆಗಳು ಹೆಚ್ಚಿಗೆ ನಡೆಯುತ್ತಿರುವುದು ಮೇಲುಜಾತಿಗಳಲ್ಲಿ, ಅಕ್ಷರಸ್ಥರಲ್ಲಿ, ಶ್ರೀಮಂತರಲ್ಲಿ; ಕೆಳಜಾತಿಗಳಲ್ಲಿ, ಬಡವರಲ್ಲಿ, ಅನಕ್ಷರಸ್ಥರಲ್ಲಿ ಈ ಸಮಸ್ಯೆ ಹಿಂದೆ ಕಡಿಮೆ ಪ್ರಮಾಣದಲ್ಲಿ ಇತ್ತಾದರೂ, ೧೯೭೫ರಿಂದ ಈಚೆಗೆ ಈ ಸಮುದಾಯಗಳಲ್ಲೂ ಹೆಚ್ಚು ಎಂದೇ ಹೇಳಬಹುದಾದಷ್ಟು ಹೆಣ್ಣುಭ್ರೂಣ ಹತ್ಯೆಗಳು ನಡೆಯುತ್ತಿವೆ.'' (ಪು.೧೮) ಪುರುಷರೊಂದಿಗೆ ಹೋಲಿಸಿದಾಗ ಮಹಿಳೆಯರ ಅಸ್ತಿತ್ವದ ಅವಕಾಶಗಳೇ ಕ್ಷೀಣಿಸುತ್ತಿವೆ. ನೈತಿಕತೆಯ ಅಧಃಪತನ, ಮನೆಬಾಗಿಲಿಗೆ ಬಂದು ಸೇವೆಸಲ್ಲಿಸಲು ಟೊಂಕಕಟ್ಟಿ ನಿಂತಿರುವ ಸ್ಕ್ಯಾನಿಂಗ್ ಕೇಂದ್ರಗಳು ಈ ಸಮಸ್ಯೆಯನ್ನು ಹೆಚ್ಚು ವಿಷಮಗೊಳಿಸಿವೆ. ಗಮನಿಸಬೇಕಾದ ಅಂಶವೆಂದರೆ, ಬೆಳಗಾವಿಯಲ್ಲಿ ವೈದಿಕ ವಿರೋಧಿ ಲಿಂಗಾಯತ ಸಮುದಾಯಗಳಲ್ಲಿ ಮಹಿಳೆಯರ ಪ್ರಮಾಣ ಅತಿ ಹೆಚ್ಚಾಗಿಲ್ಲದಿರುವುದು. ಹಾಗಾದರೆ, ಅದ್ದೆಯವರು ಇಲ್ಲಿ ಕಲ್ಪಿಸುವ ಜಾತಿ/ಧರ್ಮ ಮತ್ತು ಭ್ರೂಣಹತ್ಯೆ ನಡುವಣ ಸಂಬಂಧವನ್ನು ತಮ್ಮ ಸಿದ್ಧಾಂತಗಳ ದೃಷ್ಟಿಕೋನಗಳಿಂದಾಗಿ ಏರ್ಪಡಿಸಲಾದ ಸಂಬಂಧಗಳು ಎನ್ನಿಸುತ್ತದೆ. ಲೇಖಕರು ತಮ್ಮ ತಾತ್ವಿಕ ದೃಷ್ಟಿಕೋನಕ್ಕೆ ಸೀಮಿತ ವಾಗುವುದಕ್ಕಿಂತ ಜನರ ಅನುಭವಗಳ ಹಿನ್ನೆಲೆಯಲ್ಲಿ ತಮ್ಮ ಅರಿವಿನ ವಲಯವನ್ನು ವಿಸ್ತರಿಸಿಕೊಂಡಿದ್ದರೆ ಈ ಅಧ್ಯಯನವು ಇನ್ನೂ ಹೆಚ್ಚು ಅರ್ಥಪೂರ್ಣವಾಗಿರುತ್ತಿತ್ತು ಎನಿಸುತ್ತದೆ.

**ಡಾ|| ಸುಧಾ ಸೀತಾರಾಮನ್**
ಸಾಮಾಜಿಕ ಆರ್ಥಿಕ ಬದಲಾವಣೆ ಅಧ್ಯಯನ ಸಂಸ್ಥೆ, ಬೆಂಗಳೂರು

# ಸಂಸ್ಕೃತಿ ಕೇಂದ್ರಿತ ಸಂಘರ್ಷ

ಮತೀಯವಾದದ **ರಾಷ್ಟ್ರ** ಎಂಬ ಕಲ್ಪನೆಯಲ್ಲಿ ಸಂಸ್ಕೃತಿ ಕೇಂದ್ರ ಸ್ಥಾನವನ್ನು ಆಕ್ರಮಿಸುವುದೇ ಅಲ್ಲದೆ ಧಾರ್ಮಿಕ ಅಸ್ಮಿತೆಯೊಡನೆ ಗುರುತಿಸಿಕೊಂಡು ತನ್ನ ಲಕ್ಷಣಗಳನ್ನು ವ್ಯಕ್ತಪಡಿಸುತ್ತದೆ. ಧರ್ಮದ ಒಂದು ಆಂಶಿಕ ಭಾಗವಾಗಿ ರೂಪುಗೊಳ್ಳುವ ಸಂಸ್ಕೃತಿಯ ಹಿನ್ನೆಲೆಯಲ್ಲಿ ರಾಷ್ಟ್ರ ಎನ್ನುವುದು ಸಾಂಸ್ಕೃತಿಕ ರಚನೆಯಾಗಿಯೇ ಹೊರಹೊಮ್ಮುತ್ತದೆ. ಐತಿಹಾಸಿಕ ಅನುಭವಗಳಿಗೆ ಮತ್ತು ಸಮಕಾಲೀನ ವಾಸ್ತವಗಳಿಗೆ ವಿರುದ್ಧವಾಗಿ ಈ ಮತೀಯ ವಾದಿ ಕಲ್ಪನೆಯು ಎರಡು ಅಂತರಸಂಬಂಧಿ ಭಾವನೆಗಳಿಗೆ ಪ್ರಮುಖ ಸ್ಥಾನ ಕಲ್ಪಿಸುತ್ತದೆ. ಮೊದಲನೆಯದು **ಪ್ರತಿಯೊಂದು ಧಾರ್ಮಿಕ ಸಮುದಾಯವೂ ಏಕಪ್ರಕಾರವಾದ ಸಂಸ್ಕೃತಿಯನ್ನು ಹೊಂದಿರುತ್ತದೆ** ಎಂಬ ಭಾವನೆ. ಎರಡನೆಯದು **ಪ್ರತಿಯೊಂದು ಸಮುದಾಯದ ಸಂಸ್ಕೃತಿಯೂ ಮತ್ತೊಂದರಿಂದ ವಿಭಿನ್ನವಾಗಿರುತ್ತದೆ** ಎಂಬ ಭಾವನೆ. ಈ ರೀತಿಯ ವ್ಯಾಖ್ಯಾನಗಳು ದೇಶದ ಸಾಮಾಜಿಕ ಚೌಕಟ್ಟಿಗೆ ಧಾರ್ಮಿಕ-ಸಾಂಸ್ಕೃತಿಕ ಲಕ್ಷಣಗಳನ್ನು ಆರೋಪಿಸುತ್ತವೆ. ಈ ಕಲ್ಪನೆಯ ಪರಿಧಿಯಲ್ಲೇ ಸಮಾಜವನ್ನು ಎರಡು ವಿಭಿನ್ನ ವರ್ಗಗಳನ್ನಾಗಿ ವಿಂಗಡಿಸಲಾಗುತ್ತದೆ. ಒಂದು ವರ್ಗವನ್ನು ಸ್ಥಳೀಯರೆಂದೂ ಮತ್ತೊಂದು ವರ್ಗವನ್ನು ವಿದೇಶೀಯರೆಂದೂ ವಿಂಗಡಿಸಿ ಈ ಸಮುದಾಯಗಳು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿಭಿನ್ನವೆಂದು ಪ್ರತಿಪಾದಿಸಲಾಗುತ್ತದೆ. ಯಾವುದೇ ಸಂದರ್ಭದಲ್ಲೂ ಸಾಮರಸ್ಯ ಸಾಧಿಸಲಾಗದ ಈ ಭಿನ್ನತೆಗಳು, ವಿಭಿನ್ನ ಸಂಸ್ಕೃತಿ ಹೊಂದಿದ ಪ್ರತ್ಯೇಕ ರಾಷ್ಟ್ರಗಳಿಗೆ ಸೇರಿದ್ದವೆಂದು ಪ್ರತಿಪಾದಿಸಲಾಗುತ್ತದೆ.

ಗತ ಇತಿಹಾಸದಲ್ಲಿ ಈ ಭಿನ್ನತೆಗಳೇ ವಿವಿಧ ಸಮುದಾಯಗಳ ನಡುವೆ ಸಂಘರ್ಷಗಳಿಗೆ ಎಡೆಮಾಡಿ ಕೊಟ್ಟಿವೆ. ಕೋಮುವಾದಿ ಸಿದ್ಧಾಂತಿಗಳು ವಸಾಹತುಶಾಹಿ ಇತಿಹಾಸಶಾಸ್ತ್ರವನ್ನು ಅಂತರ್ಗತ ಮಾಡಿಕೊಂಡು, ಅವುಗಳಲ್ಲಿನ ರಾಜಕೀಯ ಹಾಗೂ ಸಾಂಸ್ಕೃತಿಕ ವ್ಯಾಖ್ಯಾನಗಳನ್ನು ಉತ್ತಮಪಡಿಸಿ, ಭಾರತೀಯ ಇತಿಹಾಸದಲ್ಲಿ ಸಂಭವಿಸಿರುವ ಅಂತರ್‌ಸಮುದಾಯದ ಘರ್ಷಣೆಗಳ ಮೂಲಕವೇ ಧಾರ್ಮಿಕ ಸಮುದಾಯಗಳು ರಾಜಕೀಯ ಅಸ್ಮಿತೆಯನ್ನು ಗಳಿಸಿದವು ಎಂದು ಪ್ರತಿಪಾದಿಸುತ್ತಾರೆ. ತಮ್ಮ ಪ್ರತ್ಯೇಕ ಸಾಂಸ್ಕೃತಿಕ ಆಚರಣೆಗಳ ಮೂಲಕ ಧರ್ಮದ ನೆಲೆಗಟ್ಟಿನಲ್ಲೇ ವ್ಯಕ್ತವಾಗುವ ವಿಶಿಷ್ಟ ಅಸ್ಮಿತೆಯನ್ನು ಸಮುದಾಯಗಳು ಹೊಂದಿದ್ದವು ಎಂದೂ ಈ ವ್ಯಾಖ್ಯಾನಕಾರರು ಪ್ರತಿಪಾದಿಸುತ್ತಾರೆ.

ತಮ್ಮ **ಭಾರತೀಯ ಇತಿಹಾಸದ ಆರು ಭವ್ಯ ಯುಗಗಳು** ಕೃತಿಯಲ್ಲಿ ವಿನಾಯಕ್ ದಾಮೋದರ್ ಸಾವರ್ಕರ್ ಅವರು ಭಾರತೀಯ ಇತಿಹಾಸವನ್ನು, ವಿದೇಶಿ ಆಕ್ರಮಣಕಾರರ ವಿರುದ್ಧ ಹಿಂದೂಗಳ ಪ್ರತಿರೋಧದ ನೆಲೆಗಟ್ಟಿನಲ್ಲೇ ವಿಶ್ಲೇಷಿಸುತ್ತಾರೆ. ಹಿಂದೂ ರಾಷ್ಟ್ರದ ಸ್ವಯಂ ಅಸ್ಮಿತೆ ರೂಪುಗೊಳ್ಳುವಲ್ಲಿ ಈ ಐತಿಹಾಸಿಕ ಘಟನೆಗಳು ಮಹತ್ತರ ಪಾತ್ರ ವಹಿಸಿದ್ದವು ಎಂದು ಸಾವರ್ಕರ್ ವಿಶ್ಲೇಷಿಸುತ್ತಾರೆ. ಆದರೆ ಈ ರೀತಿಯ ರಾಜಕೀಯ ಘಟನೆಗಳು ಸಂಭವಿಸಿದ ಮಾತ್ರಕ್ಕೆ ಜನಸಮುದಾಯಗಳಲ್ಲಿ ಒಂದು ರಾಷ್ಟ್ರದ ನಿರ್ಮಾಣವಾಗುವಂತಹ ಭಾವನಾತ್ಮಕ ಐಕ್ಯತೆ ಮೂಡುವುದಿಲ್ಲ ಎಂದು ಪ್ರತಿಪಾದಿಸುವ ಸಾವರ್ಕರ್ ಇದಕ್ಕಿಂತಲೂ ಹೆಚ್ಚಿನ, ಸಮಾನ ಸಂಸ್ಕೃತಿಗೆ ಬದ್ಧವಾಗಿದ್ದ ಶಾಶ್ವತವಾದ ಭಾವನೆಗಳನ್ನು ಗುರುತಿಸಿಸುತ್ತಾರೆ. ಹಿಂದೂ ಮತ್ತು ಮುಸ್ಲಿಂ ಸಮುದಾಯಗಳು ವಿಭಿನ್ನ ಸಾಂಸ್ಕೃತಿಕ ನಿಷ್ಠೆಯನ್ನು ಹೊಂದಿದ್ದರಿಂದ ಎರಡೂ ಸಮುದಾಯಗಳು ವಿಭಿನ್ನವೆಂದು ಸಾವರ್ಕರ್ ಪ್ರತಿಪಾದಿಸುತ್ತಾರೆ.

ಇಪ್ಪತ್ತನೆಯ ಶತಮಾನದಲ್ಲಿ ಕೋಮುವಾದದ ಸಾಂಸ್ಕೃತಿಕ ತರ್ಕ ಆಕ್ರಮಣಕಾರಿ ಲಕ್ಷಣಗಳನ್ನು ಪಡೆದಿತ್ತು. ಬಂಗಾಲದ ಖ್ಯಾತ ಕಾದಂಬರಿಕಾರ ಶರತ್‌ಚಂದ್ರ ಚಟ್ಟೋಪಾಧ್ಯಾಯ ಹಿಂದೂ-ಮುಸ್ಲಿಂ ಸಮುದಾಯಗಳ ಸಾಂಸ್ಕೃತಿಕ ವಿಭಿನ್ನತೆಗಳನ್ನು ಗ್ರಹಿಸಿದ್ದ ಪರಿ ಈ ನಿಟ್ಟಿನಲ್ಲಿ ಮಹತ್ತರವಾದ ಬೆಳಕು ಚೆಲ್ಲುತ್ತದೆ. ೧೯೨೬ರ ಬಂಗಾಲದ ಪ್ರಾದೇಶಿಕ ಸಮಾವೇಶದಲ್ಲಿ ಅವರು ಪ್ರಸ್ತುತ ಪಡಿಸಿದ **ಭಾರತದ ಹಿಂದೂ ಮುಸ್ಲಿಂ ಸಮಸ್ಯೆ** ಎಂಬ ಪ್ರಬಂಧದಲ್ಲಿ ಶರತ್‌ಚಂದ್ರರು ಹಿಂದೂ-ಮುಸ್ಲಿಂ ಸಮುದಾಯಗಳ ನಡುವಿನ ವಿಭಿನ್ನತೆಗಳ ಬಗ್ಗೆ ವ್ಯಕ್ತವಾಗುತ್ತಿದ್ದ ಕೋಮುವಾದಿ ಪ್ರತಿಪಾದನೆಗಳಿಗೆ ಒಂದು ಹೊಸ ಆಯಾಮವನ್ನೇ ಒದಗಿಸಿದ್ದರು. ಅವರಿಗೂ ಮುಂಚಿನ ಅನೇಕ ವ್ಯಾಖ್ಯಾನಕಾರರು ಮೂಲಭೂತವಾಗಿ ಸಾಂಸ್ಕೃತಿಕ ವಿಭಿನ್ನತೆಗಳನ್ನು ಹೊಂದಿರುವ ಎರಡೂ ಸಮುದಾಯಗಳು ಸಾಮರಸ್ಯ ಸಾಧಿಸಲು ಸಾಧ್ಯವೇ ಇಲ್ಲ ಎಂದು ಪ್ರತಿಪಾದಿಸಿದ್ದರು. ಸಾವರ್ಕರ್ ಮತ್ತು ಮೊಹಮ್ಮದ್ ಅಲಿ ಜಿನ್ನಾ ಅವರ ಎರಡು ರಾಷ್ಟ್ರಗಳ ಕಲ್ಪನೆ ಇದೇ ಅಭಿಪ್ರಾಯವನ್ನು ಆಧರಿಸಿತ್ತು. ಆದರೆ ಶರತ್‌ಚಂದ್ರರ ಗುರಿ ಸಾಂಸ್ಕೃತಿಕ ವಿಭಿನ್ನತೆ ಆಗಿರಲಿಲ್ಲ, ಬದಲಾಗಿ ಮುಸ್ಲಿಮರಿಗೆ ಸಂಸ್ಕೃತಿಯೇ ಇಲ್ಲ ಎಂಬುದು ಅವರ ವಾದವಾಗಿತ್ತು. ಮೇಲ್ಜಾತಿಯವರಾಗಲಿ, ಕೆಳಸ್ತರದವರಾಗಲೀ ಹಿಂದೂಗಳು ಜನ್ಮತಃ ಸಂಸ್ಕೃತಿಯನ್ನು ಪಡೆದಿರುತ್ತಾರೆ. ಆದರೆ ಮುಸ್ಲಿಮರು ಸಂಸ್ಕೃತಿಹೀನರಾಗಿಯೇ ಜನಿಸುತ್ತಾರೆ ಎಂದು ಶರತ್‌ಚಂದ್ರ ವ್ಯಾಖ್ಯಾನಿಸಿದ್ದರು. ಮುಸ್ಲಿಮರು ಸಂಸ್ಕೃತಿಯನ್ನು ರೂಢಿಸಿಕೊಳ್ಳಲು ಯತ್ನಿಸಿದರೂ ಅವರಿಂದ ಸಾಧ್ಯವಾಗುವುದಿಲ್ಲ ಎಂದು ಅವರು ಪ್ರತಿಪಾದಿಸಿದ್ದರು. ಅವರು ಸಂಸ್ಕೃತಿಹೀನರಾಗಿರುವುದರಿಂದಲೇ ಅವರಲ್ಲಿ ಕ್ರೌರ್ಯ, ಬರ್ಬರತೆ ಮತ್ತು ಮತಾಂಧತೆ ತುಂಬಿರುತ್ತದೆ ಎಂದು ಶರತ್‌ಚಂದ್ರರು ವಾದಿಸುತ್ತಾರೆ.

ಈ ಹಿಂದೆಯೂ ಅನೇಕ ಕೋಮುವಾದಿ ಸಿದ್ಧಾಂತಿಗಳು ಹಿಂದು ಮತ್ತು ಮುಸ್ಲಿಂ ಸಮುದಾಯಗಳ ನಡುವಿನ ಸಾಂಸ್ಕೃತಿಕ ವಿಭಿನ್ನತೆಗಳ ಬಗ್ಗೆ ಮತ್ತು ಹಿಂದೂಗಳ ಉಚ್ಚ ಸಂಸ್ಕೃತಿಯ ಬಗ್ಗೆ ತಮ್ಮ ವಾದಗಳನ್ನು ಮಂಡಿಸಿದ್ದಾರೆ. ಆದರೆ ಶರತ್‌ಚಂದ್ರರ ಕಾಳಜಿ ಸಂಪೂರ್ಣವಾಗಿ ಭಿನ್ನವಾಗಿತ್ತು. ಧಾರ್ಮಿಕ ಅಸ್ಮಿತೆಗಳನ್ನಾಧರಿಸಿ ಸಂಸ್ಕೃತಿಶೀಲರು ಮತ್ತು ಸಂಸ್ಕೃತಿಹೀನರನ್ನು ಗುರುತಿಸುವುದು ಶರತ್‌ಚಂದ್ರರ ಕಾಳಜಿಯಾಗಿತ್ತು. ಸಮಕಾಲೀನ ಉದ್ದೇಶಗಳ ಪೂರೈಕೆಗಾಗಿ ಸಾಂಪ್ರದಾಯಿಕವಾದ ಮ್ಲೇಚ್ಛ ವರ್ಗದ ಪರಿಕಲ್ಪನೆಯನ್ನು ಪುನರುಜ್ಜೀವನಗೊಳಿಸುವುದು ಶರತ್‌ಚಂದ್ರರ ಉದ್ದೇಶವಾಗಿತ್ತು. ಮುಸ್ಲಿಮರನ್ನು ಅಪಾಯಕಾರಿ ಸಮುದಾಯವೆಂದು ಬಿಂಬಿಸುವ ಮೂಲಕ ಸಾಮಾಜಿಕ ತಾರತಮ್ಯಕ್ಕೆ ಅವಕಾಶ

ಸಂಗ್ರಹಾನುವಾದ

**ನಾ. ದಿವಾಕರ**

**ಸಂಸ್ಕೃತಿಯ ಅರ್ಥವನ್ನು ಗ್ರಹಿಸಲು ಅಗತ್ಯವಾದ ಪರಿಶೋಧನೆಗೆ ಸಾಂಸ್ಕೃತಿಕ ಸಂಕೀರ್ಣತೆ ಮತ್ತು ಸಾಪೇಕ್ಷತೆಯನ್ನು ಪರಿಗಣಿಸುವ ವಿಧಿವಿಧಾನಗಳು ಪ್ರಮುಖವಾಗುತ್ತವೆ. ಪ್ರಾಯೋಗಿಕ ಮತ್ತು ವಿವರಣಾತ್ಮಕ ವಿಧಾನಗಳು ಬಹಳ ವರ್ಷಗಳ ಕಾಲ ಚಾಲ್ತಿಯಲ್ಲಿದ್ದರೂ, ಸಾಂಸ್ಕೃತಿಕ ಆಚರಣೆಗಳ ವಿವರಣೆಗಳನ್ನು ಮೀರಿ ಪರಿಶೋಧನೆ ನಡೆಸಿರಲಿಲ್ಲ. ತತ್ಪರಿಣಾಮವಾಗಿ ಈ ವಿಧಾನವನ್ನು ಅನುಸರಿಸಿದವರು ಸಂಸ್ಕೃತಿಯ ಅರ್ಥವನ್ನೇ ಗ್ರಹಿಸದೆ ಹೋದರು. ಪ್ರಾರಂಭಿಕ ಹಂತದ ಮಾರ್ಕ್ಸ್‌ವಾದಿ ವಿಧಾನದಲ್ಲಿ ಸಂಸ್ಕೃತಿಯನ್ನು ಉತ್ಪಾದಕ ಶಕ್ತಿಗಳ ರಚನೆಯಲ್ಲಿನ ಆರ್ಥಿಕ ತಳಹದಿಯ ಉಪಲಕ್ಷಣದಂತೆ ಪರಿಗಣಿಸಿದ್ದರಿಂದ ಸಾಂಸ್ಕೃತಿಕ ಅಸ್ತಿತ್ವದ ಸಂಕೀರ್ಣತೆಗಳನ್ನು ಶೋಧಿಸುವಲ್ಲಿ ವಿಫಲವಾಗಿತ್ತು. ೨೦ನೆಯ ಶತಮಾನದ ಮಧ್ಯಭಾಗದಲ್ಲಿ ಮಾರ್ಕ್ಸ್‌ವಾದಿ ಚಿಂತನೆಯಲ್ಲಿ ಒಂದು ಸಾಂಸ್ಕೃತಿಕ ತಿರುವು ವ್ಯಕ್ತವಾಗಿದ್ದು ಹೊಸ ಮಾದರಿಯ ಬದಲಾವಣೆಗೆ ಎಡೆಮಾಡಿಕೊಟ್ಟಿತ್ತು.**

ಕಲ್ಪಿಸಿಕೊಡುವುದು ಒಂದು ಉದ್ದೇಶವಾದರೆ, ಗಾಂಧೀಜಿಯವರು ಪ್ರತಿಪಾದಿಸುತ್ತಿದ್ದ ಹಿಂದು-ಮುಸ್ಲಿಂ ಐಕ್ಯತೆಯನ್ನು ನಗಣ್ಯಗೊಳಿಸುವ ರಾಜಕೀಯ ಯೋಜನೆ ಮತ್ತೊಂದು ಉದ್ದೇಶವಾಗಿತ್ತು. ಶರತ್ ಚಂದ್ರರ ಅಭಿಪ್ರಾಯದಲ್ಲಿ ಹಿಂದು-ಮುಸ್ಲಿಂ ಐಕ್ಯತೆ ಅಸಾಧ್ಯ ಮಾತ್ರವಲ್ಲದೆ ಅಸ್ವಾಭಾವಿಕವೂ ಆಗಿತ್ತು. ಹಿಂದು-ಮುಸ್ಲಿಂ ಐಕ್ಯತೆ ಎಂಬ ಮರೀಚಿಕೆಯನ್ನು ಹಿಂಬಾಲಿಸುವ ಬದಲು, ಹಿಂದೂಗಳ ಒಂದು ವರ್ಗವನ್ನು ಕೆಳಜಾತಿಗಳೆಂದು ಪರಿಗಣಿಸುವ ವ್ಯವಸ್ಥೆಯನ್ನು ತೊಡೆದುಹಾಕುವ ಮೂಲಕ ಹಿಂದೂ ಸಮುದಾಯದೊಳಗೇ ಐಕ್ಯತೆಯನ್ನು ಸಾಧಿಸಲು ಶರತ್‌ಚಂದ್ರ ಆಗ್ರಹಿಸಿದ್ದರು. ಈ ರೀತಿ ಹಿಂದು ಮತ್ತು ಮುಸ್ಲಿಂ ಸಮುದಾಯಗಳು ಐಕ್ಯತೆಯನ್ನು ಸಾಧಿಸುವ ಸಾಧ್ಯತೆಗಳನ್ನು ಅಲ್ಲಗಳೆಯುತ್ತಲೇ, ಹಿಂದೂ ಸಮುದಾಯದೊಳಗೇ ಐಕಮತ್ಯವನ್ನು ಸಾಧಿಸುವ ತಮ್ಮ ಪ್ರತಿಪಾದನೆಯ ಮೂಲಕ ಶರತ್‌ಚಂದ್ರರು ಕೋಮುವಾದಿ ಪ್ರಜ್ಞೆ ಬೇರೂರುವಂತೆ ಮಾಡಲು ಹಾದಿಯನ್ನು ಸುಗಮಗೊಳಿಸಿದ್ದರು.

ಹತ್ತೊಂಬತ್ತನೆಯ ಶತಮಾನದಲ್ಲೇ ಉಗಮಗೊಂಡ ಕೋಮುವಾದಿ ಸಂಕಥನಗಳಿಗೆ ಹಿಂದು-ಮುಸ್ಲಿಮರ ನಡುವಿನ ವಿಭಿನ್ನತೆಗಳಾಗಲೀ, ಸಾಮುದಾಯಿಕ ಕ್ರೋಡೀಕರಣದ ಪರಿಕಲ್ಪನೆಗಳಾಗಲೀ ಹೊರತಾಗಿರಲಿಲ್ಲ. ಆದಾಗ್ಯೂ ಶರತ್‌ಚಂದ್ರರ ಪ್ರತಿಪಾದನೆಗಳು ಎರಡು ಕಾರಣಗಳಿಗಾಗಿ ಮಹತ್ವ ಪಡೆದಿದ್ದವು. ಮೊದಲನೆಯದಾಗಿ, ಸಾವರ್ಕರ್ ಪ್ರತಿಪಾದಿಸಿದಂತೆ ಮುಸ್ಲಿಮರನ್ನು ಸಾಂಸ್ಕೃತಿಕ ವಿಭಿನ್ನತೆಯ ಆಧಾರದ ಮೇಲೆ ರಾಷ್ಟ್ರದ ಕಲ್ಪನೆಯಿಂದ ಹೊರಗಿಡದೆ, ಸಂಸ್ಕೃತಿಹೀನರೆಂಬ ಕಾರಣಕ್ಕೆ ಅನ್ಯರೆಂದು ಪರಿಗಣಿಸಲಾಗಿತ್ತು. ಎರಡನೆಯದಾಗಿ, ಧರ್ಮ ಮತ್ತು ಸಂಸ್ಕೃತಿಯ ಅಸ್ಮಿತೆಗಳನ್ನಾಧರಿಸಿದ ಸಾಂಸ್ಕೃತಿಕ ವಿಶ್ವಾಸಾರ್ಹತೆ ಹೊಸ ಆಕ್ರಮಣಶೀಲ ಕೋಮುವಾದದ ಉಗಮಕ್ಕೆ ನಾಂದಿ ಯಾಗಿತ್ತು. ಶರತ್‌ಚಂದ್ರರ ಪ್ರತಿಪಾದನೆಗಳು ಅಪಭ್ರಂಶಗಳಲ್ಲ, ಬದಲಾಗಿ ಹತ್ತೊಂಬತ್ತನೆಯ ಶತಮಾನದಲ್ಲೇ ಉಗಮಗೊಂಡ ಕೋಮುವಾದಿ ಸಂಕಥನಗಳಲ್ಲಿ ಅಂತರ್ಗತವಾಗಿದ್ದ ದ್ವೇಷ ಮತ್ತು ತಾರತಮ್ಯ ನೀತಿಗಳ ಸುಧಾರಿತ ರೂಪವಾಗಿ ವ್ಯಕ್ತವಾಗಿದ್ದವು. ಇಂದಿಗೂ ಸಮಾಜದ ಒಂದು ವರ್ಗದಲ್ಲಿ ಸಮೂಹ ಪ್ರಜ್ಞೆಯನ್ನು ರೂಪಿಸುವಲ್ಲಿ ಈ ಪ್ರತಿಪಾದನೆಗಳು ಪ್ರಭಾವ ಬೀರುತ್ತಲಿವೆ.

ಭಾರತೀಯ ಸಮಾಜವು ಐತಿಹಾಸಿಕವಾಗಿ ರೂಪಿಸಿಕೊಂಡಿರುವ ಸೆಕ್ಯುಲರ್ ಸಾಂಸ್ಕೃತಿಕ ಪರಿಕಲ್ಪನೆಯನ್ನು ಅಲ್ಲಗಳೆಯುವುದೇ ಕೋಮುವಾದಿ ಸಾಂಸ್ಕೃತಿಕ ತರ್ಕದ ಮೂಲ ಉದ್ದೇಶವಾಗಿದೆ. ಈ ಪ್ರಕ್ರಿಯೆಯಲ್ಲಿ ಸಮುದಾಯಗಳ ಸಾಮಾಜಿಕ ಐಕ್ಯತೆಯಿಂದ ಸೃಷ್ಟಿಯಾಗಿದ್ದ ವೈವಿಧ್ಯತೆಯನ್ನು ನಿರ್ಲಕ್ಷಿಸಲಾಗಿದೆ. ಈ ವೈವಿಧ್ಯತೆಯ ಪರಿಧಿಯಲ್ಲಿ ಜನರ ಸೃಜನಶೀಲತೆ ಮತ್ತು ತಾತ್ವಿಕತೆಯನ್ನು ಮಾತ್ರವಲ್ಲದೆ ವಿವಿಧ ಸಾಂಸ್ಕೃತಿಕ ಆಚರಣೆಗಳೂ ಅಂತರ್ಗತವಾಗಿದ್ದವು. ತತ್ಫಲವಾಗಿ ಸಂಯೋಜನೆ, ಸಮೀಕರಣ, ಸಂಸ್ಕೃತಿಗ್ರಹಣ, ಹೃದಯವೈಶಾಲ್ಯತೆ ಮತ್ತುಎಲ್ಲಕ್ಕಿಂತಲೂ ಮುಖ್ಯವಾದ ಜನರ ವಿಭಿನ್ನ ಜೀವನ ಶೈಲಿಯ ವಿವಿಧ ಸಾಂಸ್ಕೃತಿಕ ಪ್ರಕ್ರಿಯೆಗಳು ಉಗಮಗೊಂಡವು.

ಈ ಪ್ರಕ್ರಿಯೆಗಳು ಪ್ರತ್ಯೇಕವಾಗಿ ರೂಪುಗೊಳ್ಳದೆ ವಿವಿಧ ಮಜಲುಗಳಲ್ಲಿ ಸಂಯೋಜಿತವಾಗಿ ಪ್ರಕಟಗೊಳ್ಳುವ ಮೂಲಕ ವಿಶಾಲ ಭಾರತೀಯ ಸಂಸ್ಕೃತಿಯ ಲಕ್ಷಣಗಳಲ್ಲಿ ಪರ್ಯವಸಾನ ಹೊಂದಿತೆಂದು ಹೇಳಬಹುದು. ಈ ಪ್ರಕ್ರಿಯೆಯ ಒಂದು ಪರಿಣಾಮವೆಂದರೆ ಪ್ರತಿಯೊಂದು ಧಾರ್ಮಿಕ ಸಮುದಾಯದ ದೈನಂದಿನ ಜೀವನದ ಆಚರಣೆಗಳಲ್ಲಿ ಮತ್ತು ಸೃಜನಶೀಲ ಸಂವೇದನೆಗಳಲ್ಲಿ ವೈವಿಧ್ಯಮಯ ಸಂಸ್ಕೃತಿ ವ್ಯಕ್ತವಾಗತೊಡಗಿತು. ಅರ್ಥಾತ್ ಧಾರ್ಮಿಕ ಸಮುದಾಯಗಳು ಮತ್ತು ಸಾಂಸ್ಕೃತಿಕ ಸಮುದಾಯಗಳು ಸಮಾನವಾಗಿರಲಿಲ್ಲ. ಈ ಸಮುದಾಯಗಳ ಎಲ್ಲೆಗಳ ನಡುವೆ ಸಾಮ್ಯತೆಯಾಗಲಿ ಅತಿಕ್ರಮಣವಾಗಲಿ ಕಂಡುಬರುತ್ತಿರಲಿಲ್ಲ. ಹಾಗಾಗಿ ಭಾರತೀಯ ಸಮಾಜದ ಐತಿಹಾಸಿಕ ಅನುಭವಗಳ ಹಿನ್ನೆಲೆಯಲ್ಲಿ ಕೋಮುವಾದಿ ಸಾಂಸ್ಕೃತಿಕ ವ್ಯಾಖ್ಯಾನಗಳು ವಿರೋಧಾತ್ಮಕವಾಗಿ ಭಾಸವಾಗುತ್ತವೆ. ಕೋಮುವಾದವು ಮುಂದಿರಿಸಿದ ಸಂಸ್ಕೃತಿಯ ವ್ಯಾಖ್ಯಾನವು ಭಾರತೀಯ ಸೆಕ್ಯುಲರ್ ಸಾಂಸ್ಕೃತಿಕ ಜೀವನವನ್ನು ಅಲ್ಲಗಳೆಯುವುದೇ ಆಗಿದೆ. ಸಮುದಾಯದ ಒಳಗೇ ವ್ಯಕ್ತವಾಗುವ ಸಾಂಸ್ಕೃತಿಕ ವೈವಿಧ್ಯತೆಗಳನ್ನು ಪರಿಗಣಿಸುವಲ್ಲಿಯೂ ಈ ವ್ಯಾಖ್ಯಾನವು ವಿಫಲವಾಗಿದೆ.

ಸಂಸ್ಕೃತಿಯ ಅರ್ಥವನ್ನು ಗ್ರಹಿಸಲು ಅಗತ್ಯವಾದ ಪರಿಶೋಧನೆಗೆ ಸಾಂಸ್ಕೃತಿಕ ಸಂಕೀರ್ಣತೆ ಮತ್ತು ಸಾಪೇಕ್ಷತೆಯನ್ನು ಪರಿಗಣಿಸುವ ವಿಧಿವಿಧಾನಗಳು ಪ್ರಮುಖವಾಗುತ್ತವೆ. ಪ್ರಾಯೋಗಿಕ ಮತ್ತು ವಿವರಣಾತ್ಮಕ ವಿಧಾನಗಳು ಬಹಳ ವರ್ಷಗಳ ಕಾಲ ಚಾಲ್ತಿಯಲ್ಲಿದ್ದರೂ, ಸಾಂಸ್ಕೃತಿಕ ಆಚರಣೆಗಳ ವಿವರಣೆಗಳನ್ನು ಮೀರಿ ಪರಿಶೋಧನೆ ನಡೆಸಿರಲಿಲ್ಲ. ತತ್ಪರಿಣಾಮವಾಗಿ ಈ ವಿಧಾನವನ್ನು ಅನುಸರಿಸಿದವರು ಸಂಸ್ಕೃತಿಯ ಅರ್ಥವನ್ನೇ ಗ್ರಹಿಸದೆ ಹೋದರು. ಪ್ರಾರಂಭಿಕ ಹಂತದ ಮಾರ್ಕ್ಸ್‌ವಾದಿ ವಿಧಾನದಲ್ಲಿ ಸಂಸ್ಕೃತಿಯನ್ನು ಉತ್ಪಾದಕ ಶಕ್ತಿಗಳ ರಚನೆಯಲ್ಲಿನ ಆರ್ಥಿಕ ತಳಹದಿಯ ಉಪಲಕ್ಷಣದಂತೆ ಪರಿಗಣಿಸಿದ್ದರಿಂದ ಸಾಂಸ್ಕೃತಿಕ ಅಸ್ತಿತ್ವದ ಸಂಕೀರ್ಣತೆಗಳನ್ನು ಶೋಧಿಸುವಲ್ಲಿ ವಿಫಲವಾಗಿತ್ತು.

**ಹಾಡಹಗಲೇ ದರೋಡೆ, ಸಿಬ್ಬಂದಿ ಮೇಲೆ ಹಲ್ಲೆ**




**ಹೊರಗೆ ಸಂಚಾರದಲ್ಲಿ ಮಾತ್ರ ಹೆಲ್ಮೆಟ್ ಅಲ್ಲ, ಒಳಗಡೆ ಆಫೀಸ್‌ನಲ್ಲೂ ಹಾಕಿಕೊಳ್ಳುವ ಸಂದರ್ಭ ಬಂದಿದೆ... ಕಣ್ರೀ!?**

೨೦ನೆಯ ಶತಮಾನದ ಮಧ್ಯಭಾಗದಲ್ಲಿ ಮಾರ್ಕ್ಸ್‌ವಾದಿ ಚಿಂತನೆಯಲ್ಲಿ ಒಂದು ಸಾಂಸ್ಕೃತಿಕ ತಿರುವು ವ್ಯಕ್ತವಾಗಿದ್ದು ಹೊಸ ಮಾದರಿಯ ಬದಲಾವಣೆಗೆ ಎಡೆಮಾಡಿಕೊಟ್ಟಿತು. ಹಾಗಾಗಿ ಮಾರ್ಕ್ಸ್‌ವಾದಿ ಚಿಂತಕರು ಸಾಂಸ್ಕೃತಿಕ ಉತ್ಪಾದನೆಯ ಸ್ವಾಯತ್ತತೆಯನ್ನು ಮಾನ್ಯಮಾಡಿದ್ದೇ ಅಲ್ಲದೆ ಎಲ್ಲ ರೀತಿಯ ಸಾಮಾಜಿಕ ಪ್ರಜ್ಞೆಯನ್ನೂ ಮಾನ್ಯಮಾಡಿದ್ದರು. ಈ ರೀತಿಯ ಬದಲಾವಣೆಯ ಹರಿಕಾರರಾದ ಇತಿಹಾಸಕಾರರು ಗತ ಇತಿಹಾಸದ ಪರಿಶೋಧನೆಯಲ್ಲಿ ಐತಿಹಾಸಿಕ ಭೌತವಾದವನ್ನು ತೊಡಗಿಸಿಕೊಳ್ಳುವ ಮೂಲಕ ಅನ್ಯಮಾರ್ಗವನ್ನು ಅನುಸರಿಸಿದ್ದೇ ಅಲ್ಲದೆ ನಿರಂತರತೆಯನ್ನೂ ಕಾಪಾಡಿಕೊಂಡಿದ್ದರು. ಇತಿಹಾಸದ ವಿಶ್ಲೇಷಣೆಯಲ್ಲಿ ಹೊಸ ಮಾರ್ಗವನ್ನು ಅನುಸರಿಸಿದ್ದು ಅನ್ಯಮಾರ್ಗದ ಕುರುಹಾದರೆ, ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರ ಪರಂಪರೆಯನ್ನು ಮುಂದುವರೆಸಿದುದು ನಿರಂತರತೆಯ ಕುರುಹಾಗಿತ್ತು. ಈ ರೀತಿಯಲ್ಲಿ ರೂಪಿಸಿ, ಆಚರಣೆಗೆ ತರಲಾದ ವಿಧಾನದಲ್ಲಿ ಕೋಸಾಂಬಿಯವರು ಮೇಲ್‌ವಿನ್ಯಾಸ ಮತ್ತು ತಳವಿನ್ಯಾಸದ ನಡುವೆ ಇರುವ ಗತಿತಾರ್ಕಿಕ ಸಂಬಂಧಗಳ ಶಿಷ್ಟಾಚಾರದ ಪರಿಧಿಯಲ್ಲೇ ಮೇಲ್‌ವಿನ್ಯಾಸದ ಸ್ವಾಯತ್ತತೆಯನ್ನು ಗುರುತಿಸಿದ್ದರು.

ಭಾರತದ ಮಾರ್ಕ್ಸ್‌ವಾದಿ ವ್ಯಾಖ್ಯಾನಗಳಲ್ಲಿ ಈ ರೀತಿಯ ತಾತ್ವಿಕ ಸಂವೇದನೆಯಿಂದ ಕೂಡಿದ ತಿರುವು ಸಂಭವಿಸಲು ಬಹಳ ಸಮಯ ಬೇಕಾಗಿತ್ತು. ಈ ನಿಟ್ಟಿನಲ್ಲಿ ಜರುಗಿದ ಗಂಭೀರವಾದ ಪ್ರಯತ್ನವನ್ನು ದಾಮೋದರ್ ಕೋಸಾಂಬಿಯವರ ಕೃತಿಗಳಲ್ಲಿ ಕಾಣಬಹುದು. ಅವರು ಅನುಸರಿಸಿದ ಸಂಶೋಧನಾ ವಿಧಿವಿಧಾನಗಳು ಹಾಗೂ ತಾತ್ವಿಕ ಪ್ರತಿಪಾದನೆಗಳು ಭಾರತೀಯ ಇತಿಹಾಸದ ಅಧ್ಯಯನಕ್ಕೆ ಒಂದು ಹೊಸ ಮಾದರಿಯನ್ನೇ ಸೃಷ್ಟಿಸಿತು. ಕೋಸಾಂಬಿಯವರು ತಮ್ಮ ಅಂತರಶಾಸ್ತ್ರೀಯ ಮಾರ್ಗ ಹಾಗೂ ಮಾರ್ಕ್ಸ್‌ವಾದದ ಸೃಜನಶೀಲ ಬಳಕೆಯಿಂದ ಇದನ್ನು ಸಾಧಿಸಲು ಸಾಧ್ಯವಾಗಿತ್ತು. ಕೋಸಾಂಬಿಯವರು ತಮ್ಮ ಅಧ್ಯಯನವನ್ನು ತಳವಿನ್ಯಾಸದಿಂದ ಪ್ರಾರಂಭಿಸದೆ ಮೇಲ್‌ವಿನ್ಯಾಸದಿಂದ ಪ್ರಾರಂಭಿಸಿದ್ದರು. ಆಕರಗಳು ಲಭ್ಯವಾಗದ ಅನಿವಾರ್ಯ ಕಾರಣಗಳಿಗಾಗಿ ಕೋಸಾಂಬಿ ಮಾರ್ಕ್ಸ್‌ವಾದಿ ರೂಪಕಗಳನ್ನು ತಲೆಕೆಳಗುಮಾಡಿದ್ದರು. ಪರಿಣಾಮವಾಗಿ ಹಲವಾರು ಬದಲಾವಣೆಗಳು ಕಂಡುಬಂದವು. ಆರ್ಥಿಕ ನಿಯತಿವಾದ ಮತ್ತು ಪ್ರತಿಫಲನಾ ತತ್ವಗಳು ನಿರಾಕರಿಸಲ್ಪಟ್ಟವು. ಮೇಲ್‌ವಿನ್ಯಾಸ ಮತ್ತು ತಳವಿನ್ಯಾಸಗಳ ನಡುವಿನ ಗತಿತಾರ್ಕಿಕ ಸಂಬಂಧಗಳಿಗೆ ಮಾನ್ಯತೆ ಲಭಿಸಿ ಮೇಲ್‌ವಿನ್ಯಾಸದ ಸ್ವಾಯತ್ತತೆಯನ್ನು ಒಪ್ಪಿಕೊಳ್ಳಲಾಯಿತು. ಅಧಿಕೃತ ಮಾರ್ಕ್ಸ್‌ವಾದದ ಯಾಂತ್ರಿಕ ಧೋರಣೆ ಟೀಕೆಗೊಳಗಾಯಿತು. ಎಲ್ಲಕ್ಕಿಂತಲೂ ಮುಖ್ಯವಾಗಿ ಕೆಲವು ಐತಿಹಾಸಿಕ ವಾಸ್ತವಗಳಿಗೆ ಹೊಂದಾಣಿಕೆಯಾಗದ ಮಾರ್ಕ್ಸ್‌ನ ಕೆಲವು ಪ್ರತಿಪಾದನೆಗಳನ್ನು ಪ್ರಶ್ನಿಸಲಾಯಿತು. ಕೋಸಾಂಬಿಯವರು ಭಾರತೀಯ ಇತಿಹಾಸದ ಅಧ್ಯಯನದಲ್ಲಿ ತಂದ ಸಾಂಸ್ಕೃತಿಕ ಪರಿವರ್ತನೆಯ ಹಿನ್ನೆಲೆಯಲ್ಲಿ ಈ ರೀತಿಯ ಮುಕ್ತತೆ ಮತ್ತು ಬೌದ್ಧಿಕ ಸ್ವಾತಂತ್ರ್ಯವನ್ನು ಕಾಣಬಹುದಿತ್ತು. ತಳವಿನ್ಯಾಸ ಮತ್ತು ಮೇಲ್ ವಿನ್ಯಾಸಗಳ ನಡುವಿನ ಗತಿತಾರ್ಕಿಕ, ಸಂಕೀರ್ಣ ಮತ್ತು

(ಮುಂ. ಪುಟಕ್ಕೆ)




ಒಂದು ಮೇಜು, ಕುರ್ಚಿ, ಒಂದೆರಡು ಸ್ಟೂಲುಗಳಿರುವ ಕೆಳಮಧ್ಯಮವರ್ಗದ ಅಡಿಗೆಮನೆ; ಮಂದವಾದ ಮೊಂಬತ್ತಿ ಬೆಳಕಿನಲ್ಲಿ ಕಣ್ಣಲ್ಲಿ ಕಣ್ಣಿಟ್ಟು ಒಬ್ಬ ಮಧ್ಯವಯಸ್ಸಿನ ಮನುಷ್ಯ ಕೆಲಸ ಮಾಡುತ್ತಿದ್ದಾನೆ. ಅವನ ಹೆಸರು ಜೋ. ಈತ ತನ್ನ ಮಹಾತ್ವಾಕಾಂಕ್ಷೆಯ ನೂಲುವ ಯಂತ್ರದ ನಿರ್ಮಿತಿಯಲ್ಲಿ ತೊಡಗಿದ್ದಾನೆ. ಅವನ ಹೆಂಡತಿಯ ಹೆಸರು ಮೇರಿ. ಉಡಿಯಲ್ಲಿ ಬಿದ್ದ ಬೊಂಬೆಗೊಂದು ಅಂಗಿ ಹೊಲಿಯುತ್ತಿದ್ದಾಳೆ. ಅಗ್ಗಿಷ್ಟಿಕೆ ನಿಗಿನಿಗಿ ಉರಿಯುತ್ತಿರುವಂತೆಯೇ ಜೋನ ಮನಸ್ಸುಕೂಡ ದುಮುಗುಡುತ್ತಿದೆ. ಮುಖದ ಮೇಲೆ ಸಾಲುಗಟ್ಟಿದ ಬೆವರ ಹನಿಗಳು. ದೀರ್ಘವಾದ ಉಸಿರು ಬಿಟ್ಟು ಮುಂಗೈಯಿಂದ ಬೆವರೊರೆಸಿಕೊಳ್ಳುತ್ತಾನೆ, ಜೋ.

''ನಿಮಗ ಸುಸ್ತಾಗೇತಿ, ರಾತ್ರಿನೂ ಬಾಳಾಗೇತಿ ಮಲಕೋಬಾರದಾ ?'' ಚಿಂತಿತಳಾದ ಮೇರಿಯ ಈ ಮಾತಿಗೆ ವ್ಯಗ್ರನಾಗಿ ಉತ್ತರಿಸುತ್ತಾನೆ ಜೋ.

''ನಾನು ಮಲಕೊಂಡರ ನನ್ನ ಕೆಲಸಾ, ನನ್ನ ಕನಸಾ ಎರಡೂ ಮಲಕೊಂಡಬಿಡ್ತಾವ, ನೀನು ಮಲಕೊ. ನಾನು ಈ ಯಂತ್ರ ತಯಾರಿ ಮಾಡಿದ ನಂತರನs ಮಲಕೊಳ್ಳೂದು.''

''ಹಗಲಹೊತ್ತು ಈ ಕೆಲಸಾ ಮಾಡಿದರ ಆಗೂದಿಲ್ಲೇನು ?''

''ಯಾಕ, ನನ್ನ ಎಲುಬು – ತೊಗಲ ಗಟ್ಟಿ ಆಗಿರೂದು ನಿನಗ ಬೇಕಾಗಿಲ್ಲೇನು ?''

''ಅಪಶಕುನ ಯಾಕ ನುಡಿಯೋದು ಅಂತ...''

''ಮತ್ತಿನ್ನೇನು ? ನಾನು ಬದುಕಿ ಉಳೀಬೇಕಾದರ ಈ ಕೆಲಸಾನ ಗುಟ್ಟಾಗೇ ಮಾಡಬೇಕು ಅಂತ ನಿನಗ ಗೊತ್ತಿಲ್ಲೇನು ಮೇರಿ ?''

''ಅಲ್ಲಾ, ಜನರಿಗ್ಯಾಕ ಹೆದರಬೇಕು ? ಅವರು ಮೂರ್ಖರದಾರ...''

''ಇಲ್ಲ ಮೇರಿ. ಅವರು ಮೂರ್ಖರಲ್ಲ. ಅವರು ನನಗ ಹೆದರಿಸತ್ತಾರ, ನಾನು ಅವರ ತಾಟಿನೊಳಗಿನ ರೊಟ್ಟಿ, ಅವರ ಮಕ್ಕಳ ತುಟೀಮ್ಯಾಲಿನ ಹಾಲಹನಿ ಕಸಗೊಂತೀನಿ ಅನ್ನೂ ಭಯಾ ಅವರಿಗೆ.''

''ಮತ್ತ ಈ ಯಂತ್ರ ಅವರ ಕೆಲಸಾ ಹಗುರ ಮಾಡ್ತದ, ಹೆಚ್ಚು ಹಣಾ ತಂದುಕೊಡ್ತದ ಅಂತಿದ್ರೆಲ್ಲ ?''

''ಅದೇನ ಸುಳ್ಳೇನು ? ಒಂದು ಗಂಡಾಳು ಅಲ್ಲ, ಹೆಣ್ಣಾಳು ಸಹಿತ ಒಂದs ಸಾರಿಗೆ ನೂರು ಎಳಿ ನೂಲಬಹುದು...''

ಜೋಗೆ ತನ್ನ ಯಂತ್ರದ ಮೇಲೆ ಎಲ್ಲಿಲ್ಲದ ಅಭಿಮಾನ. ''ಮತ್ತ ಅದಕ್ಕ, ಅವರ ಹೊಟ್ಟಿ ಉರೀತದ. ಅವರ ಕೂಲಿ, ಅವರ ವ್ಯಾಳೆ ಎರಡನ್ನೂ ಕಸಗೊಂಡಂಗಾತಲ್ಲ ನಿಮ್ಮ ಈ ಯಂತ್ರ ! ಮಕ್ಕಳು, ಹೆಣ್ಣಮಕ್ಕಳು ಯಾರಿಗೂ ಕೆಲಸ ಇಲ್ಲದಂಗಾಗ್ತದ.''

''ಆತಂಕ ಯಾಕ ಪಡತಿ ಮೇರಿ. ಹಾಲುಗಲ್ಲದ ಮಕ್ಕಳು, ಹಗಲು-ರಾತ್ರಿ ನೂಲೂದು ನನಗ ಬ್ಯಾಡಾಗೇತಿ. ಈಗ ನನ್ನs ನೋಡು. ಚಿಕ್ಕಂದಿನೊಳಗ ಹಗಲ ಹನ್ನೆರಡು ತಾಸ ದುಡದದ್ದಕ್ಕ ನನ್ನ ಬೆನ್ನ ಬಾಗೇತಿ, ಕಾಲು ಡೊಂಕಾಗ್ಯಾವ, ಕಣ್ಣು ಮಂಜಾಗ್ಯಾವ.'' ಚಳಿಯಲ್ಲಿ ನಸುಕಿನ ಐದುಗಂಟೆಗೂ ಮೊದಲು ಎದ್ದು ಗಡಗಡ ನಡುಗುತ್ತ ಗುಸು, ಗುಸು ಕೆಮ್ಮುತ್ತ ಕೆಲಸಕ್ಕೆ ಹೋಗುವ ಮಕ್ಕಳ ಸ್ಥಿತಿ ಕಂಡು ಮಮ್ಮಲ ಮರುಗಿ ಈ ಯಂತ್ರದ ಶೋಧನೆಗೆ ತೊಡಗಿದ್ದಾಗಿ ತಿಳಿಹೇಳುತ್ತಾನೆ ಜೋ.

ಮೇರಿಗೂ ಇವನ ಕೆಲಸದ ಹಿಂದಿನ ಸತ್ಯ ಅರಿವಾಗಿ ಸಮಾಧಾನದ ನಿಟ್ಟುಸಿರು ಬಿಟ್ಟು..

''ದೇವರು ದೊಡ್ಡಾಂವ ಅದಾನ, ನಮ್ಮ ಮಕ್ಕಳ್ನ ಸಾಲೀಗಿ ಕಳಸುವಷ್ಟರೆ ಶಕ್ತಿ ಕೊಟ್ಟಾನ'' ಎಂದಾಗ ಜೋನ ಶಕ್ತಿ ಇಮ್ಮಡಿಸುತ್ತದೆ... ತನ್ನ ಯಂತ್ರ ಎಲ್ಲಾ ಕಡೆ ಅಳವಡಿಸಿಬಿಟ್ಟರೆ... ಮಕ್ಕಳು ಕೆಲಸ ಮಾಡಬೇಕಿಲ್ಲ. ಚನ್ನಾಗಿ ನಿದ್ರೆ ಮಾಡಬಹುದು. ಸಾಕಷ್ಟು ಸಮಯ ಆಟದಲ್ಲಿ ಕಳೆಯಬಹುದು, ಸಪುಷ್ಟವಾಗಿ ಬೆಳೆಯಬಹುದು; ತನ್ನ ಹಾಗೆ ಗೂನುಬೆನ್ನು, ಸೊಟ್ಟಗಾಲಿನವರಾಗಬೇಕಿಲ್ಲ ಎಂಬ ಸಮಜಾಯಿಷಿ ನೀಡುತ್ತಾನೆ. ಅತ್ಯಂತ ಭಾವುಕನಾಗಿ ಜೋ ಆಡಿದ ಮಾತುಗಳಲ್ಲಿ ತನ್ನ ಕನಸನ್ನು ಸತ್ಯವಾಗಿಸುವ ಸಂಕಲ್ಪವಿದ್ದರೂ ಮೇರಿಗೆ ಇದು ಬರಿ ಕನಸು ಎನ್ನಿಸುತ್ತದೆ.

''ನೀವು 'ಬ್ಯಾಡ, ಮಕ್ಕಳು ಕೆಲಸಾ ಮಾಡಬಾರದು' ಅಂದರ ಕಾರಖಾನಿ ಮಾಲೀಕರು ಬಿಟ್ಟ ಬಿಡ್ತಾರೇನು ? ಮಕ್ಕಳು ಕಡಿಮಿಕೂಲಿಯೊಳಗ ಹೆಚ್ಚು ಕೆಲಸಾ ಮಾಡ್ತಾರ, ಕೂಲಿ ಆಸೇಕ ಅವರ ಅಪ್ಪಾ-ಅವ್ವಾ ಕಣ್ಣ ಮುಚ್ಚಿ ಕೆಲಸಕ್ಕ ಕಳಸ್ತಾರ'' ಎನ್ನುತ್ತಾಳೆ ಮೇರಿ. ''ಅದಕ್ಕs ಹೇಳಿದ್ದು ಈ ದೊಡ್ಡಮನುಷ್ಯರು ನನ್ನ ಸೊಂಟಾ ಮುರೀತಾರ ಅಂತ. ಆದರ ನನ್ನ ಯಂತ್ರ ಕೆಲಸಾ ಮಾಡಾಕ ಹತ್ತಿದರ... ಈ ಮಕ್ಕಳು ತಣ್ಣಗಿರ್ತಾರ.''

''ಅದೆಲ್ಲಾ ಖರೆ, ಆದರ...''

''ಆದರ ಅಂತ ಸಂಶಯ ಯಾಕ ?''

''ಅದೇನದೂ ? ಏನೋ ಸಪ್ಪಳಾದಂಗಾಯ್ತಲ್ಲ ?''

''ಏನಿಲ್ಲ, ಹೊರಗ ಗಾಳಿ ಜೋರಾಗಿ ಬೀಸಾಕ ಹತ್ತೇದ ಅಷ್ಟs.'' ಜೋ ಸಮಾಧಾನ ಪಡಿಸಿದರೂ ಮೇರಿಗೆ ಜೀವದಲ್ಲಿ ಜೀವವಿರಲಿಲ್ಲ. ಯಾಕೆಂದರೆ ಜನ ಹೆದರಿದ್ದು, ಇವನ ಮೇಲೆ ರೊಚ್ಚಿಗೆದ್ದದ್ದು ಅವಳಿಗೆ ತಿಳಿದಿದೆ. ಇವನಿಗೂ ಈ ಸತ್ಯದ ಅರಿವಿದ್ದರೂ ಈಗ ಬಯ್ಯುವ, ಕ್ರೋಧದಿಂದ ಕುದಿಯುವ ಮಂದಿ ಮುಂದೆ ಕೈತುಂಬ ಹಣ ಸಂಪಾದಿಸುವಾಗ ತನಗೆ ಧನ್ಯವಾದ ಹೇಳುತ್ತಾರೆ ಎಂಬ ನಂಬಿಕೆ ಒಳಗೊಳಗೇ...

'' ಹಾಂಗೇನು ತಿಳಕೊಳ್ಳೂದು ಬ್ಯಾಡ ಜೋ, 'ಊರು ಉಪಕಾರ ಅರೀದು, ಹೆಣಾ ಸಿಂಗಾರ ಅರೀದು' ಅನ್ನೂ ಗಾದೀಮಾತು ಕೇಳಿಲ್ಲೇನು ? ನಮ್ಮ ಮಕ್ಕಳು, ಜಾನಿ, ಆ್ಯನ್ ಇವರ ಭವಿಷ್ಯದ ಬಗ್ಗೆ ನನಗ ಚಿಂತಿ ಆಗೇದ...''

ಪಾಪ ! ಹೆಣ್ಣು-ಹೆಂಗಸು. ತನ್ನ ಬುದ್ಧಿಗೆ ತಿಳಿದಷ್ಟು ಮಾತನಾಡುತ್ತಾಳೆ ಎಂದುಕೊಂಡ ಜೋ ತನ್ನ ಕೆಲಸದಲ್ಲಿ ನಿರತನಾದರೂ ಮೇರಿಯ ಆತಂಕವೇನೂ ಕಡಿಮೆಯಾಗುವುದಿಲ್ಲ.

'ಜೋ'

''ಓ ? ಏನು ಮೇರಿ ?''

''ಮೊನ್ನೆ, ನಮ್ಮ ರಾಟಲಾ ರಿಪೇರಿ ಮಾಡಸಾಕ ಕಂಬಾರ ಮನೀಗೆ ಹೋಗಿದ್ನೆಲ್ಲ, ಆಗ ಆ ಹಾಬ್ ಏನಂದಾ ಗೊತ್ತದೇನು ?''

One Dark Night ಮೂಲ ಆಂಗ್ಲ ನಾಟಕದ ಕರ್ತೃ : **Marian V. Hayes**

ಕನ್ನಡ ರೂಪಾಂತರ : **ಬಿ. ಆರ್. ಪೋಲೀಸ್ ಪಾಟೀಲ**

''ನಿನ್ನ ಗಂಡಾ ಮೂರ್ಖ ಅದಾನ. ಅಂವಗ ಬುದ್ಧಿ ಹೇಳು. ಜನಾ ರೊಚ್ಚಿಗೆದ್ದಾರ, ಏಳ ಬಾರದು ಎದ್ದರ ಅಂವನ್ನ ಆನಿ ಮಿಡಚಿ ತುಳದಂಗ ತುಳದು ಇದ್ದಾರ' ಅಂತ ಹೇಳರಬೇಕು. ಹೌದಲ್ಲ ?''

''ಹೌದು, ಆ ಧಾಂಡಿಗನ ಮಾತು ಕೇಳಿ...''

''ನಿನ್ನ ಎದಿ ಒಡದು ಹೋದಾಗಿರಬೇಕಲ್ಲ? ಹುಚ್ಚಿ ಹಕಿ ಹುಚ್ಚಿ, ಅಂವನ ದೇಹ ಆನಿಯಂಗ ದೊಡ್ಡದು ಆದರ ಅವನ ಮೆದುಳು ಚಟ್ಟಿಯಷ್ಟು ಚಿಕ್ಕದು: ನೀ ಧೈರ್ಯದಿಂದ ಇರು...''

''ಈ ಮೊಂಡು ಧೈರ್ಯ ಒಳ್ಳೇದಲ್ಲ, 'ನಿನ್ನ ಗಂಡ ಮಾಡೋ ಕೆಲಸಾ ನಿಲ್ಸೇ ತೀರ್ತೀವಿ' ಅಂದ ಅಂವಾ.''

''ನನ್ನ ಕೊಂದರೂ ನಾ ಈ ಕೆಲಸಾ ನಿಲ್ಲಸೂದಿಲ್ಲ.''



''ಅವರs ಇಲ್ಲಿಗಿ ಬಂದು ಈ ಯಂತ್ರಾ ಒಡದು ಹಾಕಿದರ... ?''

''ಪಿಸ್ತೂಲದ ನನ್ನ ಹತ್ತರ, ಪಿಸ್ತೂಲು... ಇದ್ನ ಮುಟ್ಟಾಕ ಬಂದವರ್ನ ಸುಟ್ಟು ಹಾಕಿ ಬಿಡ್ತೇನಿ.'' ಇಂವನ ಕಣ್ಣಾಗಿನ ಮಿಂಚು ಎದಿಯೊಳಗಿನ ಸಂಕಲ್ಪ ''ಅಬ್ಬಬ್ಬಾ !'' ಎಂದರೂ ಎಲ್ಲರನ್ನೂ ಎದುರುಹಾಕಿಕೊಂಡು ಈ ಕೆಲಸ ಮುಂದುವರೆಸಿ ಮಕ್ಕಳು ಮೊದಲುಗೊಂಡು ಎಲ್ಲರನ್ನೂ ಗಂಡಾಂತರಕ್ಕೆ ಸಿಲಿಕಿಸುವುದು ಬೇಡವಾಗಿದೆ ಮೇರಿಗೆ. ಮತ್ತೆ ಮತ್ತೆ ತಿಳಿಸಿ ಹೇಳುತ್ತಾಳೆ.

''ನೀ 'ಬ್ಯಾಡ', ಅಂತ ನೂರು ಸಾರಿ ಹೇಳಿದರೂ ನಾ ಬಿಡಾಂವಲ್ಲ, ಮೇರಿ, ನನಗ ಒತ್ತಾಯ ಮಾಡಬ್ಯಾಡ. ಹೊಟ್ಟಿಯೊಳಗಿನ ಕೂಸಿಗೆ ಹೊರಗಬರಬ್ಯಾಡ ಅಂತ ದಿಗ್ಬಂಧನ ಹಾಕೂದು ಎಲ್ಲೀ ನ್ಯಾಯ ! ಈ ಯಂತ್ರ ಒಂದು ಗಳಿಗಿಯೊಳಗ ಮಾಡೂ ಕೆಲಸಾನ ಗಂಡಸರು-ಹೆಂಗಸರು, ಮಕ್ಕಳು- ಮುದುಕರು – ಹಗಲು ರಾತ್ರಿ ಮಾಡೂದನ್ನ ನೋಡೂದು ನನ್ನಿಂದ ಸಾಧ್ಯ ಇಲ್ಲ.'' ''ಅವರಿಗಷ್ಟs ಅಲ್ಲ, ನನಗೂ ನನ್ನ ರಾಟ್ಟದ ಮ್ಯಾಲಿನ ಮೋಹ ಕಡಿಮಿ ಆಗಿಲ್ಲ. ಹಾಂಗ ನೋಡಿದರ ನಿಮ್ಮ ಈ ಯಂತ್ರ ನನಗೂ ಪಸಂದಿಲ್ಲ.''

''ಯಾಕ, ಈಗ ದುಡಿಯೊ ಅವಧಿಯೊಳಗ ದುಪ್ಪಟ್ಟು ಅಲ್ಲ, ಇಪ್ಪತ್ತಪಟ್ಟು ಕೆಲಸಾ ಮಾಡೂದು ಬ್ಯಾಡ ಅಂತೀಯೇನು ? ಎಲ್ಲಾರ ಕಾರಖಾನಿಯೊಳಗ ನನ್ನ ಯಂತ್ರ ಕೂಡ್ರಿಸಿದಾಗ ಝಣಝಣಾಂತ ಬಂಗಾರದ ನಾಣ್ಯ ಹರದು ಬರ್ತಾವ, ನಮ್ಮ ಜಾನಿ, ಆ್ಯನ್ ಇವರಿಗೆಲ್ಲ ಚಂದ - ಚಂದ ಗೊಂಬಿ ಆಡಾಕ ಸಿಗ್ತಾವ; ನೀನು ರಾಣಿ ಹಾಂಗ ಮ್ಯಾಣೇದೊಳಗ ಬರ್ತೀದಿ. ಇಂಥಾ ಭಾಗ್ಯ ಮನೀ ಬಾಗಿಲಿಗೇ ಬಂದರ 'ಬ್ಯಾಡ' ಅಂತೀಯೇನು ?'

''ಈ ಗೊಂದಲಿಗೇರ ಕತಿ ಸಾಕು ಜೋ... ವಾಸ್ತವಕ ಬರ್ರಿ.''

''ಇಲ್ಲ ಮೇರಿ, ಇದು ಕಟ್ಟುಕತಿ ಅಲ್ಲ, ಖರೇ ಹಕೀಕತ್ತು, ಹತ್ತರ ಬಾ ಇಲ್ಲೆ...''

''ಬಂದೆ, ಏನು ?''

''ಈ ಸಣ್ಣ ವಸ್ತು ಇದು ಕಾಣಸ್ತದೇನು ?''

''ಕಾಣಸ್ತದ, ಏನದು ?''

''ಇದು ಇದs ಈಗ ಹುಟ್ಟಿದ ಮಗು, ಇದು ನಮ್ಮ ನಾಳಿನ ನಗು. ಇದಕ್ಕ ಇನ್ನಾ ಹೆಸರ ಇಟ್ಟಿಲ್ಲ. ಆದರ ಇದs ನನ್ನ ಯಂತ್ರದ ಹೃದಯ. ಇದನ್ನ ಬಾಳ ಕಷ್ಟಪಟ್ಟು ಕಂಡು ಹಿಡದೀನಿ; ಇದನ್ನ ತಯಾರ ಮಾಡ್ಲಿಕ್ಕೆ ಹಗಲು - ರಾತ್ರಿ ತಿಂಗಳಗಟ್ಲೆ ದುಡದೀನಿ. ಒಂದಲ್ಲ ಎರಡಲ್ಲ ಹನ್ನೆರಡು ಸಾರೆ ಹರದು ಬಿದ್ದರೂ ಧೈರ್ಯ ಕಳಕೊಂಡಿಲ್ಲ. ಇವತ್ತ ರಾತ್ರಿ ಮತ್ತ ಜೋಡಿಸಿ ನೋಡ್ತೀನಿ. ಇಷ್ಟಕ್ಕs ಬಿಡೂದಿಲ್ಲ.''

''ಓ, ದೇವರು ಒಳ್ಳೇದು ಮಾಡ್ಲಿ ಜೋ...''

''ಹೌದು, ನನ್ನ ಯಂತ್ರದ ಈ ಹೃದಯ ಬಡೀಬೇಕು. ಬಿಡುವಿಲ್ಲದ ದುಡೀಬೇಕು. ಮಕ್ಕಳು ವಿಶ್ರಾಂತಿ ಪಡೀಬೇಕು. ಯಾಕಂದ್ರ ಇದು ಇರದಿದ್ದರ ಇಡೀ ಯಂತ್ರನs ನಿರರ್ಥಕ.''

''ಅಂದರ, ನಿಮ್ಮ ಈ ಯಂತ್ರ ಇವತ್ತ ತಯಾರಾಗೇ ಆಗ್ತದ ಅಂತೀರಿ ?'' ''ಹಿಡದ ಕೆಲಸ ಆಗೂ ತನಕ ನಾನು ನಿದ್ದೀನೂ ಮಾಡೂದಿಲ್ಲ. ನೀರೂ ಕುಡಿಯೂದಿಲ್ಲ.''

''ಓ ಹಾಂಗಿದ್ರ ನಾನೇನಾದ್ರೂ ಸಹಾಯ ಮಾಡ್ಲೇನು ?''

''ಇದಕ್ಕಿಂತ ದೊಡ್ಡ ಸಂಪತ್ತು ಬೇಕೇನು ? ಹೂಂ. ನಿನ್ನ ರಾಟ್ಲೆ ದೊಳಗಿನ ಆ ನೂಲು ಕೊಡು ಇಲ್ಲೆ. ಹಾಂ... ಅಲ್ಲಿ ನಿನ್ನ ಬೆರಳಿಡು... ಜೋರಾಗಿ ಬಿಗದು ಕಟ್ಟು... ಹಾಂ ಹಾಂಗೇ... ಶಾಬ್ಯಾಶ್ ! ಮೇರಿ, ನಾನು ಗೆದ್ದುಬಿಟ್ಟೆ, ನೋಡು ನೋಡಲ್ಲಿ... ನನ್ನ ಯಂತ್ರ ಕೆಲಸಾ ಮಾಡಾಕ ಹತ್ತಿತು. ವಾವ್ !''

ಮಕ್ಕಳಂತೆ ಕುಣಿದಾಡುತ್ತಾನೆ ಜೋ... ಮೇರಿಗೂ ಅಷ್ಟೇ ಸಂತೋಷವಾಗಿದೆ... ಆದರೆ ಜನ ಇದನ್ನು ಸ್ವೀಕರಿಸಿಯಾರೇ ಎಂಬ ಆತಂಕ ಅವಳಿಗೆ.

''ಅಮ್ಮಾ ಅಪ್ಪಾ...''

''ಯಾರು ?''

''ನಾನು, ಜಾನಿ...''

ಅರ್ಧರಾತ್ರಿಯಲ್ಲಿ ಮಗ ಜಾನಿಯ ಧ್ವನಿ ಕೇಳಿ ಬೆಚ್ಚಿಬೀಳುತ್ತಾರೆ, ದಂಪತಿಗಳು... ಅವಸರದಿಂದ ಒಳಗೆ ಬಂದ ಜಾನಿ...: ''ಅಂಗಳದೊಳಗ ನೂರಾರು ಮಂದಿ ಸೇರ್ಯಾರ, ಗುಸು-ಗುಸು ಮಾತಾಡಿಕೊಳ್ಳಾಕ ಹತ್ಯಾರ.''

''ಹೌದ ? ಜಾನಿ, ಇದು ಖರೇವೇನು ?''

''ಹೌದಮ್ಮಾ, ಅಪ್ಪಾ, ಅವರಿಗೇನು ಬೇಕು ? ಏನಿದರ ಅರ್ಥ ?''

''ಕಿಡಿಗೇಡಿತನ ! ಸೊಕ್ಕು ಮತ್ತಿನ್ನೇನು ? ನಾನು ಮತ್ತ ನನ್ನ ಈ ಯಂತ್ರಾನ ಬಲಿ ತೊಗೊಳ್ಳಿಕ್ಕೆ ಬಂದಾರ ಇಲ್ಲೆ.''

''ಜಾನಿ, ಓಡಿಹೋಗಿ ಪೊಲೀಸರ್ನ ಕರಕೊಂಡು ಬಾ'' ಎನ್ನುತ್ತಾಳೆ ಮೇರಿ. ಆದರೆ ಇಷ್ಟೊತ್ತಿಗಾಗಲೇ ಜನ ಒಳಗೆ ಬಂದಾಗಿದೆ. ತಾಯಿ ಮಕ್ಕಳ ಎದೆ ಡವಗುಟ್ಟುತ್ತಿವೆ. ಜೋಗೆ ತನ್ನ ಯಂತ್ರ ಉಳಿಸಿಕೊಳ್ಳುವ ತವಕ... ಶತಪಥ ಹಾಕುತ್ತಿದ್ದಾನೆ.

''ಅಪ್ಪಾ, ಈಗೇನು ಮಾಡೂದು ?''

''ಜಾನಿ, ಆ ಶೆಲ್ಫ್‌ನೊಳಗ ಪಿಸ್ತೂಲು ಅದ. ಅದನ್ನ ನನಗ ತಂದ ಕೊಡು. ನನ್ನ ಯಂತ್ರಾ ಮುಟ್ಟಲಿ ಅವರು, ಅವರ್ನೆಲ್ಲ ಸುಟ್ಟಬಿಡ್ತೇನಿ.''

''ಬ್ಯಾಡ ಜೋ, ನೀವು ಮೊದಲs ಸ್ವಸ್ಥ ಇಲ್ಲ, ನಿದ್ದೆಗೆಟ್ಟೀರಿ. ನೀವು ಒಳಗ ಹೋಗಿ ಮಲಕೊಳ್ರಿ, ನಾ ಅವರಕೂಡ ಮಾತಾಡ್ತೀನಿ.'' ''ಏನು, ನಾನು ಹೇಡಿ ಹಾಂಗ ಒಳಗ ಹೋಗಿ ಮಲಕೊಳ್ಳೂದು ? ಅಷ್ಟು ಅಶಕ್ತ ಅದೀನೇನ್ ನಾನು ?''

''ಶಕ್ತಿಗಿಂತ ಯುಕ್ತಿ ದೊಡ್ಡದು. ಈಗ ನಾ ಹೇಳಿದಂಗ ಕೇಳ್ರಿ... ಜಾನಿ, ನೀನು ಆ ಕಿಡಕಿ ಹತ್ತಿರ ಹೋಗು. ಅವರೇನ ಮಾಡಾಕ ಹತ್ಯಾರ ನೋಡು. ಈ ಕಡೆ ಬರಾಕ ಹತ್ತಿದರ ಕೂಗಿ ಹೇಳು.'' ಎಲ್ಲರ ಮನಸ್ಸಿನಲ್ಲೂ ದುಗುಡ, ಆತಂಕ... ಜಾನಿ ಕಿಡಕಿಯತ್ತ ಓಡುತ್ತಾನೆ... ಜೋ ಕೂಡ ಓಡಲು ಹೋಗಿ ಬಿದ್ದಾಗ ಮೇರಿಗೆ ಗಾಬರಿ ''ಬ್ಯಾಡ ಜೋ, ಇಂಥಾ ಸಾಹಸಾ ಮಾಡಬ್ಯಾಡ್ರಿ, ನಿಮ್ಮ ಯಂತ್ರದ ಹೃದಯ. ಆ ಕದಿರು... ಹಾಂ ಇದಕ್ಕ 'ಕದಿರು' ಅಂತ ಕರೀಬಹುದಲ್ಲ ?''

''ಹೌದು, ಒಳ್ಳೇ ಹೆಸರು, ಹಂಗೇ ಕರಿಯೋಣು...''

''ಅದನ್ನ ನನ್ನ ಕೈಯಾಗ ಕೊಡ್ರಿ, ನಾನು ಹೋಗಿ ಕಿಂಡಿಯೊಳಗ ಇದನ್ನ ಮುಚ್ಚಿ ಇಡ್ತೀನಿ...ನೀವು ಮಲಕೋ ಹೋಗ್ರಿ...'' ''ಅವರು ಮೊದಲ ಅದನ್ನs ಹುಡುಕ್ತಾರ, ಅಲ್ಲೇ ಹುಡಕತಾರ. ಅದ್ನು ಅಲ್ಲಿ ಇಡೂದು ಸುರಕ್ಷಿತ ಅಲ್ಲ.''

''ಮತ್ತ ಇನ್ನೆಲ್ಲಿ ಇಡಬೇಕು ?... ಹಾಂ... ನನ್ನ ಮಗಳ ಈ ಆಟದ ಗೊಂಬಿಯೊಳಗ ಅಡಗಿಸಿ ಇಟ್ಟರಾತು. ಅವರು ಇದರೊಳಗ ಹುಡಕೂಗೋಜಿಗೆ ಹೋಗೂದಿಲ್ಲ. ಹೌದು. ಇದೇ ಸರಿ...'' ಅತ್ಯಂತ ಜಾಗರೂಕತೆಯಿಂದ ಗೊಂಬೆಯ ಒಳಗೆ ಕದಿರನ್ನು ಅಡಗಿಸಿ ಇಟ್ಟು:

''ಜೋ, ಈ ಗೊಂಬಿನ ಇಲ್ಲೇ ಕುರ್ಚೀಮ್ಯಾಲs ಇಟ್ಟರೂ ಅವರು ಇದನ್ನ ಮುಟ್ಟೂದಿಲ್ಲ. ನೀವು ಒಳಗ ಹೋಗಿ ಮಲಕೊಳ್ರಿ'' ಎಂದರೆ –

''ನಾನು ಹೇಡಿಯಂಗ ಓಡಿಹೋಗಲೇನು ? ಏನ್ ಬಂದದ್ದು ಬರ್ಲಿ'' ಎನ್ನುತ್ತಾನೆ ಜೋ.

''ಕೈ ಮುಗೀತೇನಿ ಹಟಾ ಮಾಡಬ್ಯಾಡಿ, ನಿಮ್ಮ ಸಲುವಾಗಿ ಅಲ್ಲದಿದ್ದರೂ ಮಕ್ಕಳ ಸಲುವಾಗಿ, ನಿಮ್ಮ ಈ ಯಂತ್ರ ಉಳಸೋದಕ್ಕಾಗಿ ಹೋಗಿ ಮಲಕೊಳ್ರಿ ಒಳಗ.''

ಕಿಡಕಿಯ ಗಾಜು ಒಡೆದ ಸದ್ದಾಗುತ್ತದೆ.

''ನಿಮಗ ಎಷ್ಟು ಸಾರೆ ಹೇಳಬೇಕು - ಒಳಗ ನಡೀರೀ...'' ಒತ್ತಾಯದಿಂದ ಗಂಡನನ್ನು ಒಳಕೋಣೆಗೆ ಕಳಿಸಿ ಶೆಲ್ಫ್‌ನಲ್ಲಿದ್ದ ಪಿಸ್ತೂಲು ತಂದು ಜಾನಿಯ ಕೈಗೆ ಕೊಟ್ಟು –

''ಜಾನಿ, ನೀನು ಅವರ್ನ ಒಳಗ ಬಿಡಬ್ಯಾಡ, ಇದರೊಳಗ ಗುಂಡಿಲ್ಲ. ಆದರ ಅವರಿಗೆ ಇದು ಗೊತ್ತಿಲ್ಲ. ನೀನು ಇನ್ನೂ ಸ್ವಲ್ಪ ಹೊತ್ತ ಅವರ್ನ ತಡಿ, ನಾನೂ ಅಲ್ಲಿಗೇ ಬರ್ತೀನಿ.''

ಮತ್ತೆ ಗದ್ದಲ - ದೊಂಬೆ...

ಹೊರಗೆ ಹೊಗೆ, ಒಳಗೆ ಧಗೆ. ಮುಂದೇನು ಅನಾಹುತ ಆಗುವುದೋ ಎಂಬ ಭೀತಿ ಅವಳಿಗೆ.

''ಜಾನಿ, ಇಲ್ಲದ ಸಂಕಟಾ ಮೈಮ್ಯಾಲ ಹಾಕೋಬ್ಯಾಡ. ಆದರ ಅವರ್ನ ಒಳಗ ಬಿಡಬ್ಯಾಡ.''

ಎಂದು ಹೇಳಿ ಉರಿಯುತ್ತ ಬಂದವರನ್ನು ಅರಗಳಿಗೆ ತಡೆಯಲು ಹೇಳಿ ಜೋನತ್ತ ನೋಡುವಳು.

ಜೋಗೆ ತಕ್ಕ ಮಗ ಜಾನಿ. ಕಿಡಕಿಯ ಬಳಿ ಹೋಗಿ –

''ನಾ ಬಾಗಲಾ ತಗಿಯೂದಿಲ್ಲ. ಬಂದಾಂಗ ಹಿಂದಕ್ಕ ತಿರಗಿ ಹೋಗ್ರಿ,'' ಕೂಗಿ ಹೇಳುತ್ತಾನೆ ಜಾನಿ. ಇದರಿಂದ ಕುಪಿತರಾದ ಜನ –

''ನೀ ಬಾಗಲಾ ಬಂದ್ ಮಾಡಿ ಪಿಸ್ತೂಲ ತೋರಿಸಿದರ ನಾವು ಅಂಜಿ ಓಡಿಹೋಗ್ತೀವಿ ಅಂತ ತಿಳದೀಯೇನು ? ಒಳ್ಳೆ ಮಾತ್ಲೇ ಬಾಗಲಾ ತೆಗದು ದೂರ ಸರಿ...''

''ಇಲ್ಲಂದರ ಏನ್ ಮಾಡ್ತೀರಿ ?''

''ಏ ಗಿಡ್ಡ ಮೆಣಸಿನಕಾಯಿ, ಎಷ್ಟು ಮಾತಾಡ್ತೀಯೋ ? ನಿನ್ನ ಕರಾ-ಕರಾ ತಿಂದ ಬಿಡ್ತೀವಿ.''

ಯಾರೋ ಧಡಾರನೆ ಬಾಗಿಲನ್ನು ಒದ್ದಾಗ ಮೇರಿಗೆ ಗಾಬರಿ. ಒಳಗಿನಿಂದ ಹೊರಗೋಡಿ ಬಂದು –

''ಅಣ್ಣಾ ಅವರ, ಇದರಾಗ ಯಾರು ಹೊರಗಿನವರದೀವಿ ? ಎಲ್ಲಾರೂ ನೆರೆಹೊರಿಯವರುs... ನಾವು ನಿಮಗೇನ ಕೆಟ್ಟದ್ದು ಮಾಡಿವಿ ಅಂತ ನಮ್ಮ ಮ್ಯಾಲ ಸಿಟ್ಟು ನಿಮಗ ? ಬಾಗಲಾ ಮುರೀಬಾಡ್ರಿ. ನಿಮಗ ಏನ್‌ಬೇಕಾಗೇದ ಹೇಳ್ರಿ...''

ಕೊನೆಗೂ ದೊಡ್ಡ ಕಲ್ಲಿನಿಂದ ಬಾಗಿಲಗೆ ಗುದ್ದಿ, ಮುರಿದು ಒಳಗೆ ಬಂದ ಚಾಕು, ಚೂರಿ, ಬಡಿಗೆ ಹಿಡಿದ ನೂರಾರು ಮಂದಿಯನ್ನು ಕಂಡು ಮೇರಿಯ ಕೈಕಾಲು ಥರಥರ ನಡುಗುತ್ತವೆ. ಎಲ್ಲರಿಗಿಂತ ಮುಂದಿದ್ದ ಕಂಬಾರ ಹಾಬ್ ಜಾನಿಯ ಬಳಿಗೆ ಹೋಗಿ –

''ಏ ಲವಂಗ ಮೆಣಸಿನಕಾಯಿ, ನಮಗ ಪಿಸ್ತೂಲು ತೋರಸ್ತೀಯೇನೊ ? ತಾ ಇಲ್ಲಿ ಅದನ್ನ, ಏ ಎತ್ತಗೊಂಡು ಹೋಗ್ರೋ ಇಂವನ್ನ ಅತ್ಲಾಗ, ಇವರಪ್ಪ ಎಲ್ಲಿ ಅಡಗಿಕುಂತಾನ ಅಂವನ್ನ ಹುಡುಕೋಣು ಬರ್ರಿ.''

''ಕಂಬಾರಣ್ಣ, ನಿನ್ನ ಕೈ ಮುಗೀತೀನಿ. ನನ್ನ ಮಗಾ ಜಾನಿಗೆ ಏನೂ ಮಾಡಬ್ಯಾಡ್ರಿ.''

''ಹಾಂಗಾದ್ರ ನಿನ ಗಂಡಾ, ಆ ಪಟಿಂಗ ಎಲ್ಲಿದಾನ ತೋರಸು'' ಅವನ ಕಣ್ಣು ಹಸಿದ ಹುಲಿಯ ಕಣ್ಣಿನಂತೆ ಕಾಣಿಸ್ತವೆ ಮೇರಿಗೆ.

''ಅಣ್ಣಾ ಅವರಿಗೆ ಆರಾಮಿಲ್ಲ, ಮಲಕೊಂಡಾರ, ನಿಮ್ಮ ಕಾಲಿಗಿ ಬೀಳತೀನಿ ಅಣ್ಣಾ, ಅವರಿಗೆ ಏನೂ ಮಾಡಬ್ಯಾಡ್ರಿ''

''ಅಂವಗ ಏನೂ ಮಾಡೂದಿಲ್ಲ. ಆದರ ಅಂವನ ಆ ದರಿದ್ರ ಯಂತ್ರ ಎಲ್ಲೆದ ಹೇಳು. ಅದನ್ನ ಪುಡಿ-ಪುಡಿ ಮಾಡಾಕ ಬಂದೀವಿ. ಏ ಒಳಗ ಹೋಗ್ರಿ, ಹುಡುಕಿ ಹೊರಗ ತೊಗೊಂಡು ಬರ್ರಿ ಅದನ್ನ...'' ಒಬ್ಬ ಧಾಂಡಿಗ ಚೂರಿ ಹಿಡಿದು ಮುಂದೆ ಬಂದು –

''ಏ ಬುಡ್ಡಿ, ನೀನು ನಿನ್ನ ಗಂಡಾ ನಮಗ ಹುಲ್ಲಕಡ್ಡೀ ಸಮ ಆಗ್ತಿರಿ, ಸುಮ್ಮನ ಆ ಯಂತ್ರ ಎಲ್ಲೆದ ಅಂತ ತೋರಿಸಿ ಜೀವಾ ಉಳಿಸಿಗೊಳ್ಳಿ...''

''ಅಯ್ಯಪ್ಪಾ, ಅಲ್ಲಿ ಆ ಟೇಬಲ್ ಮ್ಯಾಲದ ನೋಡ್ರಿ.''

''ಇನ್ನ ಅದರ ಕತೆ ಮುಗೀತು'' ಎನ್ನುತ್ತಾ ದೊಡ್ಡ ಕಲ್ಲಿನಿಂದ, ಬಡಿಗೆಯಿಂದ ಯಂತ್ರವನ್ನು ಪುಡಿಪುಡಿ ಮಾಡಿದರೂ ಸಮಾಧಾನವಾಗುವುದಿಲ್ಲ ಹಾಬ್‌ಗೆ... ತನ್ನ ಸುತ್ತಿಗೆಯಿಂದ ಹೊಡೆಯುತ್ತಾನೆ. ''ಏ, ನಮ್ಮಪ್ಪನ ಯಂತ್ರಾ ಹಾಳು ಮಾಡಿದೆಲ್ಲೊ ರಾಕ್ಷಸಾ, ನಿನ್ನ...''

ಹಾಬ್ ಜಾನಿಯನ್ನು ದೂರ ತಳ್ಳುತ್ತಾನೆ...

''ನಮಗ ನೀನು ಬೇಕಾಗಿಲ್ಲ, ನಿಮ್ಮಪ್ಪ ಎಲ್ಲೆದಾನ ಹೇಳು'' ಎಂದವನೇ ಅದೇ ಸುತ್ತಿಗೆ ಹಿಡಿದು ಒಳಗೆ ನಡೆದಾಗ ತಡೆದ ಮೇರಿ – ''ಅಣ್ಣಾ, ಹೇಳಿದ್ನೆಲ್ಲ. ಅವರಿಗೆ ಆರಾಮಿಲ್ಲಂತ. ಅವರಿಗೆ ಏನೂ ಮಾಡಬ್ಯಾಡ್ರಿ. ನಿಮ್ಮ ಕಾಲಿಗೆ ಬೀಳ್ತೀನಿ. ಅವರು ಮೊದಲೇ ಅಲ್ಪಂತ...''

''ಹೌದು... ಅಲ್ಪರ ಸಂಗ, ಅಭಿಮಾನಭಂಗ. ಹಾಂಗಂತ ಸುಮ್ಮನ ಇದ್ದರ ನಮ್ಮ ಹೊಟ್ಟೀಮ್ಯಾಲ ಹೊಡ್ಯಾಕ ಹೊಂಟಾನಾ ಈ ಕುಂಟಾ ? ಇಂವನ್ನ ಸುಮ್ಮನ ಬಿಡೂದಿಲ್ಲ...''

''ಆಯ್ತಲ್ಲ, ಅವರು ಕಣ್ಣಾಗ ಎಣ್ಣೀ ಹಾಕ್ಕೊಂಡು ತಯಾರ ಮಾಡಿದ ಆ ಯಂತ್ರಾನs ಪುಡಿ-ಪುಡಿ ಮಾಡೀರೆಲ್ಲ. ನಮ್ಮ ಮನ್ಯಾಗ ದುಡಿಯೋ ಗಂಡಸು ಅಂತ ಇರೂದು ಅವರೊಬ್ಬರ. ಸಣ್ಣ ಸಣ್ಣೂ ಎರಡು ಮಕ್ಕಳದಾವ...''

''ನಮಗ ಇಲ್ಲೇನು ? ಆ ನಮ್ಮ ಮಕ್ಕಳ ಕೆಲಸಾ, ಅವರ ಪಾಲಿನ ಅನ್ನಾ ಕಸಗೊಳ್ಳೊ ಹಕ್ಕು ಇಂವಗೆಲ್ಲೆದ ?''



''ಸಣ್ಣ ಮಕ್ಕಳು ಕೆಲಸಕ್ಕ ಹೋಗಬಾರದು, ಅವರು ಸುಖದಿಂದ ಬೆಳೀಬೇಕು ಅಂತನs ನಮ್ಮಪ್ಪಾ ಈ ಯಂತ್ರ ಕಂಡು ಹಿಡದಿದ್ದ...'' ''ನಿಮ್ಮಪ್ಪಾ ಹುಚ್ಚ ಆದಾನಲೇ ಹುಡಗಾ, ನೀನೂ ಅಂವನ ಹಾದೀನ ಹಿಡದರ ನಿನ್ನ ಚಿಂದಿ ಚಿಂದಿ ಮಾಡ್ತೀವಿ ಹುಶಾರ್...'' ಹಾಬ್ ಜಾನಿಯನ್ನು ಬೆದರಿಸುತ್ತಾನೆ. ಇನ್ನೊಬ್ಬ ಅವನ ಕುತ್ತಿಗೆ ಹಿಡಿದು –

''ಇನ್ನೊಬ್ಬರ ಅಡಿಗಿ ತುಡುಗ ಮಾಡೂ ಅಧಿಕಾರ ಯಾರು ಕೊಟ್ಟಾರಲೇ ನಿಮ್ಮಪ್ಪಗ?'' ಹೆಣಗಾಡಿ ಅವನಿಂದ ಬಿಡಿಸಿಕೊಂಡ ಜಾನಿ – ''ಆ ದೇವರು ಕೊಟ್ಟಾನ... ನಮ್ಮಪ್ಪಾ ಶ್ಯಾಣ್ಯಾ ಅದಾನ, ಶೂರಅದಾನ ಅಂವಾ ಎಲ್ಲಾರಿಗೂ ಸಹಾಯ ಮಾಡಬೇಕಂತಾನ, ಎಲ್ಲಾರೂ ಸುಖದಿಂದ ಇರ್ಲಿ ಅಂತಾನ. ನೀವು ಅಂವಗ ಕೆಟ್ಟದ್ದು ಮಾಡಿದ್ರೂ ಅಂವಾ ಒಳ್ಳೇದ್ದನ್ನs ಮಾಡ್ತಾನ.''

''ಅದಕ್ಕs ನಮ್ಮ ಕಡಿಂದ ಬಡಿಸಿಗೊಂಡು ಸಾಯ್ತಾನ. ಎಲ್ಲಿ ಎಲ್ಲೆದಾನ ಅಂವಾ?''

ಒಳಗೆ ಹೊರಟ ಹಾಬ್‌ನ ಬಳಿಗೆ ಬಂದ ಮೇರಿ ಬೇಡಿಕೊಳ್ಳುತ್ತಾಳೆ. ''ಅಣ್ಣಾ, ಅವರಿಗೇನೂ ಮಾಡಬ್ಯಾಡ್ರಿ. ನಿಮ್ಮ ಕಾಲ ಹಿಡಕೊಂತೀನಿ''

''ಮತ್ತ ನೋಡು ನಿನ್ನ ಈ ಮಗಾ ಹೆಂತಾ ಶೂರತನದ ಮಾತಾಡ್ತಾನ. ನಾನು 'ಹೂಂ' ಅಂದರ ಇವರೆಲ್ಲಾ ಕೂಡಿ ಇಂವನ್ನ ತಗಣೀ ಒರದಂಗ ಒರದು ಬಿಡ್ತಾರ. ಇಂವಗ ತಿಳಿಸಿ ಹೇಳಾಕ ಬರೂದಿಲ್ಲಾ ನಿನಗ?''

''ಅದು ಸಣ್ಣ ಕೂಸು, ಕಂಬಾರಣ್ಣ, ನಾವು ಇಲ್ಲಿರುದ ಬ್ಯಾಡ ಅನ್ನಿಸಿದರ ಹೇಳಿಬಿಡ್ರಿ, ನಾವು ಬ್ಯಾರೇ ಊರಿಗೆ ಹೋಗಿಬಿಡ್ತೀವಿ. ನಮ್ಮನ್ನ ಬಿಟ್ಟುಬಿಟ್ರಿ...''

''ಅಲ್ಲಾ, ಈಟುದ್ದ ಅದಾನ, ಹೆಂತಾ ಮಾತಾಡ್ತಾನ ನೋಡು ಈ ಪೋರ...'' ''ಇರ್ಲಿ ಬಿಡು ಕಂಬಾರಣ್ಣಾ... ಆ ಹೆಣ್ಣ ಮಗಳ ಮುಖಾ ನೋಡಿ ಹೋಗಿ ಬದುಕಿಕೊಳ್ಳಿ ಅಂತ ಬಿಟ್ಟ ಬಿಡೂಣು, ಬ್ಯಾರೇ ಊರಿಗೆ ಹೋಗಿ ಬದುಕಿಕೊಳ್ಳಿ... ಹ್ಯಾಂಗೂ ಅಂವನ ಆ ಯಂತ್ರಾ ನಾಶ ಮಾಡೀವೆಲ್ಲ, ಇನ್ನೇನು ಮಾಡ್ತಾನ ಆ ಬುಡ್ಡಾ.''

ತಮ್ಮಲ್ಲೇ ಒಬ್ಬ ಯಜಮಾನನ ಈ ಸಮಜಾಯಿಷಿ ಯಿಂದ ತುಸು ತಣ್ಣಗಾದ ಹಾಬ್

''ಹೋಗ್ರಿ ಎಲ್ಲೆರ ದೂರ ಹೋಗಿ ದುಡದು ತಿನ್ರಿ, ದುಡಿಯೋ ಮಂದೀ ಹೊಟ್ಟೀಮ್ಯಾಲ ಹೊಡಿಯೋ ಕೆಲಸಾ ಮಾಡಬ್ಯಾಡ್ರಿ... ನೀವೇನರ ಮುಂದಿನ ವಾರ ನಮ್ಮ ಕಣ್ಣಿಗಿ ಬಿದ್ದರ ನಿಮ್ಮನ್ನ ಸುಟ್ಟು ಬೂದಿ ಮಾಡಿಬಿಡ್ತೀವಿ. ಬರ್ರಿ ಎಲ್ಲಾರೂ... ಹೋಗೋಣು...''

ಹಾಬ್ ತನ್ನ ಸಂಗಾತಿಗಳನ್ನು ಕರೆದುಕೊಂಡು ಹೊರಗೆ ಹೋದ. ತಕ್ಷಣ ಓಡಿ ಬಂದು ಮಗನನ್ನು ಅಪ್ಪಿಕೊಂಡ ಮೇರಿ –

''ಎಂಥಾ ಭಾದ್ದsರ ಅದೀಯೋ ನನ್ನ ಮಗನಾ! ಥೇಟ ನಿಮ್ಮಪ್ಪನಂಗs ಅದೀನೋಡು. ನೀ ಇಷ್ಟs ಇದ್ದರೂ ಅಷ್ಟೆಲ್ಲಾ ಮಂದಿ ಎದಿಯೊಳಗ ಝುರಿ ಹೋಗಿಸಿದಿ'' ಲಟಲಟನೆ ಮುತ್ತು ಕೊಡುತ್ತಾಳೆ.

''ಅವ್ವಾ, ಅಪ್ಪ ಅಷ್ಟೆಲ್ಲಾ ಕಷ್ಟಪಟ್ಟು ತಯಾರ ಮಾಡಿದ... ಯಂತ್ರಾ ಎಲ್ಲಾ ಒಡದು ಹಾಕಿದ್ರಲ್ಲವಾ ಆ ದುಷ್ಟರು!''

''ಇಲ್ಲ ಜಾನಿ, ಅವರು ಒಡದದ್ದು ಬರೆ ಡಬ್ಬೀನ. ಅದರ ಜೀವ ಇಲ್ಲಿ ಈ ಗೊಂಬಿಯೊಳಗದ... ಇಗಾ ಈ ಸಣ್ಣ ಕದಿರು. ಇದನ್ನ ನಾನು ಸುರಕ್ಷಿತ ಇಟ್ಟೇನಿ.''

''ಇಷ್ಟು ಸಣ್ಣ ವಸ್ತು, ಅಷ್ಟು ದೊಡ್ಡ ಕೆಲಸಾ ಮಾಡ್ತವನಾ?''

''ಹೌದು ಜಾನ್, ನಿಮ್ಮಪ್ಪಾ ಇದರ ಸುತ್ತ ಮತ್ತೆಲ್ಲಾ ಜೋಡಸ್ತಾರ. ಹೊಸ ಯಂತ್ರಾ ಹೊರಗ ತಂದೇ ತರ್ತಾರ... ಆದರ ಇಲ್ಲಿ ಬ್ಯಾಡ... ಬ್ಯಾರೇ ಊರಿಗೆ ಹೋದನಂತರ...''

''ಅವ್ವಾ, ಇದೆಲ್ಲಾ ಯಾಕ ಬೇಕು ಅಪ್ಪಗ! ವಯಸ್ಸಾಯ್ತು. ಆರಾಮ ಇರ್ಲಿಕ್ಕೆ ಹೇಳು. ನಾನು ದುಡದು...

''ನೀನು, ನಿನ್ನಂತಾ ಮಕ್ಕಳು ದುಡೀಬಾರದು ಅಂತಾನs ಈ ಯಂತ್ರಾ ಕಂಡುಹಿಡದಿದ್ದರು ನಿಮ್ಮಪ್ಪಾ... ಅವರ ತಾಕತ್ತು, ಅವರ ಸ್ವಾಭಿಮಾನ, ಅವರ ಕಳಕಳಿ ಅರ್ಥಮಾಡಿಕೋಬೇಕಲ್ಲ ಈ ಸ್ವಾರ್ಥಿಜನಾ! ಅವರ ಈ ಯಂತ್ರ ಹೊರಗ ಬಂದರ ಬಡವರ ಮನಿಬಾಗಿಲಿಗೂ ಭಾಗ್ಯ ಹರದು ಬರ್ತದ. ನಿಮ್ಮಪ್ಪಗೆ ಅರಮನಿ ಯೊಳಗ ಸನ್ಮಾನ ನಡೀತದ. ನಿಮ್ಮಪ್ಪ ಕಂಡುಹಿಡಿದ ಈ ಯಂತ್ರ ಉಳಿಸಿಕೊಳ್ಳೂದಕ್ಕ ನೀನೂ ಕಾರಣ ಆದಿ ಈ ಕಾಳರಾತ್ರಿ ಅನ್ನೊ ಅಭಿಮಾನ ನಿನ್ನೊಳಗೂ ಉಕ್ಕಬೇಕು ಜಾನ್...''

ಮತ್ತೊಮ್ಮೆ ಮಗನನ್ನು ಅಪ್ಪಿಕೊಂಡು ಗಳಗಳನೆ ಅಳುತ್ತಾಳೆ ಮೇರಿ.

''ಮೇರಿ, ಮೇರಿ...''

''ಅವ್ವಾ, ಅಪ್ಪಾ ಕರೀತಾರ''

ಹೊರಗೆ ಬಂದ ಜೋ...

''ಮೇರಿ, ಎಲ್ಲಿ ಆ ನನ್ನ ಜೀವಾ? ಎಲ್ಲೆದ ತಾ ಇಲ್ಲೆ...''

''ಇಲ್ಲೇ ಅದ, ಸುರಕ್ಷಿತ ನನ್ನ ಹತ್ತರನs ಅದ...''

''ತಾ ಇಲ್ಲೆ ಅದನ್ನ, ನೀವು ಇನ್ನ ನಿಶ್ಚಿಂತಿಲಿಂದ ಮಲಕೊಳ್ರಿ. ನನಗ ಇದು, ಇದರಕೂಡ ನನ್ನ ಎದಿಯೊಳಗಿನ ಕಿಚ್ಚ ಅಷ್ಟು ಸಾಕು. ಹೊರಿಗಿನ ಈ ಮೋಂಬತ್ತಿ ಬೆಳಕರ ಯಾಕ ಬೇಕು? ಈಗ, ಇದs ರಾತ್ರಿ ನಾನು ನನ್ನ ಯಂತ್ರ ತಯಾರ ಮಾಡಬೇಕು...''

''ಜೋ, ಏನು, ಏನ್ ಮಾಡ್ತೀರಿ ನೀವು! ಅವರೆಲ್ಲಾ ಮತ್ತ...''

''ಈ ರಾತ್ರಿ ಅವರು ಮತ್ತಾ ಬರೂದಿಲ್ಲ. ಅದಕ್ಕs ನಾನು ಇದs ರಾತ್ರಿ ಈ ಯಂತ್ರಾ ತಯಾರ ಮಾಡಬೇಕು. ಬೆದಿ ಇಟ್ಟಾಗ, ಬೀಜಾಂಕುರ ಆಗೂದು. ಅವರು ಕುಟ್ಟಿದ ಈ ಪುಡೀಲಿಂದನs ನಾನು ಇಡಿ ಮಾಡಿ ತೋರಸ್ತೀನಿ. ನೀವೆಲ್ಲಾ ಹೋಗಿ ಮಲಕೊಳ್ರಿ... ನನ್ನಷ್ಟಕ್ಕ ನನ್ನ ಬಿಟ್ಟಬಿಡ್ರಿ. ಹೋಗ್ರಿ... ಒಳಗ ಹೋಗ್ರಿ...''

ತಾಯಿ-ಮಗ ಅವನನ್ನು ಗಾಬರಿಯಾಗಿ ನೋಡುತ್ತ ನಿಲ್ಲುತ್ತಾರೆ. ಆತ ಪುಡಿ-ಪುಡಿಯಾದ ಯಂತ್ರದ ಭಾಗಗಳನ್ನು ಒಟ್ಟಗೂಡಿಸತೊಡಗುತ್ತಾನೆ... ಆ ಕಾಳರಾತ್ರಿ.

ಕತ್ತಲಲ್ಲಿದ್ದವರ ಬದುಕಿಗೆ ಹೊಸಬೆಳಕಿನ ಮುನ್ನುಡಿ ಬರೆದ ಆ ರಾತ್ರಿ...

ಕನ್ನಡ ರೂಪಾಂತರ – **ಬಿ. ಆರ್. ಪೋಲೀಸ್ ಪಾಟೀಲ**
ವಿಶ್ರಾಂತ ಪ್ರಾಂಶುಪಾಲರು, ಎಸ್. ಆರ್. ಎ. ಪದವಿ ಪೂರ್ವ ಕಾಲೇಜು, ಬನಹಟ್ಟಿ ಬಾಗಲಕೋಟೆ ಜಿಲ್ಲೆ

*ಸಂಸ್ಕೃತಿ ಕೇಂದ್ರಿತ ಸಂಘರ್ಷ* *(೫೨ ಪುಟದಿಂದ)*

ಕ್ರಿಯಾತ್ಮಕ ಸಂಬಂಧಗಳನ್ನಾಧರಿಸಿದ ಕೋಸಾಂಬಿಯುವರ ವಿಶ್ಲೇಷಣಾ ವಿಧಾನಗಳು, ಭಾರತೀಯ ಸಂಸ್ಕೃತಿಯ ಅಧ್ಯಯನಕ್ಕೆ ಹೊಸ ಅವಕಾಶಗಳಿಗೆ ಎಡೆಮಾಡಿ ಕೊಟ್ಟಿದ್ದವು. ಆದರೆ ಕೋಸಾಂಬಿ ಅವರ ನಂತರದಲ್ಲಿ ಈ ವಿಧಾನವು ನಿರ್ಲಕ್ಷ್ಯಕ್ಕೊಳಗಾಗಿ ಮಾರ್ಕ್ಸ್‌ವಾದಿ ಇತಿಹಾಸ ಅಧ್ಯಯನವು ಪ್ರಮುಖವಾಗಿ ಆರ್ಥಿಕ ವಿಷಯಗಳು ಮತ್ತು ರಾಜಕೀಯ ಚಳುವಳಿಗಳ ಸುತ್ತ ಕೇಂದ್ರೀಕರಿಸಲ್ಪಟ್ಟಿತು. ಸಾಂಸ್ಕೃತಿಕ ವಿಷಯಗಳು ಸಂಪೂರ್ಣ ನಿರ್ಲಕ್ಷ್ಯಕ್ಕೊಳಗಾಯಿತು. ಸಾಂಸ್ಕೃತಿಕ ವಿಷಯಗಳನ್ನು ಪ್ರಧಾನವಾಗಿ ಪರಿಗಣಿಸಿದಾಗಲೂ ಈ ವಿಧಾನಗಳು ಸರಳೀಕರಣಗೊಂಡವು, ಇಲ್ಲವೇ ಪ್ರಾಯೋಗಿಕ ಸ್ವರೂಪವನ್ನು ಪಡೆಯುತ್ತಿದ್ದವು.

ದುರದೃಷ್ಟವೆಂದರೆ ಮಾರ್ಕ್ಸ್‌ವಾದಿ ಅಧ್ಯಯನವು ಕೋಸಾಂಬಿಯವರ ಸೂಚನೆಯಂತೆ ಸಂಸ್ಕೃತಿ ಕೇಂದ್ರಿತ ಇತಿಹಾಸದ ಸಮಗ್ರತೆಯನ್ನು ಅಲಕ್ಷಿಸಿತ್ತು. ಪರಿಣಾಮವಾಗಿ ಮಾರ್ಕ್ಸ್‌ವಾದಿ ಅಧ್ಯಯನ ವಿಧಾನವು ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸಲು ಶಕ್ಯವಲ್ಲ ಎಂಬ ಅಭಿಪ್ರಾಯ ನೆಲೆಮಾಡಿತು. ಆದರೆ ಕೋಸಾಂಬಿಯವರ ಕೊಡುಗೆ ಈ ಅಭಿಪ್ರಾಯತರವಲ್ಲ ಎಂದು ನಿರೂಪಿಸುತ್ತದೆ. ಸಂಸ್ಕೃತಿಯ ಅಧ್ಯಯನದಲ್ಲಿ ಕೋಸಾಂಬಿಯವರು ತೊಡಗಿಸಿದ್ದ ಪರಿವರ್ತನಾತ್ಮಕ ಹಾಗೂ ವಿಮರ್ಶಾತ್ಮಕ ಧೋರಣೆಯು, ಮಾರ್ಕ್ಸ್‌ವಾದಿ ಇತಿಹಾಸ ಶಾಸ್ತ್ರದಡಿಯಲ್ಲಿ ಸಂಸ್ಕೃತಿಯನ್ನು ಅಭ್ಯಸಿಸಲು ಒಂದು ಹೊಸ ತಾತ್ವಿಕ ಹಾಗೂ ವಿಶ್ಲೇಷಣಾತ್ಮಕ ಮಾರ್ಗವನ್ನು ತೋರುತ್ತದೆ. ಆದರೆ ಅನೇಕ ಇತಿಹಾಸ ತಜ್ಞರು ಕೋಸಾಂಬಿಯವರಿಂದ ಪ್ರೇರಿತರಾಗಿ, ಸಂಸ್ಕೃತಿಯ ಅಧ್ಯಯನದೆಡೆಗೆ ಆಕರ್ಷಿತರಾಗಿದ್ದರೂ, ಈ ನಿಟ್ಟಿನಲ್ಲಿ ಗಣನೀಯ ಸಾಧನೆ ಕಂಡುಬರದಿರುವುದು ಅಚ್ಚರಿ ಮೂಡಿಸುತ್ತದೆ. ಸಂಸ್ಕೃತಿಯ ಅಧ್ಯಯನದಲ್ಲಿ ಕಂಡುಬರುವ ಈ ಹಿನ್ನಡೆ ಪ್ರಧಾನವಾಗಿ ಗೋಚರಿಸುವುದೇ ಅಲ್ಲದೆ ಭಾಷಾ ಕೇಂದ್ರಿತ ಸಂಸ್ಕೃತಿಯ ಅಧ್ಯಯನ ಪ್ರಧಾನವಾಗಿ ಕಂಡುಬರುತ್ತಿರುವುದು ಚಿಂತನಾರ್ಹ ವಿಷಯವಾಗಿದೆ. ಮಾರ್ಕ್ಸ್‌ವಾದಿ ಇತಿಹಾಸ ಶಾಸ್ತ್ರದಲ್ಲಿ ಸಂಸ್ಕೃತಿಗೆ ಹೆಚ್ಚು ಪ್ರಾಮುಖ್ಯತೆ ನೀಡದಿರುವುದರಿಂದಲೇ ಕೋಮು ವಾದಿಗಳಿಗೆ ಮತ್ತು ಸಾಮ್ರಾಜ್ಯಶಾಹಿಗಳಿಗೆ ಸಾಂಸ್ಕೃತಿಕ ಅಧ್ಯಯನದ ಮೇಲೆ ಆಧಿಪತ್ಯ ಸಾಧಿಸಲು ಸುಲಭವಾಗಿದೆ. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಬೇಕಾಗಿರುವುದು ಇಂದಿನ ಅಗತ್ಯತೆಯಾಗಿದೆ.

ಏನೇ ಆಗಲಿ ಸಂಸ್ಕೃತಿಯ ತೀವ್ರ ತೆರನಾದ ಸಂಘರ್ಷದ ಕೇಂದ್ರ ಬಿಂದುವಾಗಿರುವುದು ಸಮಕಾಲೀನ ವಾಸ್ತವತೆ. ಈ ಸಂಘರ್ಷದ ಲಕ್ಷಣಗಳನ್ನು ಮತ್ತು ದಿಶೆಯನ್ನು ಗ್ರಹಿಸುವುದು ಮತ್ತು ಸಂಘರ್ಷದಲ್ಲಿ ಪಾಲ್ಗೊಳ್ಳುವುದು ಇಂದಿನ ಅಗತ್ಯತೆಯಾಗಿದೆ.

(ಭಾರತೀಯ ಇತಿಹಾಸ ಕಾಂಗ್ರೆಸ್‌ನ ಅಧ್ಯಕ್ಷ ಕೆ. ಎನ್. ಪಣಿಕ್ಕರ್ ಅವರು ಕಣ್ಣೂರಿನಲ್ಲಿ ೨೦೦೮ರ ಡಿಸೆಂಬರ್ ೨೮-೩೦ರಂದು ನಡೆದ ಸಂಸ್ಥೆಯ ಸಮಾವೇಶದಲ್ಲಿ ನೀಡಿದ ಭಾಷಣದ ಸಂಕ್ಷಿಪ್ತ ರೂಪ)

ಸಂಗ್ರಹಾನುವಾದ : **ನಾ. ದಿವಾಕರ**
೫೦೪ ಚಿರಂತನ, ೧೩ನೇ ಅಡ್ಡರಸ್ತೆ, ೨ನೇ ಹಂತ, ಮೈಸೂರು

# ತಾನೂ ಬದುಕಿ ಇತರರನ್ನೂ ಬದುಕಗೊಡುವುದು

**ಎ. ಜೆ. ಡಿ'ಸೋಜಾ**

ಧರ್ಮ, ಧರ್ಮಗಳೊಳಗೆ ಪರಸ್ಪರ ತಾಕಲಾಟ ಪುರಾತನಕಾಲದಿಂದಲೂ ನಡೆದುಬಂದ ಪ್ರಕ್ರಿಯೆ. ಹಿಂದೆ ಅವರವರ ದೇವರು, ದಿಂಡರು ಶ್ರೇಷ್ಠರು ಎಂಬ ವಾಗ್ವಾದವಿತ್ತು. ಈಗೀಗ ಇತರ ಧರ್ಮಗಳಿಂದ ತಮಗೆ ಬರುವ ಆಧ್ಯಾತ್ಮಿಕ ಹಾಗೂ ಲೌಕಿಕ ಪೈಪೋಟಿಯನ್ನು ತಪ್ಪಿಸುವ ತವಕದಲ್ಲಿ 'ತೋಳ ಬಂತು ತೋಳ' ಎಂಬ ಕತೆಯಂತೆ, ಬರಿದೆ ಮತಾಂತರದ ಹುಯಿಲೆಬ್ಬಿಸುವವರ ಸಂಖ್ಯೆ ವೃದ್ಧಿಯಾಗುತ್ತಾ ಇದೆ. ತಮ್ಮ ಮನೆಯ ಹುಳುಕನ್ನು ಸರಿಪಡಿಸುವ ಬದಲು 'ಆ' ಅಥವಾ 'ಈ' ಧರ್ಮದವರು ಅಪಪ್ರಚಾರ ಮಾಡಿ ತಮ್ಮವರನ್ನು ದಾರಿತಪ್ಪಿಸುತ್ತಿದ್ದಾರೆ; ಬಲಾತ್ಕಾರ, ಆಮಿಷದಿಂದ ಮತಾಂತರ ಮಾಡಿ ನಮ್ಮ ಸಂಖ್ಯೆ ಕ್ಷೀಣಿಸಲು ಪ್ರಯತ್ನಿಸುತ್ತಿದ್ದಾರೆ ಎಂದು ಅಳಲನ್ನು ತೋಡಿಕೊಳ್ಳುವವರಿದ್ದಾರೆ.

ಪತ್ರಕರ್ತ, ಚಿಂತಕ, ಬರೆಹಗಾರರಾದ ಶ್ರೀ ಎಂ. ವಿ. ಕಾಮತರು 'ಮತಾಂತರ: ಒಂದು ಹಿನ್ನೋಟ' (ಉದಯವಾಣಿ ತಾ॥ ೫-೧೦- ೨೦೦೮) ಎಂಬ ತಮ್ಮ ಲೇಖನದಲ್ಲಿ ಗೋವಾದಲ್ಲಿ ಕ್ರೈಸ್ತರು ನಡೆಸಿದ ಮತೀಯ ದಾಂಧಲೆ, ಹಿಂಸೆ, ದೇವಸ್ಥಾನಗಳನ್ನು ನೆಲಸಮ ಮಾಡಿದುದರ ಬಗ್ಗೆ ಸವಿಸ್ತಾರವಾಗಿ ವರ್ಣಿಸಿದ್ದಾರೆ. ಮತಾಂಧ ಆಳರಸರ ಕಾಲದಲ್ಲಿ ತಮ್ಮ ಧರ್ಮಕ್ಕೆ ಸೇರದ ಅನ್ಯ ಧರ್ಮೀಯರನ್ನು ಪೀಡನೆಗೊಳಪಡಿಸಿದುದು ಜಗತ್ತಿನಾದ್ಯಂತ ನಡೆದುಬಂದ ಕ್ರೌರ್ಯ. ಕ್ರೈಸ್ತಧರ್ಮದ ಆರಂಭದ ದಿನಗಳಲ್ಲಿ ರೋಮ್ ಸಾಮ್ರಾಟರ ಮುಂದಾಳುತನದಲ್ಲಿ ಕ್ರೈಸ್ತರಿಗೂ ನಾನಾತರದ ಹಿಂಸೆ, ಪೀಡನೆ, ಕ್ರೌರ್ಯಭರಿತ, ಯಾತನಾಮಯ ಮರಣಗಳೂ ಬಂದೊದಗಿವೆ. ಸುಮಾರು ಮೂರು ಶತಮಾನಗಳವರೆಗೆ ಕ್ರೈಸ್ತರನ್ನು ಶಿಲುಬೆಗೇರಿಸುವುದು, ಜೀವಂತ ಸುಡುವುದು, ಹಸಿದ ಸಿಂಹಗಳ ಪಂಜರದೊಳಗೆ ಎಸೆಯುವುದು ಇತ್ಯಾದಿ ಅವ್ಯಾಹತವಾಗಿ ನಡೆಯುತ್ತಿದ್ದವು. ರೋಮನ್ ಚಕ್ರವರ್ತಿ ಕಾನ್‌ಸ್ಟೆಂಟಾಯ್ನ್ ಕೂಡ ಕ್ರೈಸ್ತರನ್ನು ಪೀಡಿಸುತ್ತಿದ್ದನು. ಯುದ್ಧಕ್ಕೆ ಹೋದಲ್ಲಿ ಅವನಿಗೆ ಸೋಲಾಗುತ್ತದೆ ಎಂಬ ಪರಿಸ್ಥಿತಿಯಲ್ಲಿ ಆಕಾಶದಲ್ಲಿ ಶಿಲುಬೆಯು ಅವನಿಗೆ ಕಾಣಿಸುತ್ತದೆ. ಈ ದರ್ಶನ ದೊರಕಿದ ಅರಸನು ಶಿಲುಬೆಯನ್ನೇ ತನ್ನ ಸಂಕೇತವಾಗಿ ಸ್ವೀಕರಿಸುತ್ತಾನೆ. ಶಿಲುಬೆಯ ಮುಂದಾಳುತನ ಅಥವಾ ಆಶ್ರಯದಲ್ಲಿ ಅವನಿಗೆ ಯುದ್ಧದಲ್ಲಿ ಜಯ ಲಭಿಸುತ್ತದೆ. ಈ ಜಯವು ರೋಮನ್ ಚಕ್ರವರ್ತಿಯ ಜೀವನದಲ್ಲಿ ಬದಲಾವಣೆ ತಂದಿತು. ರೋಮನ್ ಸಾಮ್ರಾಜ್ಯದ ಬಾವುಟದಲ್ಲಿದ್ದ ಗಿಡುಗನು ಮಾಯವಾಗಿ ಶಿಲುಬೆಯು ಕಾಣಿಸಿಕೊಂಡಿತು. ಆತನು ಕ್ರೈಸ್ತನಾದನು ಮಾತ್ರವಲ್ಲದೆ ಕ್ರಿ.ಶ. ೩೧೩ರಲ್ಲಿ ತನ್ನ ಪ್ರಕಟಣೆಯಲ್ಲಿ ರೋಮ್ ಸಾಮ್ರಾಜ್ಯದ ಅಧಿಕೃತ ಧರ್ಮವು, ಕ್ರೈಸ್ತ ಧರ್ಮವೆಂದು ಸಾರಿದನು. ಕ್ರೈಸ್ತ ಧರ್ಮವು ಯೂರೋಪಿನಲ್ಲಿ ಕಾಡ್ಗಿಚ್ಚಿನಂತೆ ಹರಡಿತು. ತಾನು ದ್ವೇಷಿಸುತ್ತಿದ್ದ ಧರ್ಮವನ್ನೇ ಅರಸನು ಸ್ವೀಕರಿಸಿದನೆಂದರೆ ಅದು ಪವಾಡ ಸದೃಶ ವಿಧಿಯ ಆಟ. ಸಾಮಾನ್ಯವಾಗಿ ಒಂದು ಜನಾಂಗ ಅಥವಾ ದೇಶವು ಸಾರಾಸಗಟಾಗಿ ಇನ್ನೊಂದು ಧರ್ಮಸ್ವೀಕಾರ ಮಾಡುವುದು ಅಸಾಧ್ಯವಾದ ಮಾತು. ಯಾವ ರೀತಿಯ ಆಮಿಷವೂ, ಬಲಾತ್ಕಾರವೂ ಇನ್ನೊಂದು ಧರ್ಮದ ಹೇರುವಿಕೆಯಲ್ಲಿ ಅಗಾಧಪ್ರಮಾಣದ ಫಲವನ್ನು ನೀಡದು. ಕ್ಷಣಿಕವಾಗಿ ಕೆಲವು ಜನರು ಮತಾಂತರಗೊಂಡರೂ ಕೊನೆಯವರೆಗೆ ಅವರು ಆ ಧರ್ಮದಲ್ಲಿ ದೃಢವಾಗಿ ನಿಲ್ಲಲಾರರು. ಕ್ರೈಸ್ತರು ನಿಜವೆಂದು ನಂಬುವ ಮೇಲಣ ಕತೆ ಅಥವಾ ಘಟನೆಯ ಹಿನ್ನೆಲೆಯಲ್ಲಿ ಅವರು ರೋಮನ್ ಸಾಮ್ರಾಜ್ಯದಲ್ಲಿ ಅನುಭವಿಸಿದ ಯಮಯಾತನೆ (ಇದು ನಿಜವಾದುದು)ಗಾಗಿ ಗೋವಾದಲ್ಲಿ ಕ್ರೈಸ್ತರು, ಪೋರ್ಚುಗೀಸರ ಮುಂದಾಳುತನದಲ್ಲಿ ನಡೆಸಿದರೆಂದು ಹೇಳಲಾದ ಹಿಂದೂ ಧರ್ಮೀಯರ ದಮನವನ್ನು ಸಮರ್ಥಿಸುವ ಪ್ರಯತ್ನವಿದಲ್ಲ.

ಜೆಸುಯಿತ ಸಭೆಯ ಸಂತ ಫ್ರಾನ್ಸಿಸ್ ಕ್ಸೇವಿಯರ್ ಕ್ರೈಸ್ತಮತ ಪ್ರಸಾರಕ್ಕಾಗಿಯೇ ಗೋವೆಗೆ ಆಗಮಿಸಿದ್ದರು. ಹಿಂದೂ ದೇವಾಲಯಗಳನ್ನು ನಾಶಪಡಿಸುವುದನ್ನು ನೋಡಿ ಸಂತ ಫ್ರಾನ್ಸಿಸರು ಬಹುವಾಗಿ ಸಂತೋಷಪಟ್ಟರೆಂದು ಶ್ರೀ ಕಾಮತರು ಬರೆದಿದ್ದಾರೆ. ಚಾಲ್ತಿಯಲ್ಲಿರುವ ಒಂದು ಐತಿಹ್ಯದ ಪ್ರಕಾರ ಗೋವೆಗೆ ದಂಡೆತ್ತಿಬಂದ ಶತ್ರುರಾಜನಿಗೆ ಎದುರಾಗಿ ಸಂತ ಫ್ರಾನ್ಸಿಸ್ ತಮ್ಮ ಶಿಲುಬೆಯನ್ನು ಎತ್ತಿಹಿಡಿದಾಗ ಗೋವೆಯ ಕಡೆಯಿಂದ ಅಗಾಧಸೈನ್ಯ ಅವನ ಕಣ್ಣಿಗೆ ಕಂಡು ಆ ಶತ್ರುರಾಜನು ಪಲಾಯನ ಮಾಡುತ್ತಾನೆ. ಇದರಿಂದ ಸಂತೋಷಗೊಂಡ ಗೋವಾ ಪ್ರದೇಶದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಕ್ರೈಸ್ತಮತಾವಲಂಬಿಗಳಾದರೆಂದು ಪ್ರತೀತಿ. ಮೇಲಿನ ಘಟನೆಗೆ ಚಾರಿತ್ರಿಕ ಪುರಾವೆ ಅಥವಾ ಸಮರ್ಥನೆ ಇದೆಯೋ ಇಲ್ಲವೋ ಎಂಬುದು ತಿಳಿದಿಲ್ಲ. ಕ್ರೈಸ್ತಮತಕ್ಕೆ ಮತಾಂತರಗೊಂಡ ಗೋವಾ ಜನರಲ್ಲಿ ಎಲ್ಲಾ ಸ್ತರದ ಅಥವಾ ವರ್ಣಗಳ (ಚತುರ್ವರ್ಣಗಳು ಎಂದು ನೆನಪಿಡುವುದು) ಜನರು ಒಳಗೊಂಡಿದ್ದಾರೆ. ಪುರೋಹಿತಶಾಹಿ ವರ್ಗದವರು ಸ್ವಲ್ಪ ಮಟ್ಟಿಗೆ ಕಡಿಮೆ ಎಂದೆನಿಸಿದರೂ ಕೆಳಸ್ತರದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರಗೊಂಡರು ಎಂದು ಹೇಳಬಹುದು. ಅಂದರೆ ಸಂತ ಫ್ರಾನ್ಸಿಸರ ಜೀವನ ರೀತಿ, ಅವರ ಬೋಧನೆ, ಜನರೊಡನೆ ಬೆರೆತು ಅವರ ಕಷ್ಟಸುಖಗಳ ಬಗ್ಗೆ ಸ್ಪಂದನೆ ಇವು ಗೋವಾ ಜನರಿಗೆ ಏನೋ ಹೊಸತನ್ನು ತೋರಿಸಿದವು. ಜನರು ಅವರನ್ನು ಸ್ವೀಕರಿಸಿದರು. ಜೊತೆಗೆ ಆಳರಸರಾದ ಪೋರ್ಚುಗೀಸರ ಕೃಪಾಕಟಾಕ್ಷವೂ ನೆರವಾಯಿತೆನ್ನಬಹುದು. ಕ್ರೈಸ್ತ ಮತಾವಲಂಬಿಗಳಾದ ಜನರು ಸಾಕಷ್ಟು ಪ್ರಮಾಣದಲ್ಲಿದ್ದಾಗ ಗುಂಪಿನಲ್ಲಿದ್ದ ಜನರು ವ್ಯವಧಾನವನ್ನು ಕಳೆದುಕೊಂಡು ಹಿಂದೂ ಧರ್ಮೀಯರ ದೇವಳಗಳನ್ನು ನಾಶಮಾಡಿರಬಹುದು. ಆ ಹೇಯಕೃತ್ಯಕ್ಕೆ ಸಮರ್ಥನೆ ಎಂದಿಗೂ ಇಲ್ಲ. ಅದು ಚಾರಿತ್ರಿಕ ತಪ್ಪು. ಇನ್ನೊಂದು ವಿಷಯವನ್ನು

**ಲೇಖನಿ ಖಡ್ಗಕ್ಕಿಂತ ಮಿಗಿಲು ಎನ್ನುತ್ತಾರೆ. ಜ್ಞಾನಿಗಳಾದ ಶ್ರೀ ಕಾಮತ್ ಅವರು ತಮ್ಮ ಲೇಖನಿಯನ್ನು ಖಡ್ಗವನ್ನಾಗಿಸಿ ಕ್ರೈಸ್ತ ಸಮಾಜದ ಮೇಲೆ ಝಳಪಿಸುತ್ತಾ ಇದ್ದಾರೆ. ನಾಲ್ಕು ನೂರು, ಐನೂರು ವರ್ಷಗಳ ಹಿಂದಿನ ಘಟನೆಗಳನ್ನು ಕೆದಕಿ ಗಬ್ಬುವಾಸನೆ ಹರಡುತ್ತಿದ್ದಾರೆ. ತಮ್ಮ ಲೇಖನಿಯ ಮುಖಾಂತರ ಮೇಲೆ ಹೇಳಿದ ಎರಡೂ ಸಮಾಜದವರು ಮಾಡಿದ ಉತ್ತಮ ಕಾರ್ಯಗಳನ್ನು ಉಲ್ಲೇಖಿಸುತ್ತಾ ಅವರನ್ನು ಹುರಿದುಂಬಿಸಲು ಮುಂದಾದರೆ ಅದು ಧರ್ಮ, ಒಂದು ಸಂಘಟನೆಯವರು ನಿರ್ಮಿಸಿದ ಕಂದಕವನ್ನು ತಮ್ಮ ಲೇಖನಿಯ ಹರಿತದ ಮೂಲಕ ಇನ್ನಷ್ಟು ಆಳ, ಅಗಲವಾಗಿಸುವುದಾದರೆ ಅದು ಅಧರ್ಮವೆನ್ನದೆ ನಿರ್ವಾಹವಿಲ್ಲ.**

# ನಮ್ಮೂರು

ಕಟ್ಟಿ ಕೊಟ್ಟರೆ ನೀವು
ಕಟ್ಟಡಗಳ, ಬಹುಮಹಡಿ ಮಹಲುಗಳ
ಅದು ನಮ್ಮ ಮನೆಯಾಗದು
ಅಂಥ ಕೇರಿ ನಮ್ಮೂರಾಗದು ಕಣಾ !

ಕಟ್ಟಡಗಳ ಕಟ್ಟಿ ಕೊಟ್ಟರೆ ಅದು ಊರಲ್ಲ
ತಾನಾಗಿ ಹುಟ್ಟಿ ಬೆಳೆಯೋದು ಊರು ಗುಣಾ
ಅದು ನಮ್ಮೂರು ಕಣಾ

ಮಾವು, ಹುಣಸೆ, ಹಲಸು, ಪೇರಲೆ
ಜಾಜಿ, ಮಲ್ಲಿಗೆ, ಸಂಪಿಗೆ, ಕಣಗಿಲೆ
ಗುಬ್ಬಿ, ಕಾಗೆ, ಗಿಣಿ, ಪಿಕಳಾರ, ಕೋಗಿಲೆ
ಗಂಧ, ಬೀಟೆ, ನಂದಿ, ತೇಗ, ಬಣಗೆ

ದನ, ಎಮ್ಮೆ, ಎತ್ತು, ಕುರಿ, ಕೋಳಿ, ನಾಯಿ ಬೆಕ್ಕು
ಏಡಿ, ಹಾವು, ನಂಜುಳ್ಳೆ ಚ್ವಾರಟೆ
ಹಾಲೆ, ಹಲ್ಲಿ, ನುಸಿ, ನೊರೆದು

ಜಿರಲೆ, ಒರಲೆ, ಸಾಲಿಂಗ, ಕ್ರಿಮಿಕೀಟ...
ಅಜ್ಜ, ಅಜ್ಜಿ, ಅಪ್ಪ, ಅಮ್ಮ, ಚಿಕ್ಕಿ, ತಮ್ಮ
ದೊಡ್ಡಪ್ಪ, ಚಿಕ್ಕಪ್ಪ, ಭಾವ, ಮಾವ, ಅತ್ತಿಗೆ
– ಹೀಗೆ ಜೀವ ಕೋಟಿ ಬಗೆ ಬಗೆ...

– ಇವನೆಲ್ಲ ಕಟ್ಟಿ ಕೊಡಲು ಬರದೋ
ನಮ್ಮೂರು ಬಿಟ್ಟ ಬೇರದು
ಬೇರೆಲ್ಲೂ ಇರದೋ !

ಬಂದಗದ್ದೆ ರಾಧಾಕೃಷ್ಣ
ಹಸೆಮನೆ, ಪುಸ್ತಕ ಹೊಂಬಾಳೆ, ಗ್ರಾಮೀಣ ಪ್ರದೇಶದ ಚಿತ್ರಕಲಾ ಕೇಂದ್ರ
ಕೆಳದಿ - ೫೭೭೪೦೧, ಸಾಗರ ತಾ|| ಶಿವಮೊಗ್ಗ ಜಿಲ್ಲೆ



ಮರೆಯಬಾರದು. ಜಗತ್ತಿನೆಲ್ಲೆಡೆ ಬಲವಂತದ ಮತಾಂತರದಂತೆಯೇ ಸ್ವಯಂಪ್ರೇರಿತ ಮತಾಂತರ ನಡೆದುದರಲ್ಲಿ ಸಂಶಯವಿಲ್ಲ. ಗೋವಾದಲ್ಲಿ ರಾಜಕೀಯ ಪ್ರೇರಿತ ಬಲಾತ್ಕಾರದ ಮತಾಂತರ ಮಾತ್ರ ನಡೆದುದಲ್ಲ. ಸ್ವಯಂ ಪ್ರೇರಿತ ಮತಾಂತರದ ಕೊಡುಗೆಯೂ ಸಾಕಷ್ಟಿತ್ತು. ಮಂಗಳೂರು ಜಿಲ್ಲೆಯ ಕೊಂಕಣಿ ಕ್ರೈಸ್ತರಲ್ಲಿ ತಲೆತಲಾಂತರಗಳಿಂದ ಇಳಿದುಬಂದ ಅಭಿಪ್ರಾಯದ ಸಾರಾಂಶವಿದು. ಬಲಾತ್ಕಾರದ ಮತಾಂತರವಾಯಿತೆಂದು ಪರಿತಪಿಸುವವರು ಬಹಳ ಕಡಿಮೆ; ಇಲ್ಲವೇ ಇಲ್ಲವೆಂದು ಹೇಳಬಹುದು. ಗೋವಾದಲ್ಲಿ ಸ್ಥಾಪನೆಗೊಂಡ ಮತಾಂಧ ವಿಚಾರಣಾ ಆಯೋಗದ ಕಿರುಕುಳ ಮಿತಿಮೀರಿದಾಗ ಕ್ರೈಸ್ತರು ಹಾಗೂ ಗೌಡ ಸಾರಸ್ವತ ಬ್ರಾಹ್ಮಣ ಸಮಾಜದವರು ದಕ್ಷಿಣಕ್ಕೆ ಪಲಾಯನ ಮಾಡಿದುದು ಐತಿಹಾಸಿಕ ಸತ್ಯ. ಗೋವಾದ ಚರ್ಚ್‌ಗೆ ಪೋರ್ಚುಗಲ್‌ನ ಚರ್ಚು ಅತಿದೊಡ್ಡ ಶತ್ರುವಾಗಿತ್ತು ಎಂಬುದನ್ನು ಗೋವಾದ ಖ್ಯಾತ ಲೇಖಕಿ, ಮರಿಯಾ ಆರೋರಾ ಕೌಟೊ ತನ್ನ ಕೃತಿ 'Goa-A Daughter Remembers'ಯಲ್ಲಿ ಹೇಳುತ್ತಾರೆ. (ಶ್ರೀ ಜಿ. ರಾಜಶೇಖರ ಅವರ ಲೇಖನ - ಹೊಸತು, ವಿಶೇಷ ಸಂಚಿಕೆ, ಜನವರಿ ೨೦೦೯). ಯೇಸುಕ್ರಿಸ್ತರ ಕಾಲದಲ್ಲಿ ಯೆಹೂದಿ ಧರ್ಮಗುರುಗಳು ಮತ್ತು ಮತಪಂಡಿತರು, ಜನರ ಬಾಹ್ಯ ನಡವಳಿಕೆ, ಶುಚಿತ್ವದ ಬಗ್ಗೆ ಕಠಿಣ ನೀತಿನಿಯಮಗಳನ್ನು ಮಾಡಿಕೊಂಡಿದ್ದರು. ಅಂತರಾತ್ಮದಲ್ಲಿ ಷಡ್ವೈರಿಗಳನ್ನು ಪೋಷಿಸಿಕೊಂಡಿದ್ದರು. ಯೇಸು ಸ್ವಾಮಿಯವರು ಕಟುಶಬ್ದಗಳಿಂದ ಇದನ್ನು ಖಂಡಿಸಿದ್ದರು. ಗೋವೆಯಲ್ಲಿಯೂ ಚರ್ಚು ಅಧಿಕಾರಿಗಳು ತಮ್ಮದೇ ಆದ ಮತೀಯ ರೀತಿನೀತಿಗಳನ್ನು ಜನರ ಮೇಲೆ ಹೇರಿ ಜನರ ಬದುಕು ದುಸ್ತರವಾಗುವಂತೆ ಮಾಡಿದ್ದರು ಎಂಬುದು ಮೇಲಣ ಹೇಳಿಕೆಯ ತಾತ್ಪರ್ಯ. ಉದಾಹರಣೆಗೆ, ಹಿಂದೂ ಜನರೊಡನೆ ಬೆರೆಯಬಾರದು. ಆಗ ತಾನೇ ಹೊಸ ಧರ್ಮವನ್ನು ಸ್ವೀಕರಿಸಿದ್ದರೂ ತಮ್ಮ ಆತ್ಮೀಯರಾದ ಹಿಂದೂ ಬಾಂಧವರು ನಡೆಸುವ ಮದುವೆ, ಮುಂಜಿ ಇನ್ನಿತರ ಧಾರ್ಮಿಕ ಕಾರ್ಯಗಳಲ್ಲಿ ಸಹಭಾಗಿಗಳಾಗಬಾರದು. ಬೆಳಿಗ್ಗೆ, ಮಧ್ಯಾಹ್ನ ಸಾಯಂಕಾಲ ಮನೆಯಲ್ಲಿ ಪ್ರಾರ್ಥನಾ ವಿಧಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಕಪ್ಪುದಿನಗಳಲ್ಲಿ (ಲೆಂಟ್) ಘೋರ ಉಪವಾಸವನ್ನಾಚರಿಸಬೇಕು ಇತ್ಯಾದಿ. ತಪ್ಪಿದರೆ ಮನ ಬಂದಂತೆ ಕಠಿಣ ಶಿಕ್ಷೆ.

ಇತ್ತ ಬಂದವರು ಏನು ಮಾಡಿದರು ? ಅದು ಮುಖ್ಯ. ಕೊಂಕಣಿ ಮಾತೆಯ ಮಕ್ಕಳಾದ ರೋಮನ್ ಕೆಥೋಲಿಕರು ಮತ್ತು ಗೌಡ ಸಾರಸ್ವತ ಬ್ರಾಹ್ಮಣ ಸಮಾಜದವರು ಈ ಕರಾವಳಿ ಕರ್ನಾಟಕದಲ್ಲಿ ಶೈಕ್ಷಣಿಕ, ವೈದ್ಯಕೀಯ ಹಾಗೂ ಆರ್ಥಿಕರಂಗದಲ್ಲಿ ನೀಡಿದ ಕೊಡುಗೆ ಮಹತ್ತರವಾದುದು, ಅನನ್ಯವಾದುದು. ಇದನ್ನೇ ಲೇಖಕಿ ಮರಿಯಾ ಕೌಟೋ ಅವರು ತಮ್ಮ ಕೃತಿಯಲ್ಲಿ ಇನ್ನೊಂದು ರೂಪದಲ್ಲಿ ನಿರೂಪಿಸುತ್ತಾರೆ. ಗೋವಾದಲ್ಲಿ ನೆಲೆಯೂರಿದ ಕ್ರೈಸ್ತಧರ್ಮವು ಕ್ರಮೇಣ ತನ್ನ ಮೂಲತತ್ವಗಳಿಗೆ ಮರಳಿ ಸಹನೆ, ಅರ್ಪಣೆ ಮತ್ತು ಸೇವೆಗಳ ಧರ್ಮವಾಗಿ ರೂಪುಗೊಂಡಿದೆ.

ರೋಮನ್ ಕೆಥೋಲಿಕ್ ಕ್ರೈಸ್ತರು ಕಷ್ಟಸಹಿಷ್ಣುಗಳು, ಕೃಷಿಕಾರ್ಯಗಳಲ್ಲಿ ನಿಪುಣರು. ಆಗಿನ ಇಕ್ಕೇರಿಯ ಅರಸರು ತಮ್ಮ ಕೈ ಕೆಳಗಿದ್ದ ಕರಾವಳಿ ಕರ್ನಾಟಕ ಜಿಲ್ಲೆಗಳಲ್ಲಿ ಕೃಷಿಭೂಮಿಯನ್ನು ಕ್ರೈಸ್ತರಿಗಿತ್ತು ಅವರು ತಮ್ಮ ಕೃಷಿ ಜೀವನವನ್ನು ಸಾಂಗವಾಗಿ ನೆರವೇರಿಸಲು ಸಹಕಾರವನ್ನಿತ್ತರು ಎಂದು ಅಂಬೋಣ. ಗೌಡಸಾರಸ್ವತ

ಬ್ರಾಹ್ಮಣರು ಅಂಗಡಿಮುಗ್ಗಟ್ಟುಗಳನ್ನು ತೆರೆದು ವ್ಯಾಪಾರದ ಮೂಲಕ ತಮ್ಮ ಜೀವನೋಪಾಯವನ್ನು ಕಂಡುಕೊಂಡರು. ಅದು ಇಕ್ಕೇರಿ ಅರಸರ ಪ್ರಾಬಲ್ಯ ಕುಂದಿ, ಟಿಪ್ಪುಸುಲ್ತಾನನ ಆಳ್ವಿಕೆಯ ಕಾಲ. ಕ್ರೈಸ್ತರು ಬ್ರಿಟಿಷ್ ಸೈನ್ಯಕ್ಕೆ ಅಕ್ಕಿ, ದವಸ ಧಾನ್ಯಗಳನ್ನು ಪೂರೈಸುತ್ತಾರೆ ಎಂಬ ಗುಮಾನಿಯ ಮೇಲೆ ದಕ್ಷಿಣ ಕನ್ನಡದ ಎಲ್ಲಾ ಕ್ರೈಸ್ತರನ್ನು ಬಂಧಿಸಿ ೧೭೮೪ನೇ ಇಸವಿಯಲ್ಲಿ, ಶ್ರೀರಂಗಪಟ್ಟಣಕ್ಕೆ ದನಕರುಗಳನ್ನು ಅಟ್ಟಿಸಿಕೊಂಡು ಹೋದಂತೆ ಕೊಂಡೊಯ್ಯಲಾಗುತ್ತದೆ. ಅವರ ಭೂಮಿಗಳನ್ನು ಇತರ ಸಮಾಜದವರಿಗೆ ಹಂಚಿಕೊಡಲಾಗುತ್ತದೆ. ದಾರಿಯಲ್ಲಿ ಅನೇಕರು ವಿವಿಧ ಕಾರಣಗಳಿಗಾಗಿ ಪ್ರಾಣತ್ಯಾಗ ಮಾಡುತ್ತಾರೆ. ೧೭೯೯ನೇ ಇಸವಿಯಲ್ಲಿ ಟಿಪ್ಪುವಿನ ಪತನಾನಂತರ ಬಂಧಿಗಳಾದ ಕ್ರೈಸ್ತರ ಬಿಡುಗಡೆಯಾಗುತ್ತದೆ. ಕೆಲವರಿಗೆ ತಮ್ಮ ಹಿಂದಿನ ಭೂಮಿ ಸಿಗುತ್ತದೆ. ಕೃಷಿಕೆಲಸ ಕಾರ್ಯಗಳನ್ನು ಅಳಿದುಳಿದ ಜನರು ಮುಂದು ವರಿಸುತ್ತಾರೆ. ಕ್ರಮೇಣ 'ಫೀನಿಕ್ಸ್' ಹಕ್ಕಿಯಂತೆ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುತ್ತಾರೆ. ಕ್ರೈಸ್ತರು ಗೋವೆಯಲ್ಲಿ ಮನೆಮಠಗಳನ್ನು ಬಿಟ್ಟು ದಕ್ಷಿಣ ಕನ್ನಡಕ್ಕೆ ಬಂದು ಬಲಾಢ್ಯರಾಗುತ್ತ ಬರುವಾಗ ಟಿಪ್ಪುವಿನ ವ್ಯಾಘ್ರನಖದ ಹೊಡೆತದಲ್ಲಿ ಪುನಃ ಮನೆಮಾರುಗಳನ್ನು ಕಳೆದುಕೊಳ್ಳುತ್ತಾರೆ. ಆದರೆ ಈ ಕಷ್ಟ ಗೌಡಸಾರಸ್ವತರಿಗೆ ಒದಗುವುದಿಲ್ಲ. ಅದಕ್ಕಾಗಿ ಕರುಬುವುದಲ್ಲ, ಅವರಿಗೆ ಈ ಕಷ್ಟ ಸಿಗಲಿಲ್ಲವಲ್ಲಾ ಎಂದು ಸಂತೋಷವಾಗುತ್ತದೆ. ದೂರದೃಷ್ಟಿಯ ಕ್ರೈಸ್ತರು, ಬ್ರಿಟಿಷ್ ಆಧಿಪತ್ಯದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವು ತಮ್ಮ ಮಕ್ಕಳಿಗೆ ಉತ್ತಮ ಜೀವನ ಸಾಗಿಸಲು ಸಹಕಾರಿಯಾದೀತೆಂದು ಮನಗಂಡು ಮಂಗಳೂರಿನಲ್ಲಿ ಆಧುನಿಕ ವಿದ್ಯಾಲಯವನ್ನು ಸ್ಥಾಪಿಸಲು ಸಹಾಯ ಮಾಡಬೇಕೆಂದು ರೋಮ್‌ಗೆ ಮನವಿಯನ್ನು ಸಲ್ಲಿಸುತ್ತಾರೆ. ಪರಿಣಾಮವಾಗಿ ಯೂರೋಪಿನ ಶಿಕ್ಷಕರು ಎಂಬ ಬಿರುದಾಂಕಿತ ಜೆಸೂಯಿತ ಸಭೆಯ ಧರ್ಮಗುರುಗಳು ಮಂಗಳೂರಿಗೆ ಬಂದು ಈದ್ಗಾ/ಬಾವಟೆ ಗುಡ್ಡೆಯ ಮೇಲೆ ಇತಿಹಾಸ ಪ್ರಸಿದ್ಧ ಸಂತ ಎಲೋಶಿಯಸ್ ವಿದ್ಯಾಮಂದಿರವನ್ನು ಸ್ಥಾಪಿಸುತ್ತಾರೆ. ಜಾತಿಮತ ಭೇದವಿಲ್ಲದೆ ವಿದ್ಯಾದಾನದ ಕೆಲಸ ಮುಂದು ವರಿಯುತ್ತದೆ. ಇಂದು ದಕ್ಷಿಣ ಕನ್ನಡ ಜಿಲ್ಲೆಯು ವಿದ್ಯಾಕ್ಷೇತ್ರದಲ್ಲಿ ಹೆಸರು ಮಾಡಿದ್ದರೆ ಅದಕ್ಕೆ ಆ ಬಾವಟೆಗುಡ್ಡೆಯ ಮೇಲಿನ ವಿದ್ಯಾಲಯದ ಕೊಡುಗೆ ವಿಶಿಷ್ಟವಾದುದು. 'ಮಣಿಪಾಲದ ಬ್ರಹ್ಮ' ಖ್ಯಾತಿಯ ದಿ|| ಟಿ. ಎಂ. ಎ. ಪೈಯವರು ಇದನ್ನು ಮನಗಂಡು ಮುಕ್ತಕಂಠದಿಂದ ಹೊಗಳಿದ್ದಾರೆ. ವಿದ್ಯಾದಾನದ ನೆಪದಲ್ಲಿ ಕ್ರೈಸ್ತೀಕರಣವೇ ತಮ್ಮ ಉದ್ದೇಶವೆಂದು ಜೆಸುಯಿತ ಧರ್ಮಗುರುಗಳು ಮುಂದುವರಿದಿದ್ದರೆ ಪೈ ಮಹಾಶಯರು ಹಾಗೆ ಉದ್ಗರಿಸುತ್ತಿದ್ದರೆ ?

ಸಾಮಾನ್ಯವಾಗಿ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮತ್ತು ಅದರನಂತರ ಕೆಲವು ವರ್ಷಗಳವರೆಗೆ ಮೇಲೆ ಹೇಳಿದ ಎರಡೂ ಸಮಾಜಗಳ ನಡುವೆ ಅನ್ಯೋನ್ಯತೆಯಿತ್ತು. ಒಂದು ಸಂಘಟನೆ ವ್ಯವಸ್ಥಿತವಾಗಿ ನಡೆಸಿದ ಅಪಪ್ರಚಾರದಿಂದಾಗಿ ಈ ಎರಡು ಸಮಾಜಗಳ ನಡುವೆ ಕಂದಕವೇರ್ಪಟ್ಟಿತು. ಇತ್ತೀಚಿನ ದಿನಗಳಲ್ಲಿ ನಡೆದ ಘಟನೆಗಳು, ಪತ್ರಿಕೆಗಳಲ್ಲಿ ಪ್ರಕಟಗೊಂಡ ಬರೆಹಗಳು ಆ ಕಂದಕವನ್ನು ಇನ್ನೂ ಆಳವಾಗಿಸಿವೆ. ರೋಮನ್ ಕೆಥೋಲಿಕರು ಕೊಂಕಣಿ ಭಾಷಾ ಸಾಹಿತ್ಯದ ಉನ್ನತಿಗೆ ಅಗಾಧ ಕೊಡುಗೆ ಇತ್ತಿದ್ದಾರೆ. ಬೈಬಲ್ಲಿನ ಹಳೆ, ಹೊಸ ಒಡಂಬಡಿಕೆಗಳು ಕೊಂಕಣಿಗೆ ಭಾಷಾಂತರ ಗೊಂಡಿವೆ. ಲ್ಯಾಟಿನ್ ಭಾಷೆಯನ್ನು ಬದಿಗೊತ್ತಿ ತಮ್ಮ ಪೂಜಾ ವಿಧಾನಗಳಲ್ಲಿ ಕೊಂಕಣಿ ಭಾಷೆಯನ್ನು ಬಳಕೆ ಮಾಡಲು ಪ್ರಾರಂಭಿಸಿ ಅನೇಕ ವರ್ಷಗಳೇ ಉರುಳಿವೆ.

ಶ್ರೀ ಕಾಮತರು ರೋಮನ್ ಕೆಥೋಲಿಕರಿಗೆ ಇತರರನ್ನು ಮತಾಂತರ ಮಾಡುವುದು ಮಾಮೂಲಿ ಎನ್ನುತ್ತಾರೆ. ಇನ್ನೊಬ್ಬ ಮಹಾಶಯರು ಅವರು ನಡೆಸುವ ನೂರಾರು ಶಾಲೆಗಳಿವೆ, ಇದರಿಂದಾಗಿ ಎಳೆಯ ಮನಸ್ಸುಗಳಲ್ಲಿ ಮತಾಂತರದ 'ಕೊಳಕ'ನ್ನು ತುಂಬಿಸುವುದು ಸುಲಭ ಎನ್ನುತ್ತಾರೆ. ಬನ್ನಿರಿ, ಮಂಗಳೂರಿನ ಬಾವಟೆ ಗುಡ್ಡೆಗೆ, ನೋಡಿರಿ, ಭವ್ಯವಾಗಿ ನಿಂತ ಆ ಮಹಾವಿದ್ಯಾಲಯವನ್ನು. ಈ 'ಕಿರಿಸ್ತಾನ'ರ ವಿದ್ಯಾಲಯದಿಂದ ಹಿರಿಸ್ಥಾನಕ್ಕೇರಿದವರು ಸಹಸ್ರಸಹಸ್ರ ಮಂದಿ. ೧೯೬೦ರ ದಶಕದ ಚಿತ್ರಣ. ಅಗೋ ನೋಡಿರಿ, ಗಣಿತ ಶಾಸ್ತ್ರವೇ ಮೂರ್ತಿವೆತ್ತಂತಿರುವ ಪ್ರೊ|| ಕೃಷ್ಣಮೂರ್ತಿಯವರನ್ನು – ಶುಭ್ರವಾದ ಪಂಚೆ, ಬಿಳಿಬಣ್ಣದ ಜುಬ್ಬ ಮತ್ತದರ ಮೇಲೆ ರಾರಾಜಿಸುವ ಕೋಟು. ಬರೇ ಭೌತಶಾಸ್ತ್ರದ ಪುಸ್ತಕಗಳನ್ನಲ್ಲ, ಜೊತೆಗೆ ಚರಿತ್ರೆ, ರಾಜ್ಯಶಾಸ್ತ್ರ, ಆಂಗ್ಲ ಹಾಗೂ ಕನ್ನಡ ಭಾಷಾಗ್ರಂಥಗಳನ್ನು ಓದಿ ಜ್ಞಾನ ಭಂಡಾರವನ್ನು ವೃದ್ಧಿಸಬೇಕೆಂದು ವಿದ್ಯಾರ್ಥಿಗಳಿಗೆ ಬೋಧಿಸುವ ಪ್ರೊ|| ನಾರಾಯಣ ಹೊಳ್ಳರು ಅಗೋ ಅಲ್ಲಿದ್ದಾರೆ. ಶುಭ್ರವಾದ ಬಿಳಿ ಕಚ್ಚೆ, ಕಪ್ಪುಕೋಟು ಅವರ ದಿರಿಸು. ನಲ್ವತ್ತು ಐವತ್ತು ವರ್ಷಗಳ ಹಿಂದೆ ಭಾನುವಾರ ಚರ್ಜಿಗೆ, ಅಥವಾ ಮಗಳನ್ನು ಮದುವೆ ಮಾಡಿಕೊಟ್ಟ ಮನೆಗೆ 'ಸಾಂತ್‌ಮಾರಿ'ಗೆ (ಕರಾವಳಿ ಕ್ರೈಸ್ತರ ವಾರ್ಷಿಕ ಹಬ್ಬ) ಹೊರಟ 'ಕಿರಿಸ್ತಾನ ಪೊರ್ಬು' ಮಹಾಶಯರನ್ನು ನೆನಪಿಸುವ ಉಡುಗೆ. ಇತ್ತ ನೋಡಿರಿ. ಮದಗಜನಡಿಗೆಯಿಂದ ಥೇಟು ಹವ್ಯಕ ಬ್ರಾಹ್ಮಣ ಶೈಲಿಯ, ಕೈ ಬೆರಳುಗಳನ್ನು ಮುಚ್ಚಲು ಹವಣಿಸುತ್ತಿರುವ ನೀಳವಾದ ಜುಬ್ಬ (ಪೈರನ್) ಮತ್ತು ಅದಕ್ಕೊಪ್ಪುವ ಕಚ್ಚೆಯೊಂದಿಗೆ ಬರುತ್ತಿರುವ ಪ್ರೊ|| ತೆಕ್ಕುಂಜ ಗೋಪಾಲಕೃಷ್ಣ ಭಟ್ಟರನ್ನು, ಕನ್ನಡ ಭಾಷೆಯಲ್ಲಿ ಅಗಾಧ ಪಾಂಡಿತ್ಯ, ಯಕ್ಷಗಾನದೆಡೆ ಒಲವು, ಸ್ವರ್ಣಕಮಲ-ಅರ್ಕುಳ ಸುಬ್ರಾಯಾಚಾರ್ಯರ (ಯಕ್ಷಗಾನ ಅರ್ಥಧಾರಿ) ಕುರಿತು ಅತೀವ ಅಭಿಮಾನ ಹೊಂದಿದ ಭಟ್ಟರನ್ನು, ಮರೆಯಲುಂಟೇ ? ಇದೇ ವಿದ್ಯಾಲಯದಲ್ಲಿ ಕನ್ನಡದ ಕೋಗಿಲೆ, ವೀರಬಂಕೆಯ ಖ್ಯಾತಿಯ ಮುಳಿಯ ತಿಮ್ಮಪ್ಪಯ್ಯನವರು ಪಾಠಮಾಡು ತ್ತಿರುವಾಗ ಕುಮಾರವ್ಯಾಸ ರಚಿತ ಗದುಗಿನ ಭಾರತದ ಭಾಮಿನಿ ಷಟ್ಪದಿಯ ಪದ್ಯಗಳನ್ನು ಇಂಪಾಗಿ ಹಾಡುವುದು ಹೃನ್ಮನಗಳನ್ನು ತಣಿಸುವಂಥದ್ದಾಗಿತ್ತು ಎಂಬುದು ೧೯೪೦ರ ದಶಕದಲ್ಲಿ ಕಲಿತ ನನ್ನ ಅಣ್ಣನವರ ಹೇಳಿಕೆ. ಇಂಗ್ಲಿಷ್ ಪ್ರಾಧ್ಯಾಪಕ ಹಾಗೂ

## ಸಾದರ ಸ್ವೀಕಾರ

**ಕನ್ನಡ - ಕನ್ನಡಿಗ - ಕರ್ನಾಟಕ** (ಪರಿಷ್ಕೃತ ಆರನೇ ಮುದ್ರಣ)
ಸಂ. ರಾ. ನಂ. ಚಂದ್ರಶೇಖರ ಮತ್ತು ಇತರರು
ಪುಟ : ೨೪೩ ಬೆಲೆ : ರೂ. ೧೨೦
**ಸಪ್ನ ಬುಕ್ ಹೌಸ್**, ಬೆಂಗಳೂರು - ೫೬೦ ೦೦೯.

**ತೇರನೇರಿದ ಚೆನ್ನಿ** (ಕವನ ಸಂಕಲನ)
ವಿದ್ಯಾಧರ ಮುತಾಲಿಕ ದೇಸಾಯಿ
ಪುಟ : ೧೧೦ ಬೆಲೆ : ರೂ. ೯೦
**ಮುಂಬೆಳಕು ಕನ್ನಡ ಬಳಗ**, ಡಿ - ೩೦೨, ಹಿಮಗಿರಿ, ಲೋಕಧಾರಾ, ಕಲ್ಯಾಣ (ಪೂರ್ವ) ಮುಂಬಯಿ.

**ವಿಚಾರ ತುಷಾರ** ಡಾ|| ಸಿ. ಪಿ. ಕೃಷ್ಣಕುಮಾರ್
ಪುಟ : ೧೯೨ ಬೆಲೆ : ರೂ. ೭೫
**ಚಿತ್ರಭಾನು ಪ್ರಕಾಶನ**, ೫ನೇ ಮುಖ್ಯರಸ್ತೆ ವಿನಾಯಕ ನಗರ, ಮೈಸೂರು.

**ಹನಿ - ಧ್ವನಿ** (ಕವನ ಸಂಕಲನ) ವಿಜಯಾ ಶ್ರೀಧರ್
ಪುಟ : ೮೬ ಬೆಲೆ : ರೂ. ೫೦
**ಶ್ರೀವಿಜಯ ಪ್ರಕಾಶನ** ''ಶ್ರೀವಿಜಯ'' ೬ನೇ ಕ್ರಾಸ್, ರಾಜೇಂದ್ರ ನಗರ, ಶಿವಮೊಗ್ಗ - ೫೭೭೨೦೪

**ಬಿ. ನೆಗೆಟಿವ್** ಕೆ. ಎಸ್. ರವಿಕುಮಾರ್
ಪುಟ : ೯೬ ಬೆಲೆ : ರೂ. ೨೦
**ಕ್ಯೂಬಾ ಕ್ರಾಂತಿ ಮತ್ತು ಮನುಕುಲದ ಪ್ರಗತಿ**
ಫಿಡೆಲ್ ಕ್ಯಾಸ್ಟ್ರೊ, ಕನ್ನಡಕ್ಕೆ : ಕೆ. ಎಸ್. ರವಿಕುಮಾರ್
ಪುಟ : ೬೮ ಬೆಲೆ : ರೂ. ೨೦
ಈ ಎರಡೂ ಪುಸ್ತಕಗಳ ಪ್ರಕಾಶಕರು
**ಚಿಂತನ ಪುಸ್ತಕ**, ೧೮೬೩, ೩೮ನೇ ಕ್ರಾಸ್, ೧೧ನೇ ಮೈನ್, ಜಯನಗರ ೪ನೇ ಬ್ಲಾಕ್, ಬೆಂಗಳೂರು - ೫೬೦೦೪೧

**ಕೋಮುಗಲಭೆಗಳು ಹಾಗೂ ಭಾರತದ ಪೊಲೀಸರು**
ವಿಭೂತಿ ನಾರಾಯಣ ರಾಯ್
ಅನು: ಹಸನ್ ನಯೀಂ ಸುರಕೋಡ
ಪುಟ : ೧೩೬ ಬೆಲೆ : ರೂ. ೬೦
**ಪುಟಾಣಿ ಕೆಂಪು ಶೂ** (ಕವನ ಸಂಕಲನ) ಛಾಯಾ ಭಗವತಿ
ಪುಟ : ೫೬ ಬೆಲೆ : ರೂ. ೩೦
**ರಂಗಕೋಗಿಲೆ ಜುಬೇದಾಬಾಯಿ** ವೀಣಾ ಕುಲಕರ್ಣಿ
ಪುಟ : ೧೦೦ ಬೆಲೆ : ರೂ. ೪೫
**ದರುಶನ** (ಕವನ ಸಂಕಲನ) ಸವಿತಾ ನಾಗಭೂಷಣ
ಪುಟ : ೭೨ ಬೆಲೆ : ರೂ. ೪೦
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲೋಹಿಯಾ ಪ್ರಕಾಶನ**, 'ಕ್ಷಿತಿಜ' ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩೨೦೪.

**ಭಾರತೀಯ ಖಗೋಳ ವಿಜ್ಞಾನದಲ್ಲಿ ಸಂಕ್ರಮಗಳು ಮತ್ತು ಆಚ್ಛಾದನೆಗಳು** (ಇಂಗ್ಲಿಷ್) ಡಾ|| ಎಸ್. ಬಾಲಚಂದ್ರರಾವ್
ಡಾ|| ಪದ್ಮಜ ವೇಣುಗೋಪಾಲ್
ಪುಟ : ೧೩೦ ಬೆಲೆ : ರೂ. ೭೫
**ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧಿ ಕೇಂದ್ರ**, ಭಾರತೀಯ ವಿದ್ಯಾಭವನ, ೪೩/೧ ರೇಸ್ ಕೋರ್ಸ್ ರಸ್ತೆ ಬೆಂಗಳೂರು - ೫೬೦ ೦೦೧

ಪ್ರಾಂಶುಪಾಲರಾದ ಫಾ। ಜೇಕ್ಸ್ ಅವರು ಗೋಡೆಯ ಮರೆಯಲ್ಲಿ ನಿಂತು ಮುಳಿಯ ಅವರ ಇಂಪಾದ ಧ್ವನಿಗೆ ಕಿವಿಗೊಡುತ್ತಿದ್ದರಂತೆ. ಮೇಲೆ ಉಲ್ಲೇಖಿಸಿದ ಮಹಾನುಭಾವರು ಅವರವರ ಕ್ಷೇತ್ರದಲ್ಲಿ ಪಂಡಿತ ಶಿಖಾಮಣಿಗಳು. 'ಕಿರಿಸ್ತಾನ'ರ ಈ ವಿದ್ಯಾಲಯದಲ್ಲಿ ಅವರ ಮನಸ್ಸೂ ಮತಾಂತರ ಹೊಂದಲಿಲ್ಲ, ಜೊತೆಗೆ ಅವರ ದಿರಿಸೂ ಪ್ಯಾಂಟು ಸಂಸ್ಕೃತಿಗೆ ಬದಲಾಗಲಿಲ್ಲ. ಪಾಪ! ಲಾರ್ಡ್ ಮೆಕಾಲೆ ಉವಾಚ ಈಡೇರಲಿಲ್ಲ.

ಉದಯವಾಣಿ ಪತ್ರಿಕೆಯಲ್ಲಿ ಇನ್ನೊಬ್ಬ ಬರೆಹಗಾರರು ಮೆಕಾಲೆ ಶಿಕ್ಷಣ ನೀತಿಯ ಬಗ್ಗೆ ಕಿಡಿಕಾರಿದ್ದರು. ಮೆಕಾಲೆ ದೊರೆ ಇಡೀ ಭರತಖಂಡವೇ ಕ್ರೈಸ್ತಮತಾವಲಂಬಿಯಾಗುವುದು ಎಂದು ಕನಸು ಕಂಡಿದ್ದರಂತೆ. ಗೋವಾದಲ್ಲಿ ಪೋರ್ಚುಗೀಸರು ವಸಾಹತುಶಾಹಿ ಧೋರಣೆಯೊಂದಿಗೆ ಧರ್ಮ ಪ್ರಚಾರದಲ್ಲಿಯೂ ಮುತುವರ್ಜಿ ವಹಿಸಿದ್ದರೆಂದು ಚಾರಿತ್ರಿಕವಾಗಿ ತಿಳಿದುಬರುವ ವಿಷಯ. ಆದರೆ ಬ್ರಿಟಿಷರು ಹಾಗಲ್ಲ. ವಸಾಹತುಗಳನ್ನು ಸ್ಥಾಪಿಸಿ ಸಾಧ್ಯವಾದಷ್ಟು ಸಂಪತ್ತನ್ನು ದೋಚುವುದೇ ಅವರ ಜಾಯಮಾನವಾಗಿತ್ತು. ಮೆಕಾಲೆ ಶಿಕ್ಷಣ ನೀತಿ ಜಾರಿಗೆ ಬಂದುದು ಭಾರತೀಯರ ಮೇಲಿನ ಮಮಕಾರ ದಿಂದಲೂ ಅಲ್ಲ, ಕ್ರೈಸ್ತೀಕರಣದ ಹುಮ್ಮಸ್ಸಿನಿಂದಲೂ ಅಲ್ಲ. ಸಂಪತ್ತನ್ನು ದೋಚಬೇಕಾದರೆ ವ್ಯವಸ್ಥಿತವಾದ ಆಡಳಿತ ಯಂತ್ರವೂ ಬೇಕಲ್ಲವೇ? ಬಿಳಿತೊಗಲಿನ ಜನರನ್ನು ತಂದು ಇಲ್ಲಿ ಎಲ್ಲಾ ಸ್ಥಾನಗಳಲ್ಲಿ ಸ್ಥಾಪಿಸಲು ಸಾಧ್ಯವಾಗದ ಮಾತು. ಉನ್ನತ ಸ್ಥಾನಗಳಲ್ಲಿ ಅವರಿದ್ದರೂ ಸ್ವಲ್ಪ ಪುಡಿಗಾಸನ್ನು ಚೆಲ್ಲಿ ಸಣ್ಣಮಟ್ಟದ ಕೆಲಸಕಾರ್ಯಗಳನ್ನು ಮಾಡಿಸಲು ಸ್ಥಳೀಯರ ಸಹಕಾರ ಅವರಿಗೆ ಬೇಕಿತ್ತು. ಇಂಗ್ಲಿಷಿನ ಸಾಮಾನ್ಯ ಜ್ಞಾನ ಬೇಕಲ್ಲವೆ? ಅದಕ್ಕಾಗಿ ಮೆಕಾಲೆ ಶಿಕ್ಷಣನೀತಿ ಜಾರಿಗೆ ಬಂತು. ಜಠರವನ್ನು ತಂಪುಮಾಡಲು ಉದ್ಯೋಗದ ಆಸರೆಯು ಈ ಭಾರತೀಯ 'ಕುರಿಜನರಿಗೆ' ಸಿಗುವುದರಿಂದ ಕ್ರಮೇಣ ಆಳರಸರ ಧರ್ಮವನ್ನು ಅವರೆಲ್ಲರೂ ಅನುಸರಿಸಿಯಾರು ಎಂಬ ಕನಸನ್ನು ಮೆಕಾಲೆ ಕಂಡಿರಬಹುದು. ಆದರೆ ಕನಸು ಬಹುಮಟ್ಟಿಗೆ ನನಸಾಗಲಿಲ್ಲ. ಯಾಕೆ ಆಗಲಿಲ್ಲ? ಬಾವಟೆಗುಡ್ಡೆಯ ಆ ಮಹಾವಿದ್ಯಾಲಯದ ಒಂದು ನಿದರ್ಶನವೇ ಸಾಕು. ಬಲಾತ್ಕಾರವಾಗಿ ಬ್ರಿಟಿಷರು ಕ್ರೈಸ್ತಧರ್ಮವನ್ನು ಈ ದೇಶದಲ್ಲಿ ಹೇರಲು ಪ್ರಯತ್ನ ಪಡಲಿಲ್ಲವೆಂಬುದು ಚರಿತ್ರಕಾರರ ಅಭಿಮತ. ಅವರದು ಏನಿದ್ದರೂ ಇಲ್ಲಿನ ಸಂಪತ್ತನ್ನು ದೋಚುವುದೇ ಪ್ರಮುಖ ಉದ್ದೇಶ. ಹಡಗಿನಲ್ಲಿ ಸಂಪತ್ತನ್ನು ಹೇರಿ ಹಡಗನ್ನು ನೀರಿಗಿಳಿಸುವಾಗ ''ಓ ಪರಲೋಕದಲ್ಲಿರುವ ತಂದೆಯೇ! ನೀನು ನಿನ್ನನ್ನು ಪ್ರೀತಿಸಿದಂತೆ ಇತರರನ್ನೂ ಪ್ರೀತಿಸು'' ಎಂದು ನಮಗೆ ಅಪ್ಪಣೆಯನ್ನಿತ್ತಿದ್ದಿಯಲ್ಲವೇ? ಆದರೇನು ಮಾಡೋಣ? ಪರಿಸ್ಥಿತಿಯ ಒತ್ತಡದಿಂದ ನಮ್ಮ ಹೆಂಡತಿ ಮಕ್ಕಳ ಉತ್ತಮ ಜೀವನಕ್ಕಾಗಿ ಭರತಖಂಡದ ಮಣ್ಣಿನ ಮಕ್ಕಳ ಬಾಯಿಗೆ ಮಣ್ಣು ಹಾಕಿ ಸಂಪತ್ತನ್ನು ಕೊಂಡು ಹೋಗುತ್ತಿದ್ದೇವೆ. ನಮ್ಮನ್ನು ಕ್ಷಮಿಸು. ಎಲ್ಲರಿಗೂ ಒಳ್ಳೆಯದನ್ನು ಮಾಡುವ ದಯಾಳುವಾದ ನೀನಿಲ್ಲವೇ? ಭರತಖಂಡದ ಅರೆನಗ್ನ ಮಕ್ಕಳನ್ನು ನೀನು ಸಲಹು,'' ಎಂದು ಪ್ರಾರ್ಥಿಸುತ್ತಿದ್ದರೇನೋ? ನಮಗೆ ತಿಳಿದಿಲ್ಲ!

ಇದೇ ಉದಯವಾಣಿ ಪತ್ರಿಕೆಯಲ್ಲಿ ಇನ್ನೊಬ್ಬ ಬರೆಹಗಾರರು ಮತಾಂತರವಾಗಲು ಇನ್ನೇನೂ ಬಾಕಿ ಉಳಿದಿಲ್ಲವೆಂದು ಅಳಲನ್ನು ತೋಡಿಕೊಂಡಿದ್ದಾರೆ. ಹಿಂದೂಧರ್ಮವನ್ನು ತ್ಯಜಿಸಿ ಕ್ರೈಸ್ತಧರ್ಮ ಸ್ವೀಕಾರ ಮಾಡಲು ಜನರೆಲ್ಲರೂ ಹಾತೊರೆಯುತ್ತಿದ್ದಾರೆ ಎಂದು ಅವರ ಅಭಿಪ್ರಾಯವಲ್ಲ. ಉಡುಗೆ ತೊಡುಗೆ, ಆಚಾರವಿಚಾರ ಕ್ರೈಸ್ತ ಮತೀಯರ ಅವಲಂಬನೆ ಯಾಗಿದೆಯೆಂದು ಅವರ ಮತ. ಧರಿಸುವ ಚಡ್ಡಿ (ಮುತಾಲಿಕ್‌ಗೆ ಕಳುಹಿಸಿದ ಪಿಂಕ್ ಚಡ್ಡಿಯಲ್ಲ) ಮತ್ತು ಪ್ಯಾಂಟುಗಳು ಪಾಶ್ಚಾತ್ಯರು ನಮಗೆ ಕೊಟ್ಟ ಬಳುವಳಿ ಎಂದವರ ಒಳಾರ್ಥ. ನಮ್ಮ ಅನುಕೂಲಕ್ಕಾಗಿ ನಾವು ಅವುಗಳನ್ನು ಬಳಸಿಕೊಂಡಿದ್ದೇವೆ. ಭಾರತೀಯ ಸಂಸ್ಕೃತಿಯ ಕಚ್ಚೆ, ಪಂಚೆಗಳಿಗೆ ಅವುಗಳದೇ ಆದ ಘನತೆಗೌರವಗಳಿವೆ. ಈಗಿನದು ಹೇಳಿಕೇಳಿ ವೇಗೋತ್ಕರ್ಷದ ಯುಗವಲ್ಲವೇ? ಕ್ಷಿಪ್ರಗತಿಯಲ್ಲಿ ನಮ್ಮ ಕೆಲಸಕಾರ್ಯಗಳನ್ನು ನೆರವೇರಿಸಲು ಈ ಚಡ್ಡಿ-ಪ್ಯಾಂಟುಗಳು ಹೆಚ್ಚು ಸೂಕ್ತ. ಕಚ್ಚೆ ಸಡಿಲಾದರೆ? ಪಂಚೆ ಜಾರಿದರೆ? ವ್ಯಾಯಾಮ, ಕೆಲಸಕಾರ್ಯಗಳಿಗೆ ವಿಘ್ನವೊದಗುತ್ತದೆ. ಹಾಗಾಗಬಾರದಲ್ಲವೇ? ಆದುದರಿಂದ ಜನರು ಚಡ್ಡಿ-ಪ್ಯಾಂಟುಗಳತ್ತ ಒಲವನ್ನು ತೋರುತ್ತಾರೆ. ಬದಲು ಜನಮನದ ಮತಾಂತರ ವಾಗಿದೆಯೆಂದು ಅಳಲನ್ನು ತೋಡಿಕೊಂಡರೆ ಅದು ವ್ಯರ್ಥಾಲಾಪವಾಗುವುದಿಲ್ಲವೇ? ಬ್ರಿಟಿಷರು ಬಿಟ್ಟುಹೋದ ಇಂಗ್ಲಿಷನ್ನು ಅತಿ ವ್ಯಾಮೋಹದಿಂದ ಬಳಸಿಕೊಂಡಿದ್ದೇವೆ. ಈಗಿನ ತಾಂತ್ರಿಕ ಉನ್ನತ ಶಿಕ್ಷಣವನ್ನು ಪೂರೈಸಲು ಆಂಗ್ಲ ಭಾಷೆ ನಮಗೆ ಬೇಕಲ್ಲವೇ? ಕ್ರಿಕೆಟ್ ಬ್ರಿಟಿಷರ ಆಟ. ಆದರೆ ಭರತಖಂಡದಲ್ಲಿ ಅದು ಒಂದು ಧರ್ಮದ ಸ್ಥಾನವನ್ನು ಗಳಿಸಿಕೊಂಡಿದೆಯೆಂದು ಹೇಳುತ್ತೇವೆ. ಆದರೆ ಅವರು ಕಟ್ಟುನಿಟ್ಟಾಗಿ ಪಾಲಿಸಿದ ಕಾನೂನು ಬದ್ಧ ಆಡಳಿತ ಮತ್ತು ಶಿಸ್ತಿಗೆ ತಿಲಾಂಜಲಿಯನ್ನಿತ್ತಿದ್ದೇವೆ. ಅತಿ ಭ್ರಷ್ಟ ದೇಶಗಳಲ್ಲಿ ಭಾರತವೂ ಒಂದು ಎಂಬ ಕುಖ್ಯಾತಿಯಿದೆ. ತೀರಾ ಇತ್ತೀಚೆಗೆ ನಾವು ಅವರಿವರಂಥಲ್ಲ, ನಮ್ಮದು 'ಸಾಚಾ' ಪಕ್ಷ ಎಂದು ಹೇಳಿಕೊಳ್ಳುತ್ತಿರುವ ರಾಜಕೀಯ ಪಕ್ಷದ ಶಾಸಕರೊಬ್ಬರು ಐದು ಲಕ್ಷ ರೂಪಾಯಿ ಲಂಚ ಸ್ವೀಕರಿಸುತ್ತಿರುವಾಗ ಲೋಕಾಯುಕ್ತರ ಬಲೆಯಲ್ಲಿ ಸಿಕ್ಕಿಬಿದ್ದಿದ್ದಾರೆ. ವಿರೋಧ ಪಕ್ಷದ ಮಹನೀಯರೊಬ್ಬರು, ಅದು ಚಿತ್ತಚಕಿತಗೊಳಿಸುವ ವಿಷಯವಲ್ಲ; ಹಿಂದಿನಿಂದಲೂ ಇದ್ದದ್ದೇ ಎಂದು ಹೇಳುತ್ತಾರೆ. ಹಾಗಾದರೆ ಶಾಸಕ ಭವನದಿಂದ ಮೊದಲ್ಗೊಂಡು ಕುಗ್ರಾಮದ ಗ್ರಾಮಪಂಚಾಯತ್‌ವರೆಗೂ, ಅವೆಲ್ಲವೂ ವಿತ್ತಕೇಳಿಯ ಆಡುಂಬೊಲಗಳಾಗಿವೆಯೇ? ಬರೇ ಲಂಚ, ರುಶುವತ್ತು ಮಾತ್ರ ಭ್ರಷ್ಟಾಚಾರವಲ್ಲ. ನೇಮಕಾತಿ, ವರ್ಗಾವಣೆ, ಬಡ್ತಿಯ ಸಂದರ್ಭದಲ್ಲಿಯೂ ಧರ್ಮ, ಜಾತಿ, ಮತ, ಬಣ್ಣ, ಪ್ರದೇಶ ಇತ್ಯಾದಿ ಅಂಶಗಳೂ ಪ್ರಮುಖ ಪಾತ್ರ ವಹಿಸುತ್ತವೆ. ಇದೂ ಭ್ರಷ್ಟಾಚಾರದ ಇನ್ನೊಂದು ಮುಖ. ಭ್ರಷ್ಟಾಚಾರವು ಭಾರತದ ಸಾರ್ವಜನಿಕ ರಂಗದ ಅರ್ಬುದ ರೋಗ. ರಾಜಕೀಯ ಪಕ್ಷಗಳಲ್ಲಿ ಇದರ ಬಗ್ಗೆ ಚಕಾರವೆತ್ತುವವರಿಲ್ಲ. ಕೆಲವರು ಇದರ ಬಗ್ಗೆ ಹಾರಿಕೆಯ ಮಾತನ್ನೇ ಆಡುತ್ತಿರುತ್ತಾರೆ. ಉತ್ತಮ, ಭ್ರಷ್ಟಾಚಾರ ರಹಿತ ಆಡಳಿತ ನೀಡಲು ಮನಸ್ಸು ಮತಾಂತರವಾಗಬೇಕಾಗಿದೆ. ಇಂಗ್ಲಿಷ್ ಭಾಷೆ ಮತ್ತು ಕ್ರಿಕೆಟ್ ಇಲ್ಲದಿದ್ದರೂ ನಡೆದೀತು. ಪ್ರಪಂಚದ ಕೆಲವು ರಾಷ್ಟ್ರಗಳು ಅದನ್ನು ಸಾಧಿಸಿ ತೋರಿಸಿವೆ.

ಲೇಖನಿ ಖಡ್ಗಕ್ಕಿಂತ ಮಿಗಿಲು ಎನ್ನುತ್ತಾರೆ. ಜ್ಞಾನಿಗಳಾದ ಶ್ರೀ ಕಾಮತ್ ಅವರು ತಮ್ಮ ಲೇಖನಿಯನ್ನು ಖಡ್ಗವನ್ನಾಗಿಸಿ ಕ್ರೈಸ್ತ ಸಮಾಜದ ಮೇಲೆ ಝಳಪಿಸುತ್ತಾ ಇದ್ದಾರೆ. ನಾಲ್ಕು ನೂರು, ಐನೂರು ವರ್ಷಗಳ ಹಿಂದಿನ ಘಟನೆಗಳನ್ನು ಕೆದಕಿ ಗಬ್ಬುವಾಸನೆ ಹರಡುತ್ತಿದ್ದಾರೆ. ತಮ್ಮ ಲೇಖನಿಯ ಮುಖಾಂತರ ಮೇಲೆ ಹೇಳಿದ ಎರಡೂ ಸಮಾಜದವರು ಮಾಡಿದ ಉತ್ತಮ ಕಾರ್ಯಗಳನ್ನು ಉಲ್ಲೇಖಿಸುತ್ತಾ ಅವರನ್ನು ಹುರಿದುಂಬಿಸಲು ಮುಂದಾದರೆ ಅದು ಧರ್ಮ. ಒಂದು ಸಂಘಟನೆಯವರು ನಿರ್ಮಿಸಿದ ಕಂದಕವನ್ನು ತಮ್ಮ ಲೇಖನಿಯ ಹರಿತದ ಮೂಲಕ ಇನ್ನಷ್ಟು ಆಳ, ಅಗಲವಾಗಿಸುವುದಾದರೆ ಅದು ಅಧರ್ಮವೆನ್ನದೆ ನಿರ್ವಾಹವಿಲ್ಲ. ಶ್ರೀಕೃಷ್ಣ ಸಂಧಾನ ಆಖ್ಯಾನದಲ್ಲಿ ಖ್ಯಾತ ಯಕ್ಷಗಾನ ಕಲಾವಿದ ಶ್ರೀ ಕೆರೆಮನೆ ಮಹಾಬಲ ಹೆಗಡೆಯವರು ಕೌರವ ಪಾತ್ರಧಾರಿಯಾಗಿ ನುಡಿದ ಮಾತುಗಳು: ''ಕೃಷ್ಣಾ! ನನಗೆ ಧರ್ಮವೇನೆಂದು ತಿಳಿದಿದೆ. ಅದರ ನೆಲೆಬೆಲೆ ಅರಿತಿದ್ದೇನೆ. ಅಧರ್ಮದ ಅರಿವೂ ಇದೆ. ಆದರೇನು ಮಾಡೋಣ? ಅಧರ್ಮದಿಂದ ನಿವೃತ್ತಿಯಿಲ್ಲ; ಧರ್ಮದೆಡೆಗೆ ಪ್ರವೃತ್ತಿಯಿಲ್ಲ. ಭಕ್ತಿಯೆಂಬ ಪುಷ್ಪವನ್ನು ಹೃದಯವೆಂಬ ಹರಿವಾಣದಲ್ಲಿರಿಸಿ ಇಗೋ ನಿನಗರ್ಪಿಸುತ್ತಿದ್ದೇನೆ, ಸ್ವೀಕರಿಸು. ಯುದ್ಧಕ್ಕೆ ಅಪ್ಪಣೆ ಕೊಡು.'' ಛಲದಂಕಮಲ್ಲ ಕೌರವನು ಯುದ್ಧವೇ ಸಿದ್ಧವೆಂದು ಬದ್ಧ ಕಂಕಣನಾಗಿ ಸಂಧಾನದ ಕೃಷ್ಣನಲ್ಲಿ ಅವನ ಸಾನ್ನಿಧ್ಯವನ್ನು ಸೇರಲು ತನ್ನ ತವಕ ಮತ್ತು ಸಂದಿಗ್ಧ ಪರಿಸ್ಥಿತಿಯನ್ನು ವಿವರಿಸುತ್ತಾನೆ. ಶ್ರೀ ಕಾಮತರಿಗೆ ಏನು ಸಂದಿಗ್ಧತೆ? ಐನೂರು ವರ್ಷಗಳ ಹಿಂದಿನ ಘಟನೆಗಳನ್ನು ಕೆದಕಿ ಮತೀಯ ವೈಮನಸ್ಸೆಂಬ ಬೆಂಕಿಗೆ ತುಪ್ಪವನ್ನು ಬರಿದೆ ಸುರಿಯುತ್ತಾ ಇದ್ದಾರೆ.

ಒಂದು ಕಾಲದಲ್ಲಿ ಹಿರಿಯಡ್ಕ ಯಕ್ಷಗಾನ ಮೇಳದಲ್ಲಿ ಅಂಗದ ಪ್ರಹಸ್ತರಾಗಿ ರಾರಾಜಿಸಿದ ಮಲ್ಪೆ ಶಂಕರನಾರಾಯಣ ಸಾಮಗರು ಮತ್ತು ಗುರು ವೀರಭದ್ರ ನಾಯಕರು, ಸಾಲಿಗ್ರಾಮ ಮೇಳದ ಆರಂಭದ ದಿನಗಳಲ್ಲಿ ಮಾಗಧವಧೆ ಪ್ರಸಂಗದಲ್ಲಿ ಕೃಷ್ಣ ಮಾಗಧರಾಗಿ ಎದುರಾಗುತ್ತಾರೆ. ಬ್ರಾಹ್ಮಣ ವೇಷದ ಕೃಷ್ಣನು ಮಗಧೇಶನಿಗೆ ಹೇಳುವ ಮಾತು, ''ನೀನೂ ಬದುಕು, ಉಳಿದವರನ್ನೂ ಬದುಕಲಿಕ್ಕೆ ಬಿಡು.'' ಈ ಮಾತುಗಳು ಈಗಿನ ಪರಿಸ್ಥಿತಿಯಲ್ಲಿ ಹೆಚ್ಚು ಅರ್ಥಪೂರ್ಣವಾಗಿವೆ.

ಎ.ಜೆ.ಡಿ'ಸೋಜಾ
'ಸುಕೃತಿ', ಲಯನ್ಸ್ ಭವನದ ಹಿಂದೆ, ಬ್ರಹ್ಮಗಿರಿ
ಅಂಬಲಪಾಡಿ ಅಂಚೆ, ಉಡುಪಿ - ೫೭೬೧೦೩

ಹೊಸ ಓದು

## ಬದುಕೂರಿನ ದಾರಿಯಲ್ಲಿ (ಕಥಾ ಸಂಕಲನ)

ಅರ್ಜುನ ತಾ. ಕೋರಟಕರ 'ಭಾವಜ್ಞ'

**ಪುಟ : x + ೧೦೨** **ಬೆಲೆ : ರೂ. ೭೦**

**ಸುಂದರ ಪ್ರಕಾಶನ,** 'ಚಿತ್ರಶ್ರೀ' ೪೩, ಕಲಾಮಂದಿರ ೫ನೇ ತಿರುವು, ಅ ನ ಸು ರಸ್ತೆ, ಹನುಮಂತನಗರ, ಬೆಂಗಳೂರು - ೫೬೦ ೦೧೯

ಈ ಹನ್ನೆರಡು ಬಿಡಿಕಥೆಗಳ ಸಂಕಲನದಲ್ಲಿನ ಕಥೆಗಳಲ್ಲಿ ವಿವಿಧ ಜನಜೀವನದ ಪರಿಚಯವಾಗುತ್ತದೆ. ಕೆಲವೊಮ್ಮೆ ಬದುಕಿನ ವಾಸ್ತವಗಳು ನಮ್ಮನ್ನು ದಂಗುಬಡಿಸುತ್ತವೆ. ವಾಸ್ತವಗಳೆಲ್ಲ ಸುಂದರ ಸ್ವಪ್ನಗಳೂ ಅಲ್ಲ; ಸಿಹಿನೀರ ಬುಗ್ಗೆಗಳೂ ಅಲ್ಲ. ಬದುಕಿನ ದಾರಿಯಲ್ಲಿ ಒಳಿತು ಕೆಡುಕುಗಳು ನಮ್ಮ ಎಡ-ಬಲಗಳಲ್ಲಿ ಸಮಾನಾಂತರದಲ್ಲಿರುತ್ತವೆ. ನಾವು ತಿಳಿದಿರುವುದಕ್ಕಿಂತ ಈ ಲೋಕ ಭಿನ್ನವಾಗಿರುವುದನ್ನು ಕೆಲಮಟ್ಟಿಗೆ ಇಲ್ಲಿನ ಕಥೆಗಳು ನಿರೂಪಿಸಲು ಯತ್ನಿಸುತ್ತವೆ. ''ಹೃದಯ ಇಲ್ಲದೆಯೂ ಬದುಕಬಹುದು'' ಎಂಬ ಕಥೆ ತುಸು ಭಿನ್ನವಾಗಿ ಮನಸೆಳೆಯುತ್ತದೆ.

## W.T.O. ಜಾಗತೀಕರಣ ಮತ್ತು ಗ್ರಾಮಭಾರತ

ಡಾ|| ಎನ್. ಜಗದೀಶ್ ಕೊಪ್ಪ

**ಪುಟ : 28 + ೨೮೪ = ೩೧೨** **ಬೆಲೆ : ರೂ. ೧೬೦**

**ಸಿಂಚನ ಗ್ರಂಥಮಾಲೆ,** 'ಸಾಯಿ ನಿಲಯ' ಅಶ್ವಿನಿ ನಗರ, ಹಾವೇರಿ - ೫೮೧ ೧೧೦

ಬಹಳಷ್ಟು ಪತ್ರಿಕಾ ವರದಿಗಳು, ಆಧಾರಗ್ರಂಥಗಳು ಮತ್ತು ಲೇಖನಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿರುವ ಈ ಪ್ರೌಢ ಮಹಾಪ್ರಬಂಧ ಇಂದಿಗೆ ಅತಿ ಅಗತ್ಯವಾದ ಮಾಹಿತಿಗಳ ಸಂಗ್ರಹವಾಗಿದೆ. ಜಾಗತೀಕರಣ ಮತ್ತು ಉದಾರೀಕರಣಗಳು ಕೆಲವು ರಾಷ್ಟ್ರಗಳ ಪಾಲಿಗಂತೂ ಹುಲಿಯ ಸವಾರಿಯಂತಾಗಿ ಕೆಳಗಿಳಿಯಲು ಸಾಧ್ಯವಿಲ್ಲದಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಉಳ್ಳವರಿಗೆ ಇನ್ನಷ್ಟು ಬಾಚಿಕೊಳ್ಳುವ ಅವಕಾಶದಿಂದಾಗಿ ಬಡ ಬೋರೇಗೌಡನನ್ನು ಗುರುತೇ ಹಿಡಿಯುವವರಿಲ್ಲವಾಗಿದೆ. ಇಲ್ಲಿ ತಿಳಿಸಿರುವ ಸಂಗತಿಗಳು ಪ್ರಪಂಚದ ಎಲ್ಲ ರಾಷ್ಟ್ರಗಳನ್ನು ಗಮನದಲ್ಲಿಟ್ಟು ಅನೇಕ ಅಂಕಿಅಂಶಗಳನ್ನು ಪ್ರಸ್ತುತಪಡಿಸಿವೆ.

## ಬಾಚಿಗೊಂಡನಹಳ್ಳಿ ಗೌಡರ ಕಟ್ಟೆ ಪಂಚಾಯತಿಗಳು

ಎನ್. ಎಮ್. ಕೊಟ್ರೇಶ್

**ಪುಟ : xx + ೧೪೨** **ಬೆಲೆ : ರೂ. ೪೦**

**ಕುವೆಂಪು ಗ್ರಂಥಾಲಯ ಬಳಗ,** ಬಾಚಿಗೊಂಡನಹಳ್ಳಿ, ಹ.ಬೊ.ಹಳ್ಳಿ (ತಾ) ಬಳ್ಳಾರಿ (ಜಿ)

ಒಂದೆರಡು ತಲೆಮಾರುಗಳ ಹಿಂದೆ ಹಳ್ಳಿಯ ಜಗಳ-ವ್ಯಾಜ್ಯಗಳು ಇಂದಿನಂತೆ ನ್ಯಾಯಾಲಯದ ಕಟ್ಟೆ ಹತ್ತುತ್ತಿರಲಿಲ್ಲ. ಊರಿನ ಯೋಗ್ಯ ವ್ಯಕ್ತಿತ್ವದ ಪ್ರಮುಖರೊಬ್ಬರು ಎಲ್ಲ ಊರಿನ ಹಿರಿಯರನ್ನು ವಿಶ್ವಾಸಕ್ಕೆ ತೆಗೆದುಕೊಂಡು ನ್ಯಾಯ ಬಗೆಹರಿಸುತ್ತಿದ್ದರು. ಇದನ್ನು ಕಟ್ಟೆ ಪಂಚಾಯ್ತಿ ನ್ಯಾಯ ತೀರ್ಮಾನ ಎನ್ನುತ್ತಿದ್ದರು. ಬಾಚಿಗೊಂಡನಹಳ್ಳಿಯ ಗೌಡರ ಮನೆತನದ ಮೂರು ತಲೆಮಾರಿನ ಹಿರಿಯರು ಜನರಿಗೆ ನ್ಯಾಯದಾನ ಮಾಡಿದ ವಿವರಗಳು ಈ ಪುಸ್ತಕನಲ್ಲಿವೆ. ಯಾವುದೇ ಪ್ರಲೋಭನೆಯಿಲ್ಲದೆ ನೀಡಿದ ಕೆಲವು ನ್ಯಾಯಪಂಚಾಯತಿ ವಿವರಗಳನ್ನು ಗೌಡರ ಮನೆತನಕ್ಕೆ ಸಮೀಪವರ್ತಿಯಾಗಿದ್ದ ಶ್ರೀ ಕೊಟ್ರೇಶ್ ಇಲ್ಲಿ ದಾಖಲಿಸಿದ್ದಾರೆ.

## ಸ್ವಾತಂತ್ರ್ಯದೆಡೆಗೆ ನಿಲ್ಲದ ನಡಿಗೆ

ಕರ್ನಾಟಕ ಜನಪರ ವೇದಿಕೆ

**ಪುಟ : viii + ೧೧೧** **ಬೆಲೆ : ರೂ. ೩೦**

**ರಾಜ್ಯ ಸಮಿತಿ,** ಕರ್ನಾಟಕ ಜನಪರ ವೇದಿಕೆ, ವಿವೇಕಾನಂದ ರಸ್ತೆ, ಅಶೋಕನಗರ, ಮಂಡ್ಯ,

ತ್ಯಾಗ ಬಲಿದಾನಗಳಿಂದ ನಮ್ಮ ಹಿರಿಯರು ಹೋರಾಡಿ ಪಡೆದ ಈ ಸ್ವಾತಂತ್ರ್ಯವನ್ನು ನಾವು ಸಮರ್ಥವಾಗಿ ಬಳಸಿಕೊಂಡಿಲ್ಲ. ನಾವು ಎಲ್ಲಿಯೋ ಹೆಜ್ಜೆತಪ್ಪಿ ನಡೆಯುತ್ತಿದ್ದೇವೆಂಬ ಕಳಕಳಿಯಿಂದ ಕರ್ನಾಟಕ ಜನಪರ ವೇದಿಕೆ 'ಹಳೆಬೇರು ಹೊಸ ಚಿಗುರು' ಎಂಬ ಕಾರ್ಯಕ್ರಮವೊಂದನ್ನು ಯೋಜಿಸಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ಸಂವಾದ-ಸಂದರ್ಶನವೇರ್ಪಡಿಸಿತು. ಬನ್ನಿ, ಇಂದಿನ ವ್ಯವಸ್ಥೆಯ ಬಗ್ಗೆ ಅವರ ಅನಿಸಿಕೆಗಳೇನು ? ಅವರು ಕನಸು ಕಂಡ ಭಾರತ ನಿರ್ಮಾಣವಾಗಿದೆಯೇ ? ಚುನಾವಣೆಗಳನ್ನು 'ಮಹಾಸಮರ'ವೆಂದು ಹೇಳಿಕೊಳ್ಳಬೇಕಾದ ಅನಿವಾರ್ಯತೆ ನಮಗೇಕೆ ಬಂತು ? ಹಣ ಬಲ, ತೋಳ್ಬಲ ಇರುವವರು ಚುನಾಯಿತರಾದರೆ ಗತಿ ಏನು ? ಹಿರಿಯರ ಸಂದೇಶಗಳೇನೆಂದು ಈ ಪುಸ್ತಕದಿಂದ ತಿಳಿಯೋಣ.

## ಸುವರ್ಣ ಕರ್ನಾಟಕ

## ಶಾಲಾ ಮಕ್ಕಳ ನಾಟಕಗಳು (ಎಂಟು ಸಂಪುಟಗಳು)

ಸಂಪಾದಕರು : ಡಾ|| ಬಿ. ವಿ. ರಾಜಾರಾಂ

**ಒಟ್ಟು ಪುಟಗಳು : ೧೯೦೦** **ಬಿಡಿ ಪ್ರತಿ ಬೆಲೆ ರೂ. ೮೦**

**ಸಂಪಾದಕರು, ಡಾ|| ಬಿ. ವಿ. ರಾಜಾರಾಂ,** ೨೬೩, ''ಸಂಸ'', ೧೨ನೇ 'ಎ' ಮುಖ್ಯರಸ್ತೆ, ೬ನೇ ಬಡಾವಣೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷ ಬಿ. ವಿ. ರಾಜಾರಾಂ ಸಂಪಾದಕತ್ವದಲ್ಲಿ ಪುಟ್ಟ ಮಕ್ಕಳಿಗಾಗಿ ಅಭಿನಯಿಸಲು ಐವತ್ತು ನಾಟಕಗಳು ಎಂಟು ಸಂಪುಟಗಳಲ್ಲಿ ಸಂಗ್ರಹಿಸಲ್ಪಟ್ಟಿವೆ. ಉತ್ತಮ ಮೌಲ್ಯಗಳು ಎಳೆಯರ ಮನಸ್ಸಿನಲ್ಲಿ ಬೇರೂರಬಹುದಾದಂಥ ನೀತಿಪ್ರಧಾನವಾದ ಈ ನಾಟಕಗಳನ್ನು ನಾಡಿನ ಪ್ರಸಿದ್ಧ ಲೇಖಕರು ಬರೆದುಕೊಟ್ಟಿದ್ದಾರೆ. ಮನರಂಜನೆಯ ದೃಷ್ಟಿಯಿಂದಲೂ, ಬೌದ್ಧಿಕ ಬೆಳವಣಿಗೆಯ ಕಾರಣಕ್ಕೂ ಇವನ್ನು ಮಕ್ಕಳಿಂದಲೇ ಅಭಿನಯಿಸಿ ಪ್ರಯೋಗಿಸಿದರೆ ಪರಿಣಾಮ ತುಂಬ ಚೆನ್ನಾಗಿರಬಹುದು. ಸಮಕಾಲೀನ ವಸ್ತು ವೈವಿಧ್ಯವಿದ್ದು ವಿಚಾರಪ್ರಚೋದಕ ವಿಷಯಗಳಿವೆ.

## ವರ್ಣಾವರ್ಣ (ಕಥಾ ಸಂಕಲನ)

ಎಸ್. ಆರ್. ಗುರುನಾಥ್

**ಪುಟ : xviii + ೧೪೨** **ಬೆಲೆ : ರೂ. ೮೦**

**ಅಪೂರ್ವ ಪ್ರಕಾಶನ,** ಸಿಂಗಾಪುರ - ೫೭೭ ೫೫೫ ಚಿತ್ರದುರ್ಗ ಜಿಲ್ಲೆ

ಈ ಕಥೆಗಳನ್ನು ಬರೆದ ಲೇಖಕರಿಗೆ ದಲಿತ ಸಮುದಾಯದ ಸ್ಥಿತಿ ಗತಿಗಳು, ಅವರ ಬವಣೆಗಳನ್ನು ಜನರಿಗೆ ತಲುಪಿಸುವ ಸಾಮಾಜಿಕ ಕಳಕಳಿ ಮತ್ತು ಹೊಣೆ ಇರುವುದು ವ್ಯಕ್ತವಾಗುತ್ತದೆ. ಕಥಾರೂಪದಲ್ಲಿ ಬರೆಯಲ್ಪಟ್ಟರೂ ಕೆಳವರ್ಗದ ಜನರು ಇಂದು ಅನುಭವಿಸುತ್ತಿರುವ ನಾನಾತರದ ಹಿಂಸೆ ಅವಮಾನಗಳು ಅವರ ನಿಜ ಬದುಕಿನ ಚಿತ್ರಣದಂತೆಯೇ ಇವೆ. ಇವು ಕಥಾರೂಪದ ವಾಸ್ತವಗಳು. ಗ್ರಾಮೀಣ ಪ್ರದೇಶಗಳಲ್ಲಿ ಅವಿದ್ಯಾವಂತ ಜನರು ಇದನ್ನು ಸಹಿಸಿಕೊಂಡು ದಾರುಣ ಬಾಳು ನಡೆಸುತ್ತಿರುವುದು ಸತ್ಯ. ಒಂದು ಸಮಗ್ರ ಕೆಳವರ್ಗದ ಜನ ಜೀವನದ ಚಿತ್ರಣವನ್ನು ಈ ಕಥೆಗಳು ಕೊಡುತ್ತವೆ. ಎಲ್ಲ ಕಥೆಗಳಲ್ಲೂ ಪಾತ್ರಗಳು ತಮ್ಮ ತೂಕವನ್ನು ಉಳಿಸಿಕೊಂಡಿವೆ.

– ಇಂದಿರಾಕುಮಾರಿ
೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ
ಯಶವಂತಪುರ, ಬೆಂಗಳೂರು - ೫೬೦ ೦೨೨




# ದುಡಿಯುವ ಜನರ ದಿನ



ಕೈಗಾರಿಕಾ ಕ್ರಾಂತಿಯ ಫಲವನ್ನು ಅನೇಕ ರೀತಿಯಿಂದ ನಾವು ಅನುಭವಿಸುತ್ತಿದ್ದೇವೆ. ನಿಸರ್ಗದಲ್ಲಿ ಲಭ್ಯವಿರುವ ಕಚ್ಚಾ ಸಾಮಗ್ರಿಯನ್ನು ಯಾವ ಸಂಸ್ಕರಣವೂ ಇಲ್ಲದೆ ಆದಿಮಾನವ ಬಳಕೆ ಮಾಡುತ್ತಿದ್ದ ಕಾಲ ಒಂದಿತ್ತು. ಈಗ ಅದಕ್ಕೆ ತದ್ವಿರುದ್ಧವಾದ ಸಂದರ್ಭ ರೂಪುಗೊಂಡಿದೆ. ನಾವು ಬಳಸುವ ಗ್ರಾಹಕ ಸಾಮಗ್ರಿಗಳೆಲ್ಲವೂ ಮಾನವರಿಂದ ಹಾಗೂ ಯಂತ್ರಗಳಿಂದ ಸಂಸ್ಕರಣೆಗೊಂಡವೇ. ಉತ್ಪಾದಕ ಸಂಸ್ಥೆಗಳು, ಆ ಸಂಸ್ಥೆಯಲ್ಲಿ ದುಡಿಯುವ ಶ್ರಮಿಕರು, ಸಾಗಣೆದಾರರು, ವ್ಯಾಪಾರಗಾರರು ಎಲ್ಲರ ದುಡಿಮೆಯ ಸ್ಪರ್ಶ ಪಡೆದ ಮೇಲೆಯೇ ಆ ವಸ್ತುಗಳು ಬಳಕೆದಾರರ ಕೈ ಸೇರುವುದು. ನಿಸರ್ಗದಲ್ಲಿ ತಂತಾನೆ ಬೆಳೆಯುವ ಮಾವಿನಹಣ್ಣನ್ನು ನಾವು ತಿನ್ನುವುದು ಹೋಗಲಿ, ತೋಟದಲ್ಲಿ ಬೆಳೆದ ಹಣ್ಣನ್ನೂ ನೇರವಾಗಿ ತಿನ್ನುವಂತಿಲ್ಲ. (ತೋಟದಲ್ಲಿ ಬೆಳೆಯುವಾಗಲೂ ರಸಗೊಬ್ಬರ, ಕೀಟನಾಶಕಗಳಂತಹ ಅನೇಕ ಸಾಮಗ್ರಿಗಳ ಬಳಕೆ ಅನಿವಾರ್ಯ). ಇದರೊಂದಿಗೆ ತೋಟದಲ್ಲಿ ಬೆಳೆದ ಹಣ್ಣು ರಸ ಉತ್ಪಾದನೆ ಘಟಕಕ್ಕೆ ಹೋಗಿ ಪೇಯವಾಗಿ ರೂಪುಗೊಂಡು ಪ್ಯಾಕೆಟ್‌ಗಳಲ್ಲಿ ಮಾರಾಟವಾಗಬೇಕು.

ಗ್ರಾಹಕರಾಗಿ ನಾವು ಹೆಚ್ಚು ಹೆಚ್ಚು ಹಣ ಗಳಿಸಿ ಅತಿ ಹೆಚ್ಚು ಗ್ರಾಹಕ ಸಾಮಗ್ರಿಗಳ ಬಳಕೆದಾರರಾಗುವ ಮೂಲಕ ಸಾಮಾಜಿಕ ಅಂತಸ್ತನ್ನು ಹೆಚ್ಚಿಸಿಕೊಳ್ಳುವಲ್ಲಿ ನಿರಂತರ ದುಡಿಮೆಯಲ್ಲಿ ಮೈಮರೆತಿದ್ದೇವೆ. ಬೆಳಗಿನಿಂದ ಸಂಜೆವರೆಗೆ ಬಳಕೆ ಮಾಡುವ ಗ್ರಾಹಕ ಸಾಮಗ್ರಿಯ ಮೂಲಕ ಅದೆಷ್ಟು ಜನರ ಬೆವರಸುರಿಕೆ ದುಡಿಮೆಯನ್ನು ನಾವು ಕಬಳಿಸುತ್ತಿದ್ದೇವೆ! ಅವರಿಗೆ ಪ್ರೋತ್ಸಾಹವನ್ನಾಗಲಿ, ಕೃತಜ್ಞತೆಯನ್ನಾಗಲಿ ಸಲ್ಲಿಸಲು ಪ್ರಯತ್ನಿಸುವುದೂ ಇಲ್ಲ. ಈ ಸ್ವೀಕರಣೆಗೆ ಪ್ರತಿಯಾಗಿ ನಾವು ಹಿಂದಿರುಗಿಸಿ ನೀಡುತ್ತಿರುವುದೇನೆಂಬ ಕೊರಗೂ ನಮಗಿಲ್ಲ. ಈ ಕುರಿತಂತೆ ನಮ್ಮ ಬಳಿ ಕುರುಡು ಸಮರ್ಥನೆ ಮಾತ್ರ ಇದೆ. ಅವು ಮುಖ್ಯವಾಗಿ ಎರಡು : (ಅ) ನಾವು ಅವರಿಗೆ ಕೃತಜ್ಞತೆ ಸಲ್ಲಿಸಬೇಕಾದ ಅಗತ್ಯವೇ ಇಲ್ಲ; ಏಕೆಂದರೆ ಅವರಿಗೆ ಈಗಾಗಲೆ ವೇತನ ನೀಡಲಾಗಿದೆ, ಮತ್ತು (ಆ) ಹಾಗೆ ಕೃತಜ್ಞತೆ ಸಲ್ಲಿಸಬೇಕೆಂದು ಅನಿಸಿದರೂ, ಯಾರಿಗೆ ಹೇಗೆ ಸಲ್ಲಿಸಬೇಕೆಂಬ ಬಗೆಗೆ ತಿಳಿಯದೆ ಇರುವುದರಿಂದ ಹಾಗೆ ಚಿಂತಿಸುವುದು ವ್ಯರ್ಥ.

ಒಮ್ಮೆ ಆಲೋಚಿಸೋಣ, ಈ ಪೂರೈಕೆಯ ಪ್ರಕ್ರಿಯೆದಾರರು ಯಾರೂ ಸ್ವಇಚ್ಛೆಯಿಂದ ದುಡಿದಿಲ್ಲ. ಅವರಿಗೆ ನೀಡುವ ವೇತನ ಕಡಿಮೆ ಇದ್ದರೂ ಬದುಕಿ ಉಳಿವ ಸಲುವಾಗಿ ದುಡಿದವರೇ ಬಹಳ ಮಂದಿ. ಏನೂ ಪರಿಶ್ರಮವಿಲ್ಲದೆ ಹೆಚ್ಚುಗಳಿಸುವ ಕೆಲವೇ ಮಂದಿಯ ನಡುವೆ, ತಮ್ಮ ಅಸಹಾಯಕತೆಯ ನಿಟ್ಟುಸಿರಲ್ಲಿ ಬೇಯುತ್ತಾ ಪರಿಶ್ರಮ ಪಡುವವರೇ ಬಹುಸಂಖ್ಯಾತ ದುಡಿಯುವ ಜನ. ಅವರನ್ನು ವರ್ಷಕ್ಕೊಮ್ಮೆ ನೆನೆಸಿಕೊಳ್ಳುವುದು ಕೇವಲ ಒಂದು ಸಂಪ್ರದಾಯವಲ್ಲ.

ಕೈಗಾರಿಕೀಕರಣದಿಂದಾಗಿ ಮಾನವರ ದೈಹಿಕಶ್ರಮ ಕಡಿಮೆ ಆಗಿದೆಯಾದ ಕಾರಣ ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ದುಡಿಯುವವರು ಕೃತಜ್ಞರಾಗಿರಬೇಕು ಎಂದು ವಾದ ಮಾಡುವ 'ಅಜ್ಞತಜ್ಞ'ರೂ ನಮ್ಮಲ್ಲಿ ಅನೇಕರುಂಟು. ಯಂತ್ರದಿಂದ ಮಾನವರ ಶ್ರಮ ಕಡಿಮೆಯಾಯಿತೆಂಬುದು ಆಂಶಿಕ ಸತ್ಯ ಮಾತ್ರ. ಆ ಯಂತ್ರ ತಯಾರಿಸಲು ಬೇಕಾದ ಗಣಿಗಾರಿಕೆ, ಲೋಹೋದ್ಧರಣಗಳಿಗೆ ಮಾನವ ಪರಿಶ್ರಮ ಮೊದಲಿಗಿಂತಲೂ ಹೆಚ್ಚು ಬಳಕೆ ಆಗತೊಡಗಿದ್ದೂ ನಿಜ. ಲೋಹವನ್ನು ಯಂತ್ರವಾಗಿಸುವ, ಯಂತ್ರವನ್ನು ಸಾಗಿಸುವ, ಕಚ್ಚಾ ಸಾಮಗ್ರಿಯನ್ನು ಕಾರ್ಖಾನೆಗೆ ಒದಗಿಸುವ, ಉತ್ಪನ್ನವನ್ನು ಮಾರುಕಟ್ಟೆಗೆ ಸಾಗಿಸುವ ಎಲ್ಲ ಕೆಲಸಗಳಲ್ಲೂ ಹೆಚ್ಚು ಹೆಚ್ಚು ಜನರು ಕೇವಲ ಹೊಟ್ಟೆಹೊರೆದುಕೊಳ್ಳುವ ಅನಿವಾರ್ಯಕ್ಕೆ ಒಳಗಾದವರಲ್ಲವೆ ? ಅದೂ ಅಲ್ಲದೆ ಯಂತ್ರಬಳಕೆಯ ಕಾರಣದಿಂದಾಗಿ ಕಡಿಮೆ ಶ್ರಮದ ನೆಪವೊಡ್ಡಿ ಕೆಲಸದ ವೇಳೆಯನ್ನು ಅಧಿಕಗೊಳಿಸಿದ್ದು, ವೇಳೆ ಮೀರಿದ ದುಡಿಮೆ ಕೈಗೊಳ್ಳಬೇಕಾದ ಆಮಿಷ ಒಡ್ಡಿದ್ದು ಎಲ್ಲರಿಗೂ ತಿಳಿದ ಸಂಗತಿಯೇ ಆಗಿದೆ.

ಒಬ್ಬ ಚಾಲಕನ ಬದುಕನ್ನೇ ತೆಗೆದುಕೊಳ್ಳಿ : ಆತ ಸಾಮಗ್ರಿಯ ಸಾಗಣೆಗೆ ದೂರದೂರಿಗೆ ಹೋಗಬೇಕಾದಾಗ ತನ್ನ ಕುಟುಂಬದ ಸದಸ್ಯರಿಂದ ದೂರ ಉಳಿಯಬೇಕು. ಅಪರಿಚಿತ ಜನರ ನಡುವೆ ಬಾಳುವೆ ಮಾಡಬೇಕು. ಊಟ ವಸತಿಗೆ ಪರದಾಡಬೇಕು. ಈ ಕೊರತೆಗಳ ನಡುವೆಯೇ ಅವನ ಬಾಳುವೆ. ಈ ಕೊರತೆಗಳೆಲ್ಲವಕ್ಕೂ ಅವನಿಗೆ ಕೊಡುವ ಸಂಬಳ ಪರಿಹಾರವಲ್ಲ.

ಈ ಕುರಿತಂತೆ ಭಾಷಿಕ ಆಧಾರವೂ ಇದೆ. ತನ್ನ ಹುಟ್ಟಿದ ಊರಿನ ಮನೆಯನ್ನು ಸ್ವಂತದ ಮನೆ ಎಂದೂ ತಾನು ದುಡಿಯುವ ಸಲುವಾಗಿ ತಾತ್ಕಾಲಿಕ ವಸತಿಯನ್ನು ಸದ್ಯದ ಮನೆ ಎಂದೂ ಬಳಕೆಮಾಡುವುದು ವಾಡಿಕೆ.

ಪರಿಚಿತ ನೆಲೆಯೂರಿನಿಂದ ಹೊರಬಂದು ಅಪರಿಚಿತ ನಾಡಿನ ಅಪರಿಚಿತ ವ್ಯಕ್ತಿಗಳ ನಡುವೆ ಬಾಳುವಾಗ ಆಗುವ ಸಾಂಸ್ಕೃತಿಕ ಆಘಾತ ಹಾಗೂ ಸಂಘರ್ಷಗಳೆಲ್ಲವನ್ನೂ ಊಹಿಸಿಕೊಳ್ಳಿ. ಈಗಂತೂ ದೇಶದಿಂದ ದೇಶಕ್ಕೆ ವಲಸೆ ಹೋದಾಗ ಜನರು ಅನುಭವಿಸುವ ಭೋಗಜೀವನ ಕುರಿತು ವರ್ಣರಂಜಿತವಾಗಿ ಕಲ್ಪಿಸಿಕೊಳ್ಳುವ ನಾವು ಅವರು ಕಳೆದುಕೊಳ್ಳುವ ನೆಮ್ಮದಿಯನ್ನು, ಎದುರಿಸುವ ಸಂಘರ್ಷವನ್ನು ಕಲ್ಪಿಸಿಕೊಳ್ಳುವುದೇ ಇಲ್ಲ. ತ್ಯಾಗ, ಬಲಿದಾನಗಳನ್ನು ಕೆಲವೊಮ್ಮೆ ಸ್ವಇಚ್ಛೆಯಿಂದ, ಕೆಲವೊಮ್ಮೆ ಇತರರ ಒತ್ತಡಕ್ಕೆ ಸಿಲುಕಿ, ಕೆಲವೊಮ್ಮೆ ಅನಿವಾರ್ಯವಾಗಿ, ಕೆಲವೊಮ್ಮೆ ಅನಿರೀಕ್ಷಿತವಾಗಿ ಎದುರಿಸಿದ ದುಡಿತಕ್ಕೆ ಮುಡಿಪಾದ ಸಹೋದರ ಸಹೋದರಿಯರಿಗೆ ಸಹಾನುಭೂತಿಪರ ಸಲಾಮುಗಳು.

ಕನ್ನಡದಲ್ಲಿ ಒಂದು ಹೀನಾಯಕಾರಿ ಗಾದೆಯಿದೆ: ''ನಾಯಿ ಸೇವೆ ಮಾಡಿದರೆ ತಾಯಿ ಎನ್ನಿಸಿಕೊಂಡೀತೆ ?'' ಎಂಬುದು ಆ ಗಾದೆ. ತಾಯಿ ಎನಿಸಿಕೊಳ್ಳದೆ ಹೋದರೂ ಅಡ್ಡಿಯಿಲ್ಲ, ನಾಯಿ ಎಂದು ಹೀನಾಯಿಗಳಾಗಿ ಬದುಕುವಂತೆ ಮಾಡಿದ ನಮ್ಮ 'ಸಭ್ಯ ಸಂಸ್ಕೃತಿ' – ಹೇಯವೆನಿಸದೆ ಇರದು.

**ಪ್ರೊ|| ಎಮ್. ಆರ್. ನಾಗರಾಜು**

ಎಫ್-೩, ಎಸ್.ಎಫ್.ಎಸ್ ನಿವಾಸಗಳು, ೭ನೇ ಬಿ. ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು – ೫೬೦ ೦೬೪

## ಚಿತ್ರಕಲಾ ಮಾಲಿಕೆಯ ಕೃತಿಗಳು
## 08-05-2009ರಂದು ಬೆಳಗ್ಗೆ 11 ಗಂಟೆಗೆ
## ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಅನಾವರಣ




ಬೆಲೆ : ರೂ. 50




ಬೆಲೆ : ರೂ. 40




ಬೆಲೆ : ರೂ. 40




ಬೆಲೆ : ರೂ. 40

ಬಹಳ ಸರಳವಾಗಿ ಚಿತ್ರ ಬಿಡಿಸುವ
ತಂತ್ರಗಳನ್ನು ತಿಳಿಸಿಕೊಡುವ
ಉಪಯುಕ್ತ ಪುಸ್ತಕಗಳು

## ಚಿತ್ರಕಲಾಸಕ್ತರಿಗೆ ಬಹಳ ಪ್ರಯೋಜನಕಾರಿ ಪುಸ್ತಕಗಳು




ಬೆಲೆ : ರೂ. 225




ಬೆಲೆ : ರೂ. 110

**'ಹೊಸತು' 3 ವರ್ಷದ ಚಂದಾದಾರರಿಗೆ 20% ರಿಯಾಯಿತಿ.**
**ಅಂಚೆ ವೆಚ್ಚ ರೂ. 20/- ಪ್ರತ್ಯೇಕ**

ನಿಮ್ಮ ಪ್ರತಿಗಳಿಗೆ ನಿಮ್ಮ ಊರಿನ ಪುಸ್ತಕದಂಗಡಿಗಳಲ್ಲಿ ವಿಚಾರಿಸಿ ಇಲ್ಲವೇ ನಮಗೆ ಬರೆಯಿರಿ




ಚಿನ್ನದ ಸಂಭ್ರಮ ೧೯೬೦-೨೦೧೦

# ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
✆ : 22203580, 30578022 e-mail: navakarnataka@dataone.in web : www.navakarnataka.com, blogspot : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /MAY 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.